


# ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳು

## (ಸಾಮಾಜಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕ
ಕೆ. ನಾರಾಯಣಸ್ವಾಮಿ

ಮಾರ್ಗದರ್ಶಕರು
ಡಾ. ಕೆ.ವಿ.ನಾರಾಯಣ
ಪ್ರಾಧ್ಯಾಪಕರು





ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭





# ಕೋಲಾರ ಜಿಲ್ಲೆಯ
# ದ್ವಿಭಾಷಿಕತೆಯ ನೆಲೆಗಳು
## (ಸಾಮಾಜಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ
ಕೆ. ನಾರಾಯಣಸ್ವಾಮಿ



ಮಾರ್ಗದರ್ಶಕರು
ಡಾ. ಕೆ.ವಿ.ನಾರಾಯಣ
ಪ್ರಾಧ್ಯಾಪಕರು



ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಶ್ರೀ ಕೆ. ನಾರಾಯಣಸ್ವಾಮಿ ಇವರು '**ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳು**' (ಸಾಮಾಜಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.ಕನ್ನಡ ವಿಶ್ವವಿದ್ಯಾಲಯ,ಹಂಪಿ.ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್. ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ

ದಿನಾಂಕಃ .೦೩.೨೦೦೭
ಸ್ಥಳ ವಿದ್ಯಾರಣ್ಯ

( ಡಾ ಕೆ ವಿ ನಾರಾಯಣ )
ಮಾರ್ಗದರ್ಶಕರು
ಪ್ರಾಧ್ಯಾಪಕರು, ಕನ್ನಡ ಭಾಷಾಧ್ಯಯನವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ ೫೮೩ ೨೭೬

## ಸಂಶೋಧಕರ ಪ್ರಮಾಣ ಪತ್ರ

ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳು (ಸಾಮಾಜಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ) ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ಡಾ.ಕೆ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕೆ.ನಾರಾಯಣಸ್ವಾಮಿ
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೯.೦೩.೨೦೦೭
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕರ್ನಾಟಕದಲ್ಲೇ ಅತಿಹೆಚ್ಚಿನ ತೆಲುಗು ಭಾಷಿಕರಿರುವ ಕೋಲಾರದಲ್ಲಿ ಹುಟ್ಟಿದ ನಾನು ಬೆಳೆದದ್ದು ಅಲ್ಲಿನ ಕನ್ನಡ-ತೆಲುಗು, 'ಸಹಜ ದ್ವಿಭಾಷಿಕ' ಪರಿಸರದಲ್ಲಿ. ಎಂ.ಎ.ಮಾಡಿದ್ದು ತೌಲನಿಕ ಅಧ್ಯಯನದಲ್ಲಾದರೂ ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಳ್ಳಲು ಕಾರಣವಾದ ಸಂದರ್ಭವೇ ಬೇರೆಯದು. ಪದವಿ ತರಗತಿಗಳಿಗೆ ಭಾಷಾ ವಿಜ್ಞಾನವನ್ನು ಬೋಧಿಸುವ ಸಂದರ್ಭದಲ್ಲಿ ಈ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಳ್ಳುವ ಆಸಕ್ತಿ ಉಂಟಾಯಿತು. ಮುಖ್ಯವಾಗಿ ವಿದ್ಯಾರ್ಥಿ ದೆಸೆಯಲ್ಲಿ ಭಾಷಾ ವಿಜ್ಞಾನದಲ್ಲಿ ಹೆಚ್ಚಿನ ಕುತೂಹಲ ಕೆರಳಲು ಕಾರಣರಾದ ಪ್ರೀತಿಯ ಗುರುಗಳೂ, ಮಾರ್ಗದರ್ಶಕರೂ ಆದ ಪ್ರೊ.ಕೆ.ವಿ.ನಾರಾಯಣ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

೨೦೦೨ರಲ್ಲಿ ಪಿಎಚ್.ಡಿ.ಅಧ್ಯಯನಕ್ಕೆ ಅವಕಾಶ ಕಲ್ಪಿಸಿ ಸಹಕರಿಸಿದ ಅಂದಿನ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡರಿಗೆ, ಕಾರಣಾಂತರಗಳಿಂದ ತಡವಾದ ಬರವಣಿಗೆ ಕಾರ್ಯವನ್ನು ಮುಗಿಸಲು ವಿಸ್ತರಣೆ ನೀಡಿ ಉಪಕರಿಸಿದ ಇಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನ ಸಂದರ್ಭದಲ್ಲಿ ಅನೇಕ ಸಲಹೆ-ಸಹಕಾರ ನೀಡಿದ ಪ್ರೊ.ಕಿ.ರಂ.ನಾಗರಾಜ, ಪ್ರೊ.ಕೆ.ಪಿ.ಭಟ್ ಅವರುಗಳಿಗೆ ಹಾಗೂ ಸಂಶೋಧನೆಯನ್ನು ಬೇಗ ಮುಗಿಸಲು ಪ್ರೀತಿಯ ಒತ್ತಡವನ್ನು ಹೇರಿದ ಪ್ರಸಾರಾಂಗದ ನಿರ್ದೇಶಕರಾದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಪ್ರೊ.ಕರೀಗೌಡ ಬೀಚನಹಳ್ಳಿ, ಪ್ರೊ.ಎನ್.ನರಹರಿ, ಪ್ರೊ.ಎಂ.ನಾರಾಯಣಸ್ವಾಮಿ ಅವರುಗಳಿಗೆ,

ಪ್ರಾರಂಭದಿಂದಲೂ ಸಂಶೋಧನೆಗೆ ಬೆನ್ನುಲುಬಾಗಿ ನಿಂತ ಆಶಾ ಸಿ.ವೆಂಕಟೇಶ್, ಭಾಗ್ಯಲಕ್ಷ್ಮೀ ಅಶೋಕ ರಂಜೇರೆ ದಂಪತಿಗಳಿಗೆ, ಮುಖ್ಯವಾಗಿ ಭಾಷಾಧ್ಯಯನ ವಿಭಾಗದ ಹಿರಿಯಣ್ಣ ಡಾ.ಡಿ. ಪಾಂಡುರಂಗಬಾಬು, ಡಾ.ಪಿ.ಮಹಾದೇವಯ್ಯ, ಡಾ.ಸಾಂಬಮೂರ್ತಿ ಹಾಗೂ ವೀರೇಶ್ ಅವರಿಗೆ,

ತೆಲುಗು-ಕನ್ನಡ ಪದಕೋಶದ ಅರ್ಥ ವಿವರಣೆ ಸಂದರ್ಭದಲ್ಲಿ ಸಲಹೆ-ಸಹಕಾರ ನೀಡಿದ ಹಿರಿಯಣ್ಣ ಸ.ರಘುನಾಥ ಹಾಗೂ ಪ್ರೊ.ಎನ್.ವಿ.ವೆಂಕಟಶಿವಾರೆಡ್ಡಿ ಅವರಿಗೆ, ಸಂಶೋಧನೆ ಬೇಗನೆ ಮುಗಿಸುವಂತೆ ಮೇಲಿಂದ ಮೇಲೆ ಪ್ರೀತಿಯ ಒತ್ತಾಯ ಹೇರುತ್ತಿದ್ದ ಗೆಳೆಯರಾದ ಡಾ.ಜಿ.ರವಿ, ರಾಜಪ್ಪದಳವಾಯಿ, ಡಾ.ಕಾ.ವೆಂ.ಶ್ರೀನಿವಾಸಮೂರ್ತಿ, ಡಾ.ಬಿ.ಗಂಗಾಧರ, ಸಿ.ಎನ್.ಗೋವಿಂದಪ್ಪ, ಕೆ.ಸಿ.ಕೃಷ್ಣಪ್ಪ ಅವರುಗಳಿಗೆ,

ಅಧ್ಯಯನದ ಅವಧಿಯಲ್ಲಿ ಸಹಕರಿಸಿದ ಅಧ್ಯಯನಾಂಗ, ಆಡಳಿತಾಂಗ, ಪ್ರಸಾರಾಂಗದ ಎಲ್ಲಾ ಸಿಬ್ಬಂದಿ ವರ್ಗದವರಿಗೆ, ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಕರಿಸಿದ ಜಿಲ್ಲೆಯ ಎಲ್ಲ ಮಹನೀಯರಿಗೆ,

ಎಷ್ಟೇ ಕೌಟುಂಬಿಕ ಒತ್ತಡಗಳಿದ್ದರೂ, ನನ್ನ ನಿರಂತರ ವಿದ್ಯಾಭ್ಯಾಸದ ಬೆಳವಣಿಗೆಗೆ ಕಾರಣರಾದ ಸಹೋದರಿ ರಾಧಿಕಾ, ತಾಯಿ ಮುನಿವೆಂಕಟಮ್ಮ, ಅಣ್ಣ ತಿಮ್ಮಯ್ಯ ಅವರುಗಳಿಗೆ,

ಒತ್ತಡದ ಪರಿಸ್ಥಿತಿಯಲ್ಲಿ ಅಚ್ಚುಕಟ್ಟಾಗಿ ಅಕ್ಷರ ಸಂಯೋಜಿಸಿದ ಎ.ಎಂ.ಕೃಪಾಶಂಕರ್ ಅವರಿಗೆ

*ಪ್ರೀತಿಯ ಕೃತಜ್ಞತೆಗಳು.*

**ಕೆ. ನಾರಾಯಣಸ್ವಾಮಿ**

# ಪರಿವಿಡಿ

೧

# ದ್ವಿಭಾಷಿಕತೆಯ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಭಾರತ ಬಹುಮುಖಿ ಸಂಸ್ಕೃತಿಯ, ಬಹುಭಾಷಿಕ ಪರಿಸರದ ಭಿನ್ನತೆಯಲ್ಲಿ ಏಕತೆಯನ್ನು ಕಂಡುಕೊಂಡ ದೊಡ್ಡ ದೇಶ. ಇಲ್ಲಿನ ಜನರ ಆಚಾರ-ವಿಚಾರ ಉಡುಗೆ-ತೊಡುಗೆ, ಆಹಾರ ಪದ್ಧತಿ, ಭಾಷಿಕ ಪದ್ಧತಿ- ಹೀಗೆ ಎಲ್ಲ ವಿಷಯದಲ್ಲೂ ಭೌಗೋಳಿಕವಾಗಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿದೆ. ಜಾಗತಿಕವಾಗಿ ಭಾರತ ವೇಗವಾಗಿ ಬೆಳೆಯುತ್ತಿರುವ ದೇಶವಾಗಿದೆ. ಇತಿಹಾಸವನ್ನು ಒಮ್ಮೆ ಅವಲೋಕಿಸಿದಾಗ ಯೂರೋಪಿನಲ್ಲಾದ ಕೈಗಾರಿಕಾ ಕ್ರಾಂತಿ ಇಂಗ್ಲೆಂಡ್, ಪೋರ್ಚುಗಲ್, ಫ್ರಾನ್ಸ್ ದೇಶಗಳು ಭಾರತಕ್ಕೆ ಸಮುದ್ರ ಮಾರ್ಗವನ್ನು ಕಂಡು ಹಿಡಿಯುವ ಸಂದರ್ಭದಲ್ಲಿ ಅಮೇರಿಕಾ ಖಂಡವನ್ನು ಕಂಡು ಹಿಡಿದಿದ್ದು, ಫರ್ಡಿನೆಂಡ್ ಮೆಗೆಲಾನ್ ವಿಶ್ವಪರ್ಯಟನೆ ಮಾಡಿದ್ದು ಇಂಗ್ಲಿಶರು, ಫ್ರೆಂಚರು, ಸ್ಪೆಯಿನಿಗರು, ಪೋರ್ಚುಗಿಸರು ತಾವು ಹೋದೆಡೆಯಲ್ಲೆಲ್ಲ ತಮ್ಮ ಭಾಷೆಯ ಜೊತೆಗೆ ಸ್ಥಳೀಯ ಭಾಷೆಗಳು ಸಂಪರ್ಕ ಏರ್ಪಡಲು ಕಾರಣರಾದರು. ಇಂತಹ ಸಂದರ್ಭಗಳು ಪಿಜಿನ್, ಡೈಗ್ಲಾಸಿಯಾ, ಕ್ರಿಯೋಲ್‌ಗಳು ಉಂಟಾಗಲು ಸಾಧ್ಯವಾಯಿತು.

೧೭-೧೮ನೇ ಶತಮಾನದಲ್ಲಿ ಕೈಗಾರಿಕಾ ಕ್ರಾಂತಿ ಹೊಸ ಹೊಸ ರೀತಿಯ ಆವಿಷ್ಕಾರಗಳಿಗೆ ನಾಂದಿಯಾಯಿತು. ವಿಜ್ಞಾನ ಹಾಗೂ ತಂತ್ರಜ್ಞಾನ ಅಭಿವೃದ್ಧಿಯಾದಂತೆ ಸಂವಹನ ಸಂಪರ್ಕ ಸಾಧ್ಯವಾದಂತೆಲ್ಲ ಜಗತ್ತು ಜಾಗತಿಕ ಹಳ್ಳಿಯಾಯಿತು(Global Village). ತತ್ಫಲವಾಗಿ ಬಹುರಾಷ್ಟ್ರೀಯ ಕಂಪನಿಗಳು ತಮ್ಮೆಲ್ಲ ಉತ್ಪಾದನೆಗಳಿಗೆ ಮಾರುಕಟ್ಟೆಯನ್ನು ಹುಡುಕುವ ಸಂದರ್ಭದಲ್ಲಿ ಭಾರತ, ಆಫ್ರಿಕಾಗಳಂತಹ ತೃತೀಯ ಜಗತ್ತಿನ ರಾಷ್ಟ್ರಗಳು ಅವುಗಳ ಕಣ್ಣಿಗೆ ಬಿದ್ದವು. ಆಯಾಯ ದೇಶಗಳು ತಮ್ಮ ತಮ್ಮ ದೇಶಭಾಷಿಕರನ್ನು ಬೇರೆ ದೇಶಗಳಿಗೆ ಕಳುಹಿಸಿದಾಗ ವಾಣಿಜ್ಯ ಅಭಿವೃದ್ಧಿಗಾಗಿ ಸ್ಥಳೀಯ ಭಾಷೆಯನ್ನು ಕಲಿಯುವ ಅಗತ್ಯತೆ-ಅನಿವಾರ್ಯತೆ ಉಂಟಾಗಿರುವ ಕಾರಣ ಇಂದು ದ್ವಿಭಾಷಿಕರು ಹಾಗೂ ಬಹುಭಾಷಿಕರು ಉಂಟಾಗುವ ಸಂದರ್ಭಗಳು ದಿನೇ ದಿನೇ ಹೆಚ್ಚಾಗುತ್ತಿವೆ. ಅಂತರಾಷ್ಟ್ರೀಯ ಸಂಬಂಧಗಳು ಹೆಚ್ಚಾದಂತೆ ಇಂತಹ ಸನ್ನಿವೇಶ ಸೃಷ್ಟಿಯಾಗಿ ಪ್ರತಿಯೊಬ್ಬ ಮಾನವನೂ ದ್ವಿಭಾಷಿಕ-ಬಹುಭಾಷಿಕನಾಗುವ ಅನಿವಾರ್ಯತೆ ಸೃಷ್ಟಿಯಾಗಿದೆ.

ಸರ್ ಆರ್ಥರ್ ಡಂಕೆಲ್‌ನಿಂದ ರೂಪಿತವಾದ ಗ್ಯಾಟ್ ಪ್ರಸ್ತಾವದಿಂದಾಗಿ ಇಪ್ಪತ್ತನೇ ಶತಮಾನದ ಅಂತ್ಯಭಾಗದಲ್ಲಿ ವಿಶ್ವವ್ಯಾಪಾರಿ ಸಂಘಟನೆ (W.T.O) ಸ್ಥಾಪಿತವಾಯಿತು. ಉದಾರೀಕರಣ, ಖಾಸಗೀಕರಣ

ಹಾಗೂ ಜಾಗತೀಕರಣದ ಮಂತ್ರ ಜಗತ್ತನ್ನೆಲ್ಲ ವ್ಯಾಪಿಸಿತು. ಇದರ ಪರಿಣಾಮದಿಂದಾಗಿ ಮನುಷ್ಯ ದ್ವಿಭಾಷಿಕನಾಗಿ ದ್ವಿಭಾಷಾ ಪರಿಸರಗಳು ರೂಪುಗೊಳ್ಳುತ್ತಿರುವುದು ಜಾಸ್ತಿಯಾಗುತ್ತಿರುವುದು ಕಂಡುಬಂದಿದೆ. ಆಧುನಿಕ ವಿದ್ಯಾಭ್ಯಾಸದ ಸಂದರ್ಭದಲ್ಲಿ ವೈದ್ಯಕೀಯ, ಇಂಜಿನಿಯರಿಂಗ್, ಉನ್ನತ ಶಿಕ್ಷಣದ ಕಾರಣಕ್ಕಾಗಿ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಗಳಿಂದ ಉದ್ಯೋಗದ ಕಾರಣಕ್ಕಾಗಿ ವಲಸೆ ಪ್ರಮಾಣ ಹೆಚ್ಚುತ್ತಿದೆ. ಕಾಲ್‌ಸೆಂಟರ್‌ಗಳು, ಹೊರಗುತ್ತಿಗೆಗಳು, ಸಾಫ್ಟವೇರ್ ಕಂಪನಿಗಳು, ವಿದೇಶಿ ಕಂಪನಿಗಳು ಇಂತಹ ಸಂದರ್ಭಗಳನ್ನು ಸೃಷ್ಟಿಸುತ್ತಿವೆ.

ಆದರೆ ಇಷ್ಟೊಂದು ವ್ಯಾಪಕವಾಗಿ ದ್ವಿಭಾಷಾ ಸಂದರ್ಭಗಳು ಸೃಷ್ಟಿಯಾಗಿದ್ದರೂ ದ್ವಿಭಾಷಿಕತೆಯನ್ನು ಕುರಿತಾದ ಸಮಗ್ರ ರೀತಿಯಲ್ಲಿ ಯಾವುದೇ ಅಧ್ಯಯನಗಳು ನಡೆದಿಲ್ಲದಿರುವುದು ದ್ವಿಭಾಷಿಕತೆಯ ಬಗೆಗಿನ ಸಂಶೋಧನೆಯ ಕೊರತೆಯನ್ನು ತೋರಿಸುತ್ತದೆ. ಬಹು ಹಿಂದಿನಿಂದಲೂ ಭಾರತದಲ್ಲಿ ದ್ವಿಭಾಷಿಕ ಸಂದರ್ಭಗಳು ಇದ್ದರೂ, ವೈಜ್ಞಾನಿಕ ದೃಷ್ಟಿಕೋನದಿಂದ ಇಂತಹ ಅಧ್ಯಯನಗಳು ಶುರುವಾಗಿದ್ದು ಪಾಶ್ಚಾತ್ಯ ಭಾಷಾ ವಿದ್ವಾಂಸರಾದ ಜೆ.ಜೆ. ಗುಂಫರ್ಜ್ ಅವರಿಂದ. ದ್ವಿಭಾಷಾ ಅಧ್ಯಯನಗಳನ್ನು ಕುರಿತು ಸಂಶೋಧಿಸಿದವರಲ್ಲಿ ಗುಂಫರ್ಜ್ (೧೯೬೪) ಅಗ್ರಗಣ್ಯರು. ಇವರ ಸಂಶೋಧನೆಗಳು ಮುಂದಿನವರಿಗೆ ದಾರಿದೀಪವಾಯಿತು. ೧೯೪೭ರ ಭಾರತದ ಸ್ವಾತಂತ್ರ್ಯದ ತರುವಾಯ ೧೯೬೧ರಲ್ಲಿ ನಡೆದ ಜನಗಣತಿಯ ಸಂದರ್ಭದಲ್ಲಿ ಮೊಟ್ಟಮೊದಲ ಬಾರಿಗೆ ದ್ವಿಭಾಷಿಕ ಹಾಗೂ ಬಹುಭಾಷಿಕರ ಕುರಿತು ವರದಿ ಪ್ರಕಟವಾಯಿತು. ಈ ಕ್ಷೇತ್ರದಲ್ಲಿ ನಡೆಸಿದ ಅಧ್ಯಯನ ದ್ವಿಭಾಷಿಕತೆ ಹಾಗೂ ಬಹುಭಾಷಿಕತೆಗಳಲ್ಲಿ ಮುಂದಿನ ಪೀಳಿಗೆಗೆ ಒಂದು ಮಾರ್ಗವನ್ನು ತೋರಿಸಿತೆಂದು ಹೇಳಲಾಗಿದೆ. ಹಾಗೇಯೇ ದ್ರಾವಿಡ ಭಾಷೆಗಳಾದ ತಮಿಳು, ತೆಲುಗು, ಮಲಯಾಳಂಗಳಲ್ಲಿ ಈ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಅದರಲ್ಲೂ ತಮಿಳುನಾಡಿನ ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾವಿಜ್ಞಾನ ವಿಭಾಗ ಸಾಮಾಜಿಕ ಭಾಷಾ ವಿಜ್ಞಾನ, ದ್ವಿಭಾಷಿಕ ಸಂದರ್ಭಗಳನ್ನು ಕುರಿತು ಸಂಶೋಧನೆಗಳನ್ನು ಕೈಗೊಂಡಿದೆ. ಆದರೆ ಅಷ್ಟರಮಟ್ಟಿನ ಅಧ್ಯಯನ ಕನ್ನಡದಲ್ಲಿ ನಡದೇ ಇಲ್ಲ. ನಡೆದಿರುವುದು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಕನ್ನಡದ ಮಾಹಿತಿಯನ್ನು ಆಧರಿಸಿ ಅಂತರಾಷ್ಟ್ರೀಯ ಮಟ್ಟದಲ್ಲಿ, ರಾಷ್ಟ್ರೀಯ ಮಟ್ಟದಲ್ಲಿ ವಿದ್ವಾಂಸರು ಒಂದಿಷ್ಟು ಅಧ್ಯಯನ ಮಾತ್ರ ನಡೆಸಿದ್ದಾರೆ. ಕನ್ನಡದ ಮಟ್ಟಿಗೆ ಹೇಳುವುದಾದರೆ ಕನ್ನಡದಲ್ಲಿ ಬಹಳ ಹಿಂದಿನಿಂದಲೂ ದ್ವಿಭಾಷಾ ಸಂದರ್ಭ ಇದ್ದರೂ ಅದು ಹೀಗೆ ಇತ್ತೆಂಬುದಾಗಲೀ, ಅದರ ಸ್ವರೂಪ ಪರಿಣಾಮಗಳ ಕುರಿತು ಒಂದಿಷ್ಟು ಮಾಹಿತಿಯೂ ಇಲ್ಲದಿರುವುದು ಪ್ರಸ್ತುತ ಸಂದರ್ಭದ ದ್ವಿಭಾಷಿಕತೆಯ ಅಧ್ಯಯನಕ್ಕೆ ಕಾರಣವಾಗಿದೆ.

ಇಂದು ವಿಶ್ವ ಒಂದು ಜಾಗತಿಕ ಹಳ್ಳಿಯಾಗಿದ್ದು, ಇವೊತ್ತಿನ ಬದಲಾಗುತ್ತಿರುವ ಸನ್ನಿವೇಶಗಳಲ್ಲಿ ಕಂಡುಬರುತ್ತಿರುವ ಒತ್ತಡದ ಕಾರಣಗಳಿಗಾಗಿ ಅಂದರೆ ಅಧಿಕಾರ, ಅಂತಸ್ತು, ಶಿಕ್ಷಣ, ಆರ್ಥಿಕತೆ,

ಸಾಮಾಜಿಕ ಸ್ಥಾನಮಾನಗಳನ್ನು ಪಡೆಯುವ ನಿಟ್ಟಿನಲ್ಲಿ ಪ್ರತಿಯೊಬ್ಬ ಭಾಷಿಕನು ಪ್ರಜ್ಞಾಪೂರ್ವಕವಾಗಿ ದ್ವಿಭಾಷಿಕರಾಗುತ್ತಿರುವುದು ಕಂಡುಬರುತ್ತದೆ. ಇದರಿಂದಾಗಿ ದ್ವಿಭಾಷಿಕತೆಯ ವ್ಯಾಪ್ತಿ ವಿಸ್ತರಿಸುತ್ತಾ ಹೋಗುತ್ತಿದ್ದು, ಈ ಸಂದರ್ಭದಲ್ಲಿ ಉಂಟಾಗುತ್ತಿರುವ ಭಾಷಾ ಸಂಪರ್ಕದಿಂದಾಗಿ ಭಾಷಿಕ ಸನ್ನಿವೇಶಗಳಲ್ಲಿ ಬದಲಾವಣೆ-ವ್ಯತ್ಯಾಸಗಳು ಕಂಡುಬರುತ್ತವೆ. ಇಂತಹ ಸಂದರ್ಭದಲ್ಲಿ ದ್ವಿಭಾಷಿಕತೆ ನೆಲೆಗಟ್ಟಿನಲ್ಲಿ ಅವುಗಳ ವೈವಿಧ್ಯಮಯ ಒಳಗನ್ನು ಅರಿಯುವ ನಿಟ್ಟಿನಲ್ಲಿ ಅಧ್ಯಯನಗಳನ್ನು ಕೈಗೊಳ್ಳುವುದು ಆಸಕ್ತಿದಾಯಕವಾದ ವಿಷಯವಾಗಿದೆ. ಪಾಶ್ಚಾತ್ಯದೇಶಗಳಲ್ಲಿ ದ್ವಿಭಾಷಾ ಸಂದರ್ಭಗಳನ್ನು ಕುರಿತು ನಡೆಸಿರುವ ಅಧ್ಯಯನ ಆಯಾ ರಾಷ್ಟ್ರದ, ರಾಜ್ಯದ ಭಾಷಾಯೋಜನೆಗಳನ್ನು ರೂಪಿಸುವಲ್ಲಿ, ದ್ವಿಭಾಷಿಕ ಪರಿಸರಗಳ ರಾಜ್ಯ-ಪ್ರದೇಶಗಳಿಗೆ ಶಿಕ್ಷಣದಲ್ಲಿ ಮಹತ್ತರ ಯೋಜನೆಗಳನ್ನು ರೂಪಿಸುವಲ್ಲಿ, ಆ ಭಾಷಿಕರ ಹಾಗೂ ಭಾಷೆಯ ಸ್ಥಿತಿ ಗತಿಗಳನ್ನು ಅರಿಯುವಲ್ಲಿ ಈ ರೀತಿಯ ದ್ವಿಭಾಷಿಕ ಅಧ್ಯಯನಗಳು ಉಪಯುಕ್ತ ವಾಗಿವೆ.

ಕರ್ನಾಟಕ ೫ ಕೋಟಿಗೂ ಮಿಕ್ಕ ಕನ್ನಡ ಮಾತನಾಡುವ ಜನರುಳ್ಳ ಪ್ರದೇಶ. ಬೀದರ್‌ನಿಂದ ಕೋಲಾರದವರೆಗೂ, ಬೆಳಗಾವಿಯಿಂದ ಮಡಿಕೇರಿಯವರೆಗೂ ನಾನಾ ಭಾಷೆಯ, ನಾನಾ ಜಾತಿ, ವರ್ಗದ ಜನರಿರುವ ಪ್ರದೇಶ. ಇಲ್ಲಿನ ಬಹುಸಂಖ್ಯಾತ ಕನ್ನಡಿಗರ ನಡುವೆ ಕನ್ನಡೇತರ ಭಾಷಿಕರು ಇಲ್ಲಿನ ಭಾಷಿಕ ಸಮುದಾಯದವರ ನಡುವೆ ನೆಲೆಸಿದ್ದಾರೆ. ಇವರಲ್ಲಿ ತೆಲುಗು, ಉರ್ದು, ಮರಾಠಿ, ತುಳು, ಕೊಂಕಣಿ, ತಮಿಳು ಭಾಷಿಕರೂ ಸೇರಿದ್ದಾರೆ. ಆದರೆ ಭಾರತದಲ್ಲಿ ಹಿಂದಿ ಭಾಷೆಯ ನಂತರ ಅತಿಹೆಚ್ಚಿನ ಭಾಷೆಗಳನ್ನು ಆಡುವ ಭಾಷಿಕರೆಂದರೆ ತೆಲುಗರು. ಕರ್ನಾಟಕದಲ್ಲಿ ಕನ್ನಡ, ಉರ್ದು, ಭಾಷಿಕರ ನಂತರ ಅತಿಹೆಚ್ಚಿನ ಭಾಷಿಕರು ತೆಲುಗು ಮಾತನಾಡುವವರೇ ಆಗಿದ್ದಾರೆ. ತೆಲುಗು ಕೂಡ ಕನ್ನಡದ ಹಾಗೇ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ್ದು, ಮಧ್ಯದ್ರಾವಿಡ ಉಪವರ್ಗಕ್ಕೆ ಸೇರಿದೆ. ದಕ್ಷಿಣೋತ್ತರವಾಗಿ ಕೋಲಾರದಿಂದ ಬೀದರಿನವರೆಗೆ ತೆಲುಗು ಭಾಷಿಕರ ನಾಡಾದ ಆಂಧ್ರಪ್ರದೇಶ ಕರ್ನಾಟಕದ ಗಡಿಯೊಂದಿಗೆ ಭೌಗೋಳಿಕವಾಗಿ ಹರಡಿದೆ. ಹೀಗೆ ಆಂಧ್ರ ಪ್ರದೇಶಕ್ಕೆ ಹೊಂದಿಕೊಂಡಿರುವ ಬೀದರ್, ಗುಲ್ಬರ್ಗಾ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು ಹಾಗೂ ಕೋಲಾರ ಜಿಲ್ಲೆಗಳಲ್ಲಿ ತೆಲುಗು ಭಾಷಿಕರು ಕೆಲವೆಡೆ ದಟ್ಟವಾಗಿ ಮತ್ತೆ ಕೆಲವೆಡೆ ಚದುರಿಂತೆಯೂ ಇದ್ದಾರೆ. ಇದೇ ಕಾರಣದಿಂದಾಗಿ ಕರ್ನಾಟಕಾಂಧ್ರ ಗಡಿಯಲ್ಲಿರುವ ಭಾಷಿಕರು ಐತಿಹಾಸಿಕ ಕಾರಣಗಳಿಂದಾಗಿ ಕನ್ನಡಿಗರು ತೆಲುಗರೊಂದಿಗೂ, ತೆಲುಗರು ಕನ್ನಡಿಗರೊಂದಿಗೂ ವ್ಯವಹರಿಸುತ್ತಲೇ ಬಂದಿದ್ದಾರೆ.

ಚಾರಿತ್ರಿಕವಾಗಿ ಕರ್ನಾಟಕವು ಈಗ ಇದ್ದಂತೆ ಏಕತ್ರವಾಗಿ ಮೊದಲು ರೂಪುಗೊಂಡಿರಲಿಲ್ಲ. ಕ್ರಿ.ಶ. ೧೬೦೦ಕ್ಕೂ ಮೊದಲು ರಾಷ್ಟ್ರಕೂಟರು, ಶಾತವಾಹನರು, ಕದಂಬರು, ಗಂಗರು, ಮೊಘಲರು,

ಮರಾಠರು, ಬಹುಮನಿ ಸುಲ್ತಾನರು, ನಂತರ ಹೈದರಾಬಾದಿನ ನಿಜಾಮರು, ಮುಂಬೈ ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ ಹಾಗೂ ಮೈಸೂರಿನ ಒಡೆಯರುಗಳ ಅಧೀನಕ್ಕೆ ಆಗಿಂದಾಗ್ಗೆ ಒಳಪಡುತ್ತಾ ಬಂದಿದೆ. ಕೋಲಾರ ಜಿಲ್ಲೆ ಸಹ ಈ ಹಿಂದೆ ಈಗಿನ ಆಂಧ್ರದ ಚಿತ್ತೂರು ಜಿಲ್ಲೆಗೆ ಒಳಪಟ್ಟ ಪ್ರದೇಶವೇ ಆಗಿದೆ. ಬಹಳ ಹಿಂದಿನಿಂದಲೂ ಕೋಲಾರವು ತೆಲುಗು-ಕನ್ನಡ ದ್ವಿ-ಬಹುಭಾಷಿಕ ಪ್ರದೇಶವಾಗಿರುವುದಕ್ಕೆ ಇಲ್ಲಿನ ಊರುಗಳ ಹೆಸರು, ಕವಿಗಳು ಸಾಕ್ಷಿಯಾಗಿರುವುದು ಐತಿಹಾಸಿಕ ಆಧಾರಗಳಿಂದ ತಿಳಿದು ಬರುತ್ತದೆ. ಹಾಗೆಯೇ ಕನ್ನಡಿಗರ ಜೊತೆಗೆ ತಮಿಳರು, ಮರಾಠಿ ಭಾಷಿಕರು, ಉರ್ದು ಭಾಷಿಕರು, ಮಾರ್ವಾಡಿ, ಹಿಂದಿ ಭಾಷಿಕರು ಸಾಕಷ್ಟು ಸಂಖ್ಯೆಯಲ್ಲಿದ್ದು ಇನ್ನಿತರ ಭಾಷಿಕರೂ ಇಲ್ಲಿ ನೆಲೆಸಿದ್ದಾರೆ. ಅಷ್ಟೇ ಅಲ್ಲದೆ ಶಿಕ್ಷಣ, ವ್ಯಾಪಾರ, ರಾಜಕೀಯ, ಉದ್ಯೋಗ ಹಾಗೂ ವೈವಾಹಿಕ ಕಾರಣಗಳಿಂದಾಗಿ ಕೊಡು-ಕೊಳ್ಳುವಿಕೆಯ ನಿರಂತರತೆಗಳಿಂದಾಗಿ ಇಲ್ಲಿನ ಭಾಷಿಕರ ನಡುವೆ ದ್ವಿಬಹುಭಾಷಿಕತೆಯ ಸನ್ನಿವೇಶ ಸೃಷ್ಟಿಯಾಗಿದೆ.

ಇಲ್ಲಿನ ದ್ವಿಭಾಷಿಕತೆಯ ಸ್ವರೂಪ ಎಂತಹುದು? ಇಲ್ಲಿನ ದ್ವಿಭಾಷಿಕೆತೆ ಯಾರಿಗೆ ಅವಶ್ಯಕತೆ? ಅದರ ಪ್ರಮಾಣ ಎಷ್ಟು? ದ್ವಿಭಾಷಿಕತೆಯನ್ನು ನಿರ್ವಹಿಸುಲ್ಲಿ ಭಾಷಿಕರ ಪಾತ್ರ ಎಂತಹುದು? ದ್ವಿಭಾಷಿಕತೆಯೊಳಗೆ ಯಾವ ರೀತಿಯ ಭಿನ್ನತೆಗಳಿವೆ? ಇವೆಲ್ಲವನ್ನೂ ಕನ್ನಡದೊಂದಿಗಿನ ತೆಲುಗಿನ ಸಂಬಂಧವನ್ನೂ ಕುರಿತ ಆಸಕ್ತಿಯೇ ಇಲ್ಲಿನ ಅಧ್ಯಯನದ ವಸ್ತುವಾಗಿದೆ. ಅಂದರೆ ಕೋಲಾರ ಜಿಲ್ಲೆಯ ಕನ್ನಡ-ತೆಲುಗು ದ್ವಿಭಾಷಿಕತೆಯ ನೆಲೆಗಳನ್ನು ಕುರಿತು ಅಧ್ಯಯನ ಮಾಡುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನಲೆಗಳು ಯಾವುವು? ಯಾವ ಕಾರಣಗಳಿಂದಾಗಿ ಇಲ್ಲಿ ದ್ವಿಭಾಷಾ ಪರಿಸರ ಉಂಟಾಗಿದೆ? ಅದರ ಸ್ವರೂಪ ಎಂತಹುದು? ದ್ವಿಭಾಷಾ ಕಾರಣದಿಂದಾಗಿರುವ ಪರಿಣಾಮಗಳು ಯಾವ ರೀತಿಯದು? ಸಾಮಾಜಿಕ ಭಿನ್ನಾಂಶಗಳಾದ ಜಾತಿ, ಲಿಂಗ, ವರ್ಗ,ಕುಟುಂಬ, ವಯಸ್ಸು, ಕಸುಬು ಇವುಗಳಿಂದ ದ್ವಿಭಾಷಿಕತೆಯಲ್ಲಿ ಯಾವ ರೀತಿಯ ವ್ಯತ್ಯಾಸಗಳು ಕಂಡುಬಂದಿವೆ. ದ್ವಿಭಾಷಿಕರೊಳಗೆ ಭಾಷಾಸಂಗೋಪನೆ ಹಾಗೂ ಭಾಷಾ ಪಲ್ಲಟಗಳು ಹೇಗೆ ನಡೆಯುತ್ತಿವೆ? ಈ ದ್ವಿಭಾಷಿಕರ ಭಾಷಾ ಬಳಕೆಯ ಪ್ರಮಾಣ ಎಷ್ಟು? ಕನ್ನಡಿಗರು ಹೆಚ್ಚು ತೆಲುಗನ್ನು ಕಲಿಯಲು ಆಸಕ್ತಿ ತೋರಿದ್ದಾರೆಯೇ ಅಥವಾ ತೆಲುಗರೋ? ಹಾಗೆಯೇ ಇಲ್ಲಿನ ಕನ್ನಡ ವ್ಯಾಕರಣದ ಮೇಲೆ ತೆಲುಗು ಬೀರಿರುವ ಪ್ರಭಾವ ಎಂತಹುದು? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವು ಕೂಡ ಇಲ್ಲಿನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಮಹಾರಾಷ್ಟ್ರದ ಕುಪ್ವಾರ್‌ನ ಕನ್ನಡ-ಮರಾಠಿ-ಉರ್ದು ಸಂಪರ್ಕದಿಂದಾಗಿ ಕನ್ನಡ ವ್ಯಾಕರಣ ಹಂತದಲ್ಲಿ ಆದ ಬದಲಾವಣೆಗಳು, ಕರ್ನಾಟಕದ ಬೀದರ್, ಗುಲ್ಬರ್ಗಾ ಕನ್ನಡದ ಮೇಲೆ ಉರ್ದು ಭಾಷೆಯಿಂದ ಆಗಿರುವ ಪ್ರಭಾವ, ಅದೇ ರೀತಿಯಾಗಿ ಕೋಲಾರ ಕನ್ನಡದಲ್ಲಿ ಆಗಿದೆಯೆ? ಎಂಬುದು ಕೂಡ ಇಲ್ಲಿನ ಅಧ್ಯಯನದ ಗುರಿ. ಕನ್ನಡ ಹಾಗೂ

ತೆಲುಗು ದ್ವಿಭಾಷಿಕರ ಭಾಷಾಬಳಕೆಯಲ್ಲಿ ಹೇಗೆ ತೆಲುಗು ಭಾಷೆಯ ವ್ಯಾಕರಣ ರಚನೆಗಳು ಮೌಖಿಕ ರೀತಿಯಲ್ಲಿ ನೆಲೆಯೂರಿವೆ? ದ್ವಿಭಾಷಿಕರಾಗಲಿ, ಏಕಭಾಷಿಕರಾಗಲಿ ಹೇಗೆ ಆಯಾ ಸಂದರ್ಭಗಳನ್ನು ನಿರ್ವಹಿಸುತ್ತಿದ್ದಾರೆ ಎಂಬುದು ಇಲ್ಲಿನ ಅಧ್ಯಯನದ ಉದ್ದೇಶ ಮತ್ತು ಗುರಿ ಕೂಡ ಆಗಿದೆ.

ಇಲ್ಲಿನ ಅಧ್ಯಯನವನ್ನು ಕೈಗೊಳ್ಳುವಾಗ ದ್ವಿಭಾಷಿಕತೆಯ ಸಂರಚನೆ, ಸ್ವರೂಪ ಹಾಗೂ ಪ್ರಮಾಣ-ಪರಿಣಾಮಗಳನ್ನು ತಿಳಿಯಲು ಸಾಮಾಜಿಕ ಭಾಷಾ ವಿಜ್ಞಾನದ ಚೌಕಟ್ಟಿಗೆ ಅಳವಡಿಸಿಕೊಳ್ಳಲಾಗಿದೆ. ಕೋಲಾರ ಜಿಲ್ಲೆಯ ಸಂದರ್ಭಕ್ಕೆ ತಕ್ಕಂತೆ ಬೇಕಾದ ವಿಧಿ ವಿಧಾನವನ್ನು ರೂಪಿಸಿಕೊಂಡು ಅಧ್ಯಯನ ಮಾಡಲಾಗಿದೆ. ಪಾಶ್ಚಿಮಾತ್ಯದ ತಾತ್ವಿಕ ಸಿದ್ಧಾಂತಗಳನ್ನು ಇಲ್ಲಿನ ಅಧ್ಯಯನ ವ್ಯಾಪ್ತಿಗೆ ಸಂಶೋಧನಾ ಸಂದರ್ಭದಲ್ಲಿ ಸೇರಿಸಿಕೊಂಡಿರುವುದಿಲ್ಲ.

ದ್ವಿಭಾಷಿಕರ ಸನ್ನಿವೇಶದಲ್ಲಿ ಅವರ ಭಾಷಾಕಲಿಕೆ ಹಾಗೂ ಭಾಷಾ ಬಳಕೆಗಳ ನೆಲೆಯ ಮೇಲೆ ಪರಿಣಾಮ ಬೀರತಕ್ಕ ಸಮಾಜೋ-ಭಾಷಿಕ ಅಂಶಗಳನ್ನು ತಿಳಿಯಲು ಸಾಮಾಜಿಕ, ಭಿನ್ನಾಂಶಗಳಾದ ಜಾತಿ, ಲಿಂಗ, ವಯಸ್ಸು, ಶಿಕ್ಷಣ, ವರ್ಗ, ಕುಟುಂಬ ಎಂಬ ಪರಿಕಲ್ಪನೆಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಪ್ರಶ್ನಾವಳಿಗಳು ಹಾಗೂ ಭಾಷಾ ಖಚಿತತೆಗಾಗಿ ಧ್ವನಿ ಮುದ್ರಣ ಯಂತ್ರವನ್ನು ಬಳಸಿಕೊಳ್ಳಲಾಗಿದೆ. ದ್ವಿಭಾಷಿಕತೆಯ ನೆಲೆಗಳು ಕಂಡುಬರುವ ಎಡೆಗಳಲೆಲ್ಲಾ ಅಂದರೆ ದ್ವಿಭಾಷಿಕತೆ ಬಳಕೆಯಾಗಿರುವ ಆವರಣಗಳಲ್ಲಿ ಹೆಚ್ಚು ಹೆಚ್ಚಾಗಿ ಕ್ಷೇತ್ರ ಕಾರ್ಯಕೈಗೊಳ್ಳಲಾಗಿದೆ. ೧೯೫೧ ರಿಂದ ೧೯೯೧ರವರೆಗಿನ ಭಾರತ ಸರ್ಕಾರದ ಜನಗಣತಿ ವರದಿಯನ್ನಾಧರಿಸಿ ದ್ವಿಭಾಷಿಕತೆಯ ಸಂದರ್ಭವನ್ನು ವಿಶ್ಲೇಷಿಸಿದೆ. ಕ್ಷೇತ್ರಕಾರ್ಯದಲ್ಲಿ ದತ್ತಾಂಶಗಳು ಒಡ್ಡಿದ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಕೋಲಾರ ಜಿಲ್ಲೆ ಅತಿ ಹೆಚ್ಚಿನ ತೆಲುಗು ಭಾಷಿಕರನ್ನು ಅಂದರೆ ೪೬.೮೪%ರಷ್ಟು ಹೊಂದಿದೆ. ಮೊದಲಿಗೆ ಕ್ಷೇತ್ರಕಾರ್ಯವನ್ನು ಕೈಗೊಂಡಂತಹ ಸಂದರ್ಭದಲ್ಲಿ ಇಡೀ ಕೋಲಾರ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿತ್ತು. ಆದರೆ ಜಿಲ್ಲೆಯ ಉತ್ತರ ದಿಕ್ಕಿನ ತಾಲ್ಲೂಕುಗಳಾದ ಗುಂಡಿಬಂಡೆ, ಬಾಗೇಪಲ್ಲಿ, ಗೌರಿಬಿದನೂರು ಹಾಗೂ ಶಿಡ್ಲಘಟ್ಟಗಳನ್ನು ಕೈಬಿಟ್ಟು ಹೆಚ್ಚಿನ ದ್ವಿಭಾಷಿಕರು ಕಂಡುಬಂದ ಚಿಂತಾಮಣಿ, ಶ್ರೀನಿವಾಸಪುರ, ಚಿಕ್ಕಬಳ್ಳಾಪುರ, ಮುಳಬಾಗಿಲು, ಬಂಗಾರಪೇಟೆ, ಮಾಲೂರು, ಕೋಲಾರಗಳಿಗೆ ಮಾತ್ರ ಕ್ಷೇತ್ರಧ್ಯಯನದ ವ್ಯಾಪ್ತಿಯನ್ನು ಸೀಮಿತಗೋಳಿಸಲಾಗಿದೆ. ಮೊದಲ ಹಂತದಲ್ಲಿ 'ಕುಟುಂಬ' ಆವರಣದಲ್ಲಿ ಕೆಲವು ದ್ವಿಭಾಷಿಕ ಕುಟುಂಬಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕಲಿಕೆ ಹಾಗೂ ಬಳಕೆಯ ಸಂದರ್ಭಗಳನ್ನು ಗಮನದಲ್ಲಿಟ್ಟುಕೊಂಡು 'ಶಿಕ್ಷಣ' ಆವರಣದಲ್ಲಿ ವಿದ್ಯಾರ್ಥಿ ಸಮುದಾಯದಿಂದ ಪ್ರಶ್ನಾವಳಿಯ ಮೂಲಕ ಹೆಚ್ಚಿನ ವಿವರಗಳನ್ನು ಪಡೆಯಲಾಗಿದೆ. ಬಹಳಷ್ಟು

ಮಾಹಿತಿಯನ್ನು ಹೊರಗಿನ ಆವರಣಗಳಾದ ಮಾರುಕಟ್ಟೆ, ಸಂತೆಮಾಳ, ಜಾತ್ರೆ, ಪರಸೆ, ಸಿನಿಮಾ ಮುಂತಾದೆಡೆ ಸಂಗ್ರಹಿಸಲಾಗಿದೆ. ಹಲವು ಸಂದರ್ಭಗಳಲ್ಲಿ ದ್ವಿಭಾಷಾ ಪರಿಸ್ಥಿತಿಯನ್ನು ಅರಿಯಲು ಸೂಕ್ಷ್ಮವಾಗಿ ಗಮನಿಸಿ ಮಾಹಿತಿ ಪಡೆಯಲಾಗಿದೆ. ಕೋಲಾರ ಹಾಗೂ ಚಿಂತಾಮಣಿಗಳಲ್ಲಿ ೮ ದ್ವಿಭಾಷಾ ಕುಟುಂಬಗಳ ದ್ವಿಭಾಷಾ ಸಂದರ್ಭವನ್ನು ಅವಲೋಕಿಸಿ ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಲ್ಲಿ ಕಂಡುಬಂದಿರುವ ಫಲಿತಾಂಶಗಳು ಯಾವುದೂ ಅಂತಿಮವಲ್ಲ. ಏಕೆಂದರೆ ಸಂಶೋಧನ ಅವಧಿಯಲ್ಲೂ ಕ್ಷೇತ್ರಕಾರ್ಯದ ಮಿತಿಗಳ ನಡುವೆ ದೊರೆತ ಫಲಿತಾಂಶಗಳು ದ್ವಿಭಾಷಾ ಪರಿಸರಗಳು ಸದಾ ಚಲನಶೀಲವಾದುವುಗಳಾಗಿರುವುದರಿಂದ, ಸನ್ನಿವೇಶ-ಸಂದರ್ಭ ಬದಲಾವಣೆಗೆ ಒಳಪಟ್ಟಂತೆಲ್ಲಾ ದ್ವಿಭಾಷಿಕ ಸಂದರ್ಭಗಳೂ ಕೂಡ ಬದಲಾವಣೆಗೆ ಒಳಪಡುತ್ತಿರುತ್ತವೆ.

ಎಲ್ಲಾ ಕಾರಣಗಳಿಂದಲೂ ಮುಂದಿನ ಐದರಿಂದ ಹತ್ತು ವರ್ಷಗಳ ಅವಧಿಯೊಳಗಿನ ಅವಧಿಯಲ್ಲಿ ಇಲ್ಲಿನ ಅಧ್ಯಯನ ಸಂದರ್ಭದ ಸ್ವರೂಪವಾಗಲಿ, ಪರಿಣಾಮವಾಗಲಿ ಬದಲಾವಣೆಯಾಗುವ ಸಾಧ್ಯತೆಯಿದೆ.

# ಅಧ್ಯಾಯ ೨

# ಕ್ಷೇತ್ರಾಧ್ಯಯನದ ರೂಪುರೇಷೆಗಳು

೨.೧. ಮೊದಲನೆಯ ಹಂತದ ಕ್ಷೇತ್ರದ ಕಾರ್ಯ

೨.೨. ಎರಡನೆಯ ಹಂತದ ಕ್ಷೆತ್ರಕಾರ್ಯ ಕುರಿತು

೨.೩. ಮೂರನೆಯ ಹಂತದ ಕ್ಷೆತ್ರಕಾರ್ಯ

೨.೪. ಇಲ್ಲಿನ ಅಧ್ಯಯನದೊಳಗೆ ಬಳಸಲಾಗಿರುವ ಪರಿಕಲ್ಪನೆಗಳ ವಿವರಣೆ

೨

# ಕ್ಷೇತ್ರಾಧ್ಯಯನದ ರೂಪುರೇಷೆಗಳು

ಕೋಲಾರ ಜಿಲ್ಲೆಯ ದ್ವಿಭಾಷಿಕ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆಯನ್ನು ಸಾಮಾಜಿಕ ಭಾಷಾ ವಿಜ್ಞಾನದ ನೆಲೆಯಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಅಳವಡಿಸಿಕೊಂಡ ರೂಪುರೇಷೆಗಳನ್ನು ಇಲ್ಲಿ ವಿವರಿಸಲಾಗಿದೆ. ಭಾರತೀಯ ಸಾಮಾಜಿಕ ಸ್ತರ ವಿನ್ಯಾಸವು ಜಾತಿಯ ಏಣಿ ಶ್ರೇಣಿಗಳಿಂದ ಕೂಡಿದ ಒಂದು ವ್ಯವಸ್ಥೆ. ಇಲ್ಲಿನ ಸಾಮಾಜಿಕ ವ್ಯವಸ್ಥೆಯು ಅನೇಕ ಜಾತಿ, ಬುಡಕಟ್ಟುಗಳನ್ನು ಒಳಗೊಂಡುದ್ದಾಗಿದೆ. ಪ್ರಾರಂಭದಲ್ಲಿ ವೃತ್ತಿಯಾಧಾರಿತ ಜಾತಿಗಳು ಹುಟ್ಟಿದ್ದರೂ, ಕಾಲಕ್ರಮೇಣ ಅವು ಪ್ರತ್ಯೇಕ ಪಂಗಡಗಳಾಗಿ ಗುರ್ತಿಸಿಕೊಂಡಿವೆ. ಪ್ರತಿಯೊಂದು ಜಾತಿಯೂ ತನ್ನದೇ ಆದ ಉಪಜಾತಿಯೊಂದನ್ನು ಹೊಂದಿದೆ. ಕೆಲವೊಂದು ವಿಚಾರಗಳಲ್ಲಿ ಎಲ್ಲ ಜಾತಿ ವರ್ಗಗಳಲ್ಲಿ ಒಂದೇ ರೀತಿಯ ಪದ್ಧತಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಕೋಲಾರ ಜಿಲ್ಲೆಯಲ್ಲಿ ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಬಹಳಷ್ಟು ಜಾತಿಯವರು ಇತರ ಭಾಗಗಳಿಂದ ಕಾಲಾಂತರದಲ್ಲಿ ಬಂದು ನೆಲೆಗೊಂಡವರಾಗಿದ್ದಾರೆ. ಹೀಗಾಗಿ ಸಮ್ಮಿಶ್ರಭಾಷೆ, ಸಾಂಸ್ಕೃತಿಕ ಲಕ್ಷಣಗಳು ಇಲ್ಲಿ ಗೋಚರವಾಗುತ್ತವೆ. ಸ್ವಾತಂತ್ರ್ಯ ತರುವಾಯ ಭಾರತೀಯ ಸಾಮಾಜಿಕ ಪದ್ಧತಿಯಲ್ಲಿ ಸಾಕಷ್ಟು ಬದಲಾವಣೆಗಳಿಗಿದ್ದರೂ, ಬಹುತೇಕ ಕಟ್ಟುಪಾಡುಗಳು ಗ್ರಾಮೀಣ ಪ್ರದೇಶದಲ್ಲಿ ಹಾಗೆಯೇ ಮುಂದುವರಿದುಕೊಂಡುಬಂದಿವೆ. ಈ ದಿಸೆಯಲ್ಲಿ ಸಾಮಾಜಿಕ ಭಿನ್ನಾಂಶಗಳಾದ ಜಾತಿ, ಲಿಂಗ, ವಿದ್ಯಾಭ್ಯಾಸ, ಆರ್ಥಿಕಮಟ್ಟ ಮೊದಲಾದುವುಗಳನ್ನು ಗಮನದಲ್ಲಿಟ್ಟುಕೊಂಡು ಕೋಲಾರ ಜಿಲ್ಲೆಯ ದ್ವಿಭಾಷಿಕ ಸ್ವರೂಪವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ದ್ವಿಭಾಷಿಕತೆಯ ಅಧ್ಯಯನಕ್ಕೆ ಭಾರತ ದೇಶ ಒಂದು ರೀತಿಯಲ್ಲಿ ಪ್ರಯೋಗಾಲಯವಿದ್ದಂತೆ. ಇಲ್ಲಿ ಯಾವುದೇ ರೀತಿಯ ಭಾಷಿಕ ಅಧ್ಯಯನ ಕೈಗೊಳ್ಳುವವರು ಇಲ್ಲಿನ ಭಾಷೆ ಸಂಸ್ಕೃತಿಯ ವಿವರಗಳನ್ನು ಆಳ ರಚನಾ ಮಟ್ಟದಲ್ಲಿ ತಿಳಿದುಕೊಂಡಿರಬೇಕಾಗುತ್ತದೆ. ಪಾಶ್ಚಾತ್ಯರ ರೀತಿಗೂ ಭಾರತದ ಪರಿಸರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಅವರದ್ದು ಪರಿಮಿತವಾದದ್ದು. ಭಾರತದ್ದಂತೂ ಅತ್ಯಂತ ಸಂಕೀರ್ಣವಾದದ್ದು. ಗೋಜಲುಗೋಜಲಾದದ್ದು. ಪಾಶ್ಚಾತ್ಯರ ಅಧ್ಯಯನ ಮಾದರಿಗಳೂ ಇಲ್ಲಿನ ಸನ್ನಿವೇಶಕ್ಕೆ ಹೊಂದುವುದಿಲ್ಲ. ಹಾಗಾಗಿ ಇಲ್ಲಿಯ ಪರಿಸ್ಥಿತಿಗೆ ತಕ್ಕಂತೆ ಅಧ್ಯಯನ ಮಾದರಿಗಳನ್ನು ರೂಪಿಸುಕೊಳ್ಳಬೇಕಾಗುತ್ತದೆ. ಇಲ್ಲಿನ

ಭಾಷಿಕ ಸನ್ನಿವೇಶ, ಕಲಿಕೆ ಬಳಕೆಯ ನೆಲೆಗಳು ಎಲ್ಲವನ್ನೂ ಒಟ್ಟಾರೆಯಾಗಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಅದಕ್ಕೆ ತಕ್ಕುದಾದ ಅಧ್ಯಯನದ ರೂಪುರೇಷೆಗಳನ್ನು, ಹೊಸ ಹೊಸ ಮಾರ್ಗೋಪಾಯ ಗಳನ್ನು, ಕಾರ್ಯತಂತ್ರವನ್ನೂ ಕ್ಷೇತ್ರಾಕಾರ್ಯದಲ್ಲಿ ಅಳವಡಿಸಿಕೊಳ್ಳುವ ಜರೂರು ಇದೆ.

ದ್ವಿಭಾಷಿಕತೆಯನ್ನು ಕುರಿತು ಚರ್ಚಿಸುವಾಗ ಹಲವಾರು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ. ಏಕೆಂದರೆ ಸಾಮಾಜಿಕ ಸನ್ನಿವೇಶಗಳ ದ್ವಿಭಾಷಿಕತೆಯು ಬಳಕೆಯಾಗುವ ಸಂದರ್ಭಗಳನ್ನು ಅಧ್ಯಯನ ಮಾಡಲು ಹೊರಟಾಗ ಸಮಾಜವೊಂದರ ಸಾಮಾಜಿಕ ಸಂರಚನೆಯ ರೂಪುರೇಷೆಗಳನ್ನು ತಿಳಿದುಕೊಳ್ಳಬೇಕಾಗಿದೆ. ಕಾರಣ ಸಾಮಾಜಿಕ ಸಂರಚನೆಯ ಬೇರೆ ಬೇರೆ ನೆಲೆಗಟ್ಟಿನಲ್ಲಿ ಭಾಷಾ ಬಳಕೆಯನ್ನು ನಿರ್ದೇಶಿಸುತ್ತಿರುತ್ತದೆ. ಅಷ್ಟೇ ಅಲ್ಲ. ನಿಯಂತ್ರಿಸುತ್ತಿರುತ್ತಲೂ ಇರುತ್ತದೆ. ಸಮಾಜವೊಂದರ ಚಳುವಳಿಗಳು ಜರುಗುವ ಸ್ಥಳದಲ್ಲಿ ಯಾವುದೇ ಎರಡು ಭಾಷೆಗಳನ್ನು ಬಳಸುವ ಸಂದರ್ಭಗಳು ಅಲ್ಲಿನ ಸಾಮಾಜಿಕ ರಚನೆಯನ್ನು ಅವಲಂಬಿಸಿರುತ್ತದೆ. ಅಲ್ಲಿನ ಸಮಾಜದ ಸಮುದಾಯಗಳ ಸಂವಹನ ರೀತಿ, ವ್ಯಕ್ತಿಯ ಸ್ಥಾನಮಾನ ಇವೆಲ್ಲವೂ ಸಾಮಾಜಿಕ ಸಂರಚನೆಯಲ್ಲಿ ಉಳಿದವುಗಳಾಗಿರುತ್ತವೆ. ಭಾರತದಲ್ಲಿ ಯಾವುದೇ ಜಾತಿ ಮತ್ತು ವರ್ಗದಲ್ಲಿರುವ ಸಾಮಾಜಿಕ ಸ್ತರವ್ಯವಸ್ಥೆಯು ಭಾಷೆಯ ಮೇಲೆ ಬೀರಬಹುದಾದ ಪ್ರಭಾವವು ಆ ಸಮಾಜದ ಸಾಮಾಜಿಕ ರಚನೆಯನ್ನು ತೋರಿಸುತ್ತದೆ. ಸಾಮಾಜಿಕ ಭಿನ್ನಾಂಶಗಳಾದ ಕುಟುಂಬ, ಲಿಂಗ, ವಯಸ್ಸು, ಶಿಕ್ಷಣ, ಆದಾಯ, ವರ್ಗ, ಜಾತಿ ಮುಂತಾದುವುಗಳಿಂದಾಗಿ ಭಾಷಿಕ ರಚನೆಗಳು ಭಿನ್ನರೀತಿಯಲ್ಲಿ ಸ್ವತಂತ್ರ್ಯ ರೂಪ ಪಡೆದಿವೆ. ಭೌಗೋಳಿಕತೆಗೆ ಅನುಗುಣವಾಗಿ ಹರಡಿ ಹೋಗಿರಬಹುದಾದ ಭಾಷೆಗಳು ಕೆಲವೊಮ್ಮೆ ಲಿಖಿತ ರೂಪ ಪಡೆದಿರಬಹುದಾದರೆ ಕೆಲವು ಸಾರಿ ಮೌಖಿಕ ರೂಪ ಪಡೆದಿರುತ್ತವೆ. ಯಾವುದೇ ಒಂದು ಪ್ರಾದೇಶಿಕ ಭಾಷೆಯ ವೈಶಿಷ್ಟ್ಯವು ಹೇಗೆ ಪ್ರಮಾಣೀಕೃತ ಭಾಷೆಗಿಂತ ಸಾಮಾಜಿಕ ಭಾಷೆಯ ಭಿನ್ನರೂಪ ಪಡೆದಿರುತ್ತದೆ ಎಂಬುದು ಕನ್ನಡದಲ್ಲಿ ಇದುವರೆಗೆ ನಡೆದ ಕೆಲವು ಅಧ್ಯಯನಗಳು ವರ್ಣನಾತ್ಮಕ ನೆಲೆಯಲ್ಲಿ ಸ್ಪಷ್ಟಪಡಿಸುತ್ತವೆ.

ಕೋಲಾರ ಪರಿಸರದ ತೆಲುಗು ಕನ್ನಡ ದ್ವಿಭಾಷಾ ಸನ್ನಿವೇಶವನ್ನು ಸಮಗ್ರ ರೀತಿಯಲ್ಲಿ ಅರಿಯಲು ಮೂರು ಹಂತಗಳಲ್ಲಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ.

೧. ಮೊದಲ ಹಂತ
೨. ಎರಡನೇ ಹಂತ
೩. ಮೂರನೇ ಹಂತ

ಪ್ರಮುಖವಾಗಿ ೬ ಬಗೆಯ ಸಾಮಾಜಿಕ ಭಿನ್ನಾಂಶಗಳಾದ ೧. ಜಾತಿ ೨. ವರ್ಗ ೩. ಶಿಕ್ಷಣ ೪. ವಯಸ್ಸು ೫. ಲಿಂಗ ಮತ್ತು ೬. ಕುಟುಂಬ ಇವುಗಳನ್ನು ಮೂರೂ ಹಂತದ ಕ್ಷೇತ್ರ ಕಾರ್ಯದಲ್ಲಿ ಬಳಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಜಿಲ್ಲೆಯಲ್ಲಿ ಹೆಚ್ಚಾಗಿ ದ್ವಿಭಾಷಿಕತೆ ಪ್ರಮಾಣ

ಕಂಡುಬಂದಿರುವ ತಾಲ್ಲೂಕುಗಳನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯ ಮಾಡಲಾಗಿದೆ. ಕೋಲಾರ, ಮಾಲೂರು, ಮುಳಬಾಗಿಲು, ಶ್ರೀನಿವಾಸಪುರ, ಚಿಕ್ಕಬಳ್ಳಾಪುರ, ಚಿಂತಾಮಣಿ ತಾಲೂಕುಗಳಲ್ಲಿ ತೆಲುಗು ಭಾಷಿಕರ ನೆಲೆಗಳನ್ನು ಆಯ್ಕೆ ಮಾಡಿ ಪ್ರಶ್ನಾವಳಿ ಹಾಗೂ ಟೇಪ್‌ರೆಕಾರ್ಡರ್ ಬಳಸಿ ಕ್ಷೇತ್ರಕಾರ್ಯ ಮಾಡಲಾಗಿದೆ.

## ೨.೧. ಮೊದಲನೆಯ ಹಂತದ ಕ್ಷೇತ್ರದ ಕಾರ್ಯ

ಪ್ರಾರಂಭದಲ್ಲಿ ಏಳು ತಾಲ್ಲೂಕುಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯ್ತು. ಪ್ರತಿ ತಾಲ್ಲೂಕಿಗೆ ಇಪ್ಪತ್ತೈದು ಜನರಂತೆ ನೂರಾಎಪ್ಪತ್ತೈದು ಪ್ರೇಕ್ಷಕರನ್ನು ಆರಿಸಿಕೊಳ್ಳಲಾಯಿತು. ಪ್ರತಿ ತಾಲೂಕಿನಲ್ಲಿ ಕನ್ನಡ ತೆಲುಗು ಹಾಗೂ ತೆಲುಗು ಕನ್ನಡ ಬಲ್ಲ ದ್ವಿಭಾಷಿಕರನ್ನು ಗುರ್ತಿಸಿಕೊಂಡು ಆಯಾ ದ್ವಿಭಾಷಿಕ ಕುಟುಂಬಗಳಿಗೆ ಹೋಗಿ ಪ್ರತಿ ತಾಲ್ಲೂಕಿನಿಂದ ಇಪ್ಪತ್ತೈದು ಜನರಂತೆ ಒಟ್ಟು ನೂರಾಎಪ್ಪತ್ತೈದು ಜನರಿಗೆ ಪ್ರಶ್ನಾವಳಿಯ ಮೂಲಕ ಸಂದರ್ಶಿಸಲಾಯಿತು. ಈ ಹಂತದ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಆಧಾರದ ಮೇಲೆ ಹಲವು ಸಂಶೋಧನ ಪ್ರಶ್ನೆಗಳನ್ನು ಕೇಳಲಾಯಿತು.

೧. ಭೌಗೋಳಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ಸ್ವರೂಪ ಯಾವ ರೀತಿಯದ್ದಾಗಿದೆ.

೨. ಜಿಲ್ಲೆಯಲ್ಲಿ ದ್ವಿಭಾಷಿಕತೆ ಉಂಟಾಗಲು ಇರುವ ಕಾರಣಗಳಾದರೂ ಏನು?

೩. ದ್ವಿಭಾಷಿಕತೆಯ ಮೇಲೆ ಸಾಮಾಜಿಕ ಭಿನ್ನಾಂಶಗಳಾದ ಲಿಂಗ, ಜಾತಿ ಮತ್ತು ಕಸುಬುಗಳು, ಕುಟುಂಬ, ಶಿಕ್ಷಣ, ಮುಂತಾದ ಪರಿಣಾಮ ಬೀರಿವೆಯೇ?

೪. ಜಿಲ್ಲೆಯ ದ್ವಿಭಾಷಾ ಪರಿಸರ ಚಲನಶೀಲವಾದುದೇ ಅಥವಾ ನಿಶ್ಚಲವಾದುದೇ?

೫. ಭಾಷಾ ಸಂಗೋಪನೆಯನ್ನು ಮಾಡುವಲ್ಲಿ ದ್ವಿಭಾಷಿಕರ ಕಾರ್ಯತಂತ್ರಗಳಾವುವು?

೬. ಇಲ್ಲಿನ ಭಾಷಿಕ ಸಮುದಾಯ ಯಾವ ಯಾವ ಆವರಣಗಳಲ್ಲಿ ಯಾವ್ಯಾವ ಭಾಷೆಯನ್ನು ಬಳಸುತ್ತದೆ.

೭. ದ್ವಿಭಾಷಿಕತೆಯು ಶಿಕ್ಷಣದಲ್ಲಿ ಉಂಟು ಮಾಡಿರಬಹುದಾದ ಪರಿಣಾಮ ಪ್ರಮಾಣ

೮. ಮೌಖಿಕ ಹಾಗೂ ಸಾಕ್ಷರತೆಯ ಹಂತದಲ್ಲಿ ತೆಲುಗು-ಕನ್ನಡ ಭಾಷೆಗಳಲ್ಲಿ ಭಾಷಾ ಕೌಶಲ್ಯ ಹಾಗೂ ಭಾಷಾ ಬಳಕೆ ದ್ವಿಭಾಷಿಕರಾದವರಲ್ಲಿ ಯಾವ ಪ್ರಮಾಣದ ಹಾಗೂ ಸ್ವರೂಪದಲ್ಲಿದೆ.

೯. ಜಿಲ್ಲೆಯು ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಮಾಜಿಕ ಹಂತಗಳಲ್ಲಿ ಬದಲಾವಣೆಗೆ

ಒಳಗಾಗುತ್ತಿರುವ ಹಂತಗಳಲ್ಲಿ ಯಾವ ರೀತಿಯಲ್ಲಿ ದ್ವಿಭಾಷಿಕರಾದವರಲ್ಲಿ ಭಾಷಾ ಪಲ್ಲಟಗಳು ಸಂಭವಿಸಿವೆ.

೧೦. ಹಳೇ ತಲಮಾರಿನವರಿಗೂ ಹೊಸ ತಲೆಮಾರಿನವರ ಭಾಷಿಕ ಸಂದರ್ಭದಲ್ಲಿ ದ್ವಿಭಾಷಿಕತೆಯಲ್ಲಿ ಏನಾದರೂ ಬದಲಾವಣೆಗಳು ಕಾಣುತ್ತಿದೆಯೇ?

೧೧. ಕೋಲಾರ ಜಿಲ್ಲೆ ದ್ವಿಭಾಷಿಕ ಸಂದರ್ಭ ಇತರ ದ್ವಿಭಾಷಾ ಸಂದರ್ಭಗಳಿಗಿಂತ ಭಿನ್ನತೆಯನ್ನು ಹೊಂದಿದೆಯೇ?

೧೨. ಕೋಲಾರ ಜಿಲ್ಲೆಯ ತೆಲುಗು ಕನ್ನಡ ಭಾಷಾ ಸಂಪರ್ಕದಿಂದಾಗಿ ಕನ್ನಡ ಭಾಷಾ ಬಳಕೆಯ ಮೇಲೆ ಯಾವ ರೀತಿಯ ಪರಿಣಾಮಗಳುಂಟಾಗಿವೆ?

## ೨.೨. ಎರಡನೆಯ ಹಂತದ ಕ್ಷೇತ್ರಕಾರ್ಯ ಕುರಿತು

ಈ ಹಂತದ ಕ್ಷೇತ್ರಕಾರ್ಯವನ್ನು ಮೊದಲ ಹಂತದ ಕ್ಷೇತ್ರಕಾರ್ಯದಲ್ಲಿ ದೊರತಂತಹ ಮಾಹಿತಿಯನ್ನು ಆಧರಿಸಿ ಅಲ್ಲಿ ಎದುರಾದ ಸಂಶೋಧನಾತ್ಮಕ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಹಂತದಲ್ಲಿ ಜಿಲ್ಲಾ ಕೇಂದ್ರ ಕೋಲಾರ ಸೇರಿದಂತೆ ಮುಳಬಾಗಿಲು, ಚಿಂತಾಮಣಿ, ಶ್ರೀನಿವಾಸಪುರ, ಚಿಕ್ಕಬಳ್ಳಾಪುರ, ಬಂಗಾರಪೇಟೆ ಹಾಗೂ ಮಾಲೂರು ತಾಲ್ಲೂಕುಗಳ ದ್ವಿಭಾಷಿಕತೆಗಳ ಪ್ರಸ್ತುತ ಪರಿಸ್ಥಿತಿಯನ್ನು ಅರಿಯಲು ಪ್ರಮುಖವಾದ ಭಾಷಿಕ ಆವರಣಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಕುಟುಂಬ, ಸಂತೆ ನಡೆಯುವ ಸ್ಥಳಗಳು, ತರಕಾರಿ ಹರಾಜು ನಡೆಯುವ ಎ.ಪಿ.ಎಂ.ಸಿ. ಮಾರುಕಟ್ಟೆ, ಸಿನಿಮಾ ಮಂದಿರಗಳು, ಆಡಿಯೋ ವಿಡಿಯೋ ಪಾರ್ಲರ್‌ಗಳ, ಗ್ರಂಥಾಲಯಗಳ, ಬಸ್‌ನಿಲ್ದಾಣ, ಮದುವೆ, ಜಾತ್ರೆಗಳಂಥ ಸಮಾರಂಭಗಳು ಈ ಎಲ್ಲಾ ಕಡೆ ಅತ್ಯಂತ ಸೂಕ್ಷ್ಮವಾಗಿ ಭಾಷಿಕ ಪರಿಸ್ಥಿತಿಯನ್ನು ಅವಲಂಬಿಸಲಾಯಿತು. ಹಾಗೆಯೇ ಭಾಷೆಯನ್ನು ಬೋಧಿಸುವ, ಕಲಿಯುವ, ಬಳಸುವ ಆವರಣಗಳಾದ ಶಾಲಾ ಕಾಲೇಜುಗಳ ಶೈಕ್ಷಣಿಕ ಸಂದರ್ಭವನ್ನು ನಿಕಟವಾಗಿ ಪ್ರಶ್ನಾವಳಿಗಳ ಮೂಲಕ ಅವಲೋಕನ ಮಾಡಲಾಯಿತು. ಕನ್ನಡ ಇಂಗ್ಲಿಶ್ ಮಾಧ್ಯಮಗಳಲ್ಲಿ ಓದುತ್ತಿರುವಂಥ, ಶಾಲಾ ಮಕ್ಕಳನ್ನು, ಕಾಲೇಜು ವಿದ್ಯಾರ್ಥಿ ಸಮುದಾಯದ ಒಂದು ಸಾವಿರ ವಿದ್ಯಾರ್ಥಿಗಳನ್ನು ಸಂಪರ್ಕಿಸುವಾಗ ದೊರೆತಂತ ಮಾಹಿತಿಯಿಂದ ಆರುನೂರ ಇಪ್ಪತ್ತು ಪ್ರಶ್ನಾವಳಿಗಳು ಕನ್ನಡ-ತೆಲುಗು, ತೆಲುಗು-ಕನ್ನಡ ಭಾಷಿಕರ ಬಗೆಗಿನ ಮಾಹಿತಿಯನ್ನು ತಿಳಿದಿವೆ. ಮುನ್ನೂರ ಎಂಬತ್ತು ಪ್ರಶ್ನಾವಳಿಗಳು ಕನ್ನಡ-ತೆಲುಗು ಭಾಷೆಗಳು ಎರಡನೆಯ ಭಾಷೆಯಾಗಿ ಬಳಸುತ್ತಿರುವುದು ಕಂಡುಬಂದಿದೆ. ಕೋಲಾರ ಜಿಲ್ಲೆಯ ಪರಿಸರದ ಸಮಾಜ ಮತ್ತು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಅವರ ಕುಟುಂಬಗಳನ್ನು ಸಂಪರ್ಕಿಸಿ ಆ ಕುಟುಂಬ ಆವರಣದಲ್ಲಿ ದೊರೆತ ಅಂಕಿ-ಅಂಶಗಳನ್ನು ಆಧರಿಸಿದ ಸಂಶೋಧನಾ ಪ್ರೇರಣೆಗಳಿಗೆ ಉತ್ತರ ಹುಡುಕುವ ಪ್ರಯತ್ನ ನಡೆಸಲಾಗಿದೆ.

ಇಲ್ಲಿರುವ ಪ್ರೀತಿ ಕುಟುಂಬದಲ್ಲಿ ಕಂಡುಬಂದಂತಹ ಸಾಮಾಜಿಕ ಬಿನ್ನಾಂಶಗಳ ಬಗೆಗೆ, ಭಾಷಾ ಕೌಶಲ್ಯಗಳ ಬಗೆಗೆ ಹಾಗೂ ವಿದ್ಯಾರ್ಥಿ ಸಮುದಾಯದಿಂದ ಆ ಆವರಣದಲ್ಲಿ ಪಡೆದ ಮಾಹಿತಿ ಕೋಲಾರ ಪರಿಸರದ ಭಾಷಿಕ ಪರಿಸ್ಥಿತಿಯನ್ನು ತಿಳಿಯಲು ಮಾಡಿದ ಪ್ರಯತ್ನವಾಗಿದೆ. ಸಮಾಜದ ಬೇರೆ ಬೇರೆ ಆವರಣಗಳಲ್ಲಿ ಕ್ಷೇತ್ರ ಕಾರ್ಯ ನಡೆಸುವಾಗಲ್ಲೆಲ್ಲ ವಿದ್ಯಾರ್ಥಿಗಳಿಂದ ಪಡೆದ ಮಾಹಿತಿಯನ್ನು ಪರೀಕ್ಷೆಗೆ ಒಳಪಡಿಸಿ, ಸಂಶಯ ಬಂದ ಕಡೆಗಳಲ್ಲೆಲ್ಲಾ ಮತ್ತೆ ಪುನರಾವಲೋಚನೆ ಸೂಕ್ತ ಮಾಹಿತಿಯನ್ನು ಪಡೆಯಲೆತ್ನಿಸಲಾಗಿದೆ. ಶಿಕ್ಷಣದ ಸಂದರ್ಭದಲ್ಲಿ ಕನ್ನಡ-ತೆಲುಗು ದ್ವಿಭಾಷಿಕತೆಯ ಪರಿಣಾಮವನ್ನು ತಿಳಿಯಲು ಸೋಮಯಾಗಲಪಲ್ಲಿ, ಶ್ರೀನಿವಾಸಪುರ, ಕಸೆಟ್ಟಿಪಲ್ಲಿ, ಮುಳಬಾಗಿಲು, ಕೋಲಾರ, ಚಿಂತಾಮಣಿ ಮುಂತಾದೆಡೆಗಳಲ್ಲಿ ಶಾಲಾಕಾಲೇಜುಗಳಿಗೆ ಭೇಟಿ ನೀಡಿ ದ್ವಿಭಾಷಾ ಸಂದರ್ಭದಲ್ಲಿ ಶಿಕ್ಷಣ ಮತ್ತು ವಿದ್ಯಾರ್ಥಿಗಳ ಕಲಿಕೆ ಸಂದರ್ಭ ಹಾಗೂ ಬೋಧನೆಯಲ್ಲಿ ಇರುವ ಸಮಸ್ಯೆಗಳನ್ನು ಅರಿತುಕೊಳ್ಳುವುದೇ ಅಲ್ಲದೆ ತೆಲುಗು ಭಾಷಿಕ ಮಕ್ಕಳು ಹೋಗುವಂತಹ ಶಾಲೆಯನ್ನು ಆಯ್ಕೆ ಮಾಡಿಕೊಂಡು ಆ ಮಕ್ಕಳು ಕನ್ನಡವನ್ನು ಒಂದು ವಿಷಯವನ್ನಾಗಿಯೂ ಅಥವಾ ಕಲಿಕಾ ಮಾಧ್ಯಮವನ್ನಾಗಿಯೂ ತೆಗೆದುಕೊಂಡು ಓದುವಾಗ ಅವರಲ್ಲಾಗುತ್ತಿರುವ ಭಾಷಿಕ ಬದಲಾವಣೆಗಳು, ಭಾಷಾ ಬಗೆಗಿನ ಮಾಹಿತಿಗಳೆಲ್ಲವನ್ನೂ ಕಲೆ ಹಾಕಿ ಓದುವ ಸಂದರ್ಭದಲ್ಲಿ ಆ ವಿದ್ಯಾರ್ಥಿಗಳಲ್ಲಿ ಆಗುತ್ತಿರುವ ಭಾಷಿಕ ಬದಲಾವಣೆಗಳ ಭಾಷಾ ಕೌಶಲ್ಯಗಳ ಬಗೆಗಿನ ವಿವರಗಳು ಹಾಗೂ ಶಿಕ್ಷಣದಿಂದ ಉಂಟಾಗುವ ದ್ವಿಭಾಷಿಕತೆಯ ಸ್ವರೂಪದಲ್ಲಿ ಆಗುತ್ತಿರುವ ಬದಲಾವಣೆಗಳು ಯಾವ ರೀತಿಯದು ಎಂದು ಗುರ್ತಿಸುವಲ್ಲಿ ಸಹಾಯವಾಗಿದೆ. ವಿದ್ಯಾರ್ಥಿಗಳ ಬಗೆಗಿನ ಭಾಷಿಕ ವಿವರಗಳನ್ನು ಪಡೆಯುವಾಗ ಅಲ್ಲಿನ ವಿದ್ಯಾರ್ಥಿಗಳ ಸಾಮಾನ್ಯ ಭಾಷಿಕ ಅಂಶಗಳು ಯಾವ ರೀತಿ ಅವರ ಭಾಷೆಯ ಮೇಲೆ ಎಂತಹ ಪರಿಣಾಮ ಬೀರುತ್ತಿದೆ ಎಂದು ತಕ್ಕ ಅಂಗಗಳನ್ನು ತಿಳಿಯಲು ಅನುಕೂಲವಾಗಿದೆ.

ಕ್ಷೇತ್ರಕಾರ್ಯವನ್ನು ಕೈಗೊಂಡು ಜಿಲ್ಲೆಯ ಎಲ್ಲ ಪ್ರಮುಖ ದ್ವಿಭಾಷಿಕ ನೆಲೆಗಳನ್ನು ಪತ್ತೆ ಹಚ್ಚುವ ಸಂದರ್ಭದಲ್ಲಿ ಅಲ್ಲಿನ ಸಮಾಜದ ವ್ಯಕ್ತಿಗಳ ಬಾಹ್ಯ ಲಕ್ಷಣಗಳನ್ನು, ಮುಖ ಚಹರೆಯನ್ನು ಅವರು ಉಪಯೋಗಿಸುತ್ತಿರುವ ಬಟ್ಟೆಬರೆ, ಅಲಂಕರ ಸಾಮಗ್ರಿಗಳು, ಮಾತಿನ ರೀತಿ, ಮಾತನಾಡುವ ಆವರಣಗಳು ಎಲ್ಲವುಗಳನ್ನು ಗಮನಿಸಿದಾಗ ತೆಲುಗು-ಕನ್ನಡ ಭಾಷಾವಲಯಗಳನ್ನು ಗುರ್ತಿಸಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ.

## ೨.೩. ಮೂರನೆಯ ಹಂತದ ಕ್ಷೇತ್ರಕಾರ್ಯ

ಮೂರನೆಯ ಹಂತದ ಕ್ಷೇತ್ರಕಾರ್ಯವನ್ನು ಎರಡನೆಯ ಹಂತದ ಕ್ಷೇತ್ರಕಾರ್ಯದಲ್ಲಿ ಬಳಸಿದ ಕಾರ್ಯ ತಂತ್ರಕ್ಕಿಂತ ಬೇರೆ ರೀತಿಯಾಗಿ ಮಾಡಲಾಗಿದೆ. ಕೋಲಾರ, ಮುಳಬಾಗಿಲು ಮತ್ತು ಚಿಂತಾಮಣಿಗಳಲ್ಲಿ ವಾಸಮಾಡುತ್ತಿರುವ ಎಂಟು ದ್ವಿಭಾಷಾ ಕುಟುಂಬಗಳನ್ನು ಸೂಕ್ಷ್ಮ ರೀತಿಯ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ವಿವಿಧ ಆರ್ಥಿಕ ಶ್ರೇಣಿಗಳಲ್ಲಿ ಬರುವ ಮೇಲ್ವರ್ಗ, ಮೇಲ್‌ಮಧ್ಯಮ, ಮಧ್ಯಮ, ತಳಮಧ್ಯಮ ಮತ್ತು ಕೆಳವರ್ಗಗಳಲ್ಲಿ ಬರುವ ಬೇರೆ ಬೇರೆ ಜಾತಿಗಳ, ಭಿನ್ನ ವಯಸ್ಸಿನ, ಸರ್ಕಾರಿ ಮತ್ತು ಖಾಸಗಿ ರಂಗದಲ್ಲಿ ಉದ್ಯೋಗ ನಿರ್ವಹಿಸುತ್ತಿರುವ ವಿಭಕ್ತ ಮತ್ತು ಅವಿಭಕ್ತ ಕುಟುಂಬದಲ್ಲಿರುವ, ಕನ್ನಡ ಮತ್ತು ತೆಲುಗಿನ ಸಾಮಾಜಿಕ ಹಾಗೂ ಭಾಷಿಕ ಸಂದರ್ಭಗಳಿಗೆ ಒಳಗಾದವರನ್ನು ಮತ್ತು ಆ ತಲೆಮಾರುಗಳಲ್ಲಿ ಸಂಭವಿಸುತ್ತಿರುವ ಭಾಷಾಸಂಗೋಪನೆ, ಭಾಷಾಮನೋಭಾವ, ಭಾಷಾನಿಷ್ಠೆ, ತಮ್ಮ ತಮ್ಮ ಭಾಷೆಯನ್ನು ಉಳಿಸಿಕೊಳ್ಳುವಲ್ಲಿ ಅವರ ಕಾರ್ಯತಂತ್ರಗಳು, ಅವರ ಭಾಷಾ ಆಯ್ಕೆಗಳು, ನುಡಿಮಿಶ್ರಣ ನುಡಿಜಿಗಿತದ ಸಂದರ್ಭಗಳು, ದ್ವಿಭಾಷಾ ಸ್ವೀಕಾರಗಳು ಈ ಎಲ್ಲವನ್ನೂ ಅವಲೋಕಿಸಿ ಮಾಹಿತಿಯನ್ನು ಪಡೆಯಲಾಗಿದೆ. ಸುಮಾರು ಒಂದು ವರ್ಷಕ್ಕಿಂತ ಹೆಚ್ಚಾಗಿ ಈ ದ್ವಿಭಾಷಿಕ ಕುಟುಂಬಗಳ ಜೊತೆ ನಿಕಟ ಸಂಪರ್ಕವಿರಿಸಿಕೊಂಡು ಅವರ ನಿತ್ಯ ವ್ಯವಹಾರಿಕ ಸಂದರ್ಭಗಳನ್ನು ಗಮನಿಸಿದ್ದಲ್ಲದೆ, ಕುಟುಂಬಗಳ ಹಬ್ಬ ಹರಿದಿನಗಳು, ನೀಡಲಾಯಿತು. ಆ ಸಂದರ್ಭದಲ್ಲಿ ಅವರ ಭಾಷಾ ಆಯ್ಕೆ, ವರ್ಗ ಮತ್ತು ಜಾತಿ, ತಲೆಮಾರುಗಳಲ್ಲಿ ಕಂಡುಬರುವ ಭಾಷಿಕ ಭಿನ್ನತೆ, ಸರ್ಕಾರಿ/ಖಾಸಗಿ ವಲಯಗಳ ಸಂದರ್ಭಗಳಲ್ಲಿ ಅವಿಭಕ್ತ ಕುಟುಂಬದವರಿಗಿಂತ ಹೇಗೆ ವಿಭಕ್ತ ಕುಟುಂಬಗಳವರಲ್ಲಿನ ಮಕ್ಕಳು ಭಾಷಿಕ ಪಲ್ಲಟಕ್ಕೆ ಒಳಗಾಗುತ್ತಾರೆ ಎಂಬ ಅಂಶಗಳನ್ನು ಪರಿಶೀಲಿಸಲಾಯಿತು. ಈ ಹಂತದಲ್ಲಿ ದೊರಕಿದ ಮಾಹಿತಿಯು ಮೊದಲನೆಯ ಹಾಗೂ ಎರಡನೆಯ ಹಂತದಲ್ಲಿ ದೊರೆತ ಮಾಹಿತಿಗಿಂತ ಬೇರೆ ಆಗಿದೆಯೋ ಅಥವಾ ಒಂದೇ ಆಗಿದೆಯೋ ಎಂಬ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಈ ದ್ವಿಭಾಷಾ ಕುಟುಂಬಗಳ ಕಲಿಕೆ ಬಳಕೆಯ ನೆಲೆಗಳನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಸೂಕ್ಷ್ಮ ರೀತಿಯ ಕ್ಷೇತ್ರಕಾರ್ಯ ಭಿನ್ನ ತಂತ್ರಗಳಲ್ಲಿ ಹೆಚ್ಚಿನ ಕಾಲಮಿತಿಯಲ್ಲಿ ನಡೆಯುವುದಾಗಿದೆ. ಆದರೆ ಇಲ್ಲಿನ ಅಧ್ಯಯನದಲ್ಲಿ ಪರಿಧಿ ಮತ್ತು ಅವಧಿಯನ್ನು ಒಂದು ನಿರ್ದಿಷ್ಟ ಕಾಲಮಿತಿಯನ್ನು ಹಾಕಿಕೊಂಡು ಮಾಡಲಾಗಿದೆ.

ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳಲ್ಲಿ ಕಲೆಹಾಕಿದ ಎಲ್ಲ ಮಾಹಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ ಕನ್ನಡ ತೆಲುಗು ಭಾಷೆಗಳೆರಡೂ ಇಲ್ಲಿನ ಸಾಮಾಜಿಕ ಜೀವನದಲ್ಲಿ ಹೇಗೆ ಹಾಸುಹೊಕ್ಕಾಗಿದೆ ಹಾಗೂ ಈ ಭಾಷೆಗಳೆರಡೂ ಯಾವ ರೀತಿಯಲ್ಲಿ ತಮ್ಮದೆ ಆದ ವೈಶಿಷ್ಟ್ಯ ಹಾಗೂ ಭಿನ್ನತೆಗಳನ್ನು ಭಾಷಿಕರ ನಡುವೆ ಉಳಿಸಿಕೊಂಡು ಹೋಗಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ಕಲೆಹಾಕಿದ ಮಾಹಿತಿಯ ಸೂಕ್ಷ್ಮ ವಿವರಗಳನ್ನು ಬರವಣಿಗೆಯುದ್ದಕ್ಕೂ ಅಗತ್ಯಕ್ಕೆ ತಕ್ಕಂತೆ ಬಳಸಲಾಗಿದೆ.

## ೨.೪. ಇಲ್ಲಿನ ಅಧ್ಯಯನದೊಳಗೆ ಬಳಸಲಾಗಿರುವ ಪರಿಕಲ್ಪನೆಗಳ ವಿವರಣೆ

### ಭಾಷಾ ಸಮುದಾಯ (ಸ್ಪೀಚ್ ಕಮ್ಯುನಿಟಿ)

ಜನರ ಒಂದು ಗುಂಪು ಅಥವಾ ಒಂದು ಜನವರ್ಗ ಒಂದು ಸಮುದಾಯವಾಗಿ ರೂಪುಗೊಂಡಾಗ ಅದನ್ನು ಒಂದು ಭಾಷಾ ಸಮುದಾಯ ಎಂದು ಗುರ್ತಿಸಲಾಗುತ್ತದೆ. ಉದಾ: ಹಳ್ಳಿ, ಪ್ರದೇಶ, ರಾಷ್ಟ್ರ, ಇತ್ಯಾದಿ. ಸಾಮಾನ್ಯವಾಗಿ ಈ ಸಮುದಾಯ ಕೊನೆಯಪಕ್ಷ ಯಾವುದಾದರೊಂದು ಭಾಷಾಭೇದವನ್ನು

ಒಳಗೊಂಡಿರುತ್ತದೆ. ಆದರೆ ದ್ವಿಭಾಷಿಕ ಹಾಗೂ ಬಹುಭಾಷಿಕ ಸಮುದಾಯಗಳಲ್ಲಿ ಜನರು ಸಾಮಾನ್ಯವಾಗಿ ಒಂದಕ್ಕಿಂತ ಹೆಚ್ಚು ಭಾಷಿಕ ಭೇದಗಳನ್ನು ಆಡುವಂತವರಾಗಿರುತ್ತಾರೆ(ಪ್ಲಾಟ್, ವೆಬರ್ ೨೬೬). ಸಿ.ಎಫ್.ಹಾಕೆಟ್ ಅವರ ಮಾತಿನಲ್ಲೇ ಹೇಳುವುದಾದರೆ "ಪ್ರತಿಯೊಂದು ಭಾಷೆಯೂ ಭಾಷಾ ಸಮುದಾಯವೊಂದನ್ನು ವ್ಯಾಖ್ಯಾನಿಸುತ್ತಿರುತ್ತದೆ. ಇಡೀ ಜನಸಮುದಾಯವು ಸಾಮಾನ್ಯ ಭಾಷೆಯ ಮೂಲಕ ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲೀ ಪ್ರತಿಯೊಬ್ಬರನ್ನೂ ಸಂಪರ್ಕಿಸುತ್ತಿರುತ್ತದೆ". (೮) ಭಾಷಿಕ ಸಮುದಾಯಗಳ ನಡುವಿನ ಗಡಿಗಳು ಸ್ಪಷ್ಟವಾಗಿರುವುದಿಲ್ಲ. ಅಲ್ಲಿರುವ ದ್ವಿಭಾಷಿಕ ಅಥವಾ ಬಹುಭಾಷಿಕ ಜನರು ಪ್ರಾಯೋಗಿಕವಾಗಿ ಎರಡು ಅಥವಾ ಹೆಚ್ಚಿನ ಭಾಷೆಗಳ ಮೇಲೆ ಹಿಡಿತವನ್ನು ಸಾಧಿಸಿರುತ್ತಾರಲ್ಲದೆ ಸದಸ್ಯರು ಬೇರೆ ಬೇರೆ ಭಾಷಿಕ ಸಮುದಾಯದವರಾಗಿದ್ದು ಪರಸ್ಪರ ಸಂಪರ್ಕವನ್ನು ಸಾಧಿಸಿರುತ್ತಾರೆ. ಸಾಮಾನ್ಯವಾಗಿ ದ್ವಿಭಾಷಿಕರು ವಿಭಿನ್ನ ಸಮುದಾಯಗಳ ಜನರೊಡನೆ ಸಂಪರ್ಕಿಸಲು ಎರಡು ಭಾಷೆಗಳಲ್ಲಿ ವ್ಯವಹರಿಸುವ ಸಾಮರ್ಥ್ಯವನ್ನು ಪಡೆದಿರುವವರಾಗಿದ್ದರೂ, ಪ್ರಾಥಮಿಕವಾಗಿ ಅವರು 'ಒಂದು ಭಾಷಿಕ ಸಮುದಾಯ'ಕ್ಕೆ ಸೇರಿದವರಾಗಿರುತ್ತಾರೆ. ಈ ಸಂದರ್ಭಗಳಲ್ಲಿ ಅವರು ಎರಡು ಭಾಷೆಗಳಲ್ಲಿ ಒಂದರಲ್ಲಿ ಮಾತ್ರ ಕನಿಷ್ಠ ಸಾಮರ್ಥ್ಯವನ್ನು ಹೊಂದಿರುತ್ತಾರೆ. ರಾಜಕೀಯ ಎಲ್ಲೆಗಳು ಭಾಷಾ ಸಮುದಾಯದ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸುತ್ತದೆಂಬುದು ಅಪ್ರಸ್ತುತವಾದುದು ಅಸಂಬದ್ಧವಾದುದು. ಕಾರಣ ಕರ್ನಾಟಕದ ಏಕೀಕರಣವಾದ ಮೇಲೆ ಕನ್ನಡ ಭಾಷಾ ಸಮುದಾಯಗಳು ತಮಿಳುನಾಡಿನ ಪುದುಕೋಟ್ಟೈ, ಹೊಸೂರು, ಬಾಗಲೂರು; ಆಂಧ್ರದ ಮಡಕಶಿರಾ, ಪಲಮನೇರು, ಕುಪ್ಪಂ ಹಾಗೂ ಸುತ್ತಮುತ್ತಲಿನ ಹಳ್ಳಿಗಳು(ಉದಾ: ಪತ್ತಿಕೊಂಡ, ಬೇಲಪಲ್ಲಿ, ಬೈರಡ್ಡಿಪಲ್ಲಿ, ತೀರ್ಥ, ನೆಲ್ಲಿಪಟ್ಲು), ಕೇರಳದ ಕಾಸರಗೋಡು, ಮಹಾರಾಷ್ಟ್ರದ ಕೊಲ್ಹಾಪುರ, ಕುಪ್ವಾರ ಮುಂತಾದೆಡೆಗಳಲ್ಲಿ ಹರಿದು ಹಂಚಿ ಹೋಗಿರುವುದನ್ನು ಕಾಣುತ್ತೇವೆ. ಅದೇ ಸಂದರ್ಭದಲ್ಲಿ ಭಾರತದಂಥ ಬಹುಭಾಷಿಕ ರಾಷ್ಟ್ರಗಳಲ್ಲಿ ಕನ್ನಡ, ತೆಲುಗು, ತಮಿಳು, ಮಲಯಾಳಂ, ಮರಾಠಿ ಭಾಷೆಗಳಂಥ ಭಾಷಿಕ ಸಮುದಾಯಗಳು ೧೯೫೬ರ ಭಾಷಾವಾರು ಪ್ರಾಂತ್ಯಗಳ ನಂತರ ಏಕೀಕರಣಗೊಂಡು ಉಚ್ಛ್ರಾಯ ಸ್ಥಿತಿಗೆ ತಲುಪಿರುವುದನ್ನು ಕಾಣುತ್ತೇವೆ.

### ಬಳಕೆಯ 'ಆವರಣಗಳು' (ಡೋಮೈನ್ಸ್ ಆಫ್ ಯೂಸ್)

ಜೆ.ಜೆ. ಫಿಷ್‌ಮನ್ ಅವರು ೧೯೬೫ರಲ್ಲಿ 'ಆವರಣ' ಎನ್ನುವ ಪರಿಕಲ್ಪನೆಯನ್ನು ಸಾಮಾಜಿಕ ಭಾಷಾವಿಜ್ಞಾನದ ಸಂದರ್ಭದಲ್ಲಿ ಬಳಕೆಗೆ ತಂದಿದ್ದಾರೆ. ಅದನ್ನೆ ಇಲ್ಲಿಯೂ ಬಳಸಲಾಗಿದೆ. ಇಂಗ್ಲೀಷಿನ Domain ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಆವರಣ ಎಂದು ಕರೆಯಲಾಗಿದೆ. ಭಾಷಾವಿಜ್ಞಾನದಲ್ಲಿ ಇದೊಂದು ಸಾಮಾನ್ಯ ಸ್ಥಳವಾಗಿದ್ದು, (Domain) ಇಲ್ಲಿ ಭಾಷೆಯು ಸಾಮಾಜಿಕ ಸ್ಥಿತಿ ಮತ್ತು ಸಂದರ್ಭಗಳಲ್ಲಿ ಬದಲಾವಣೆ ಮತ್ತು ವ್ಯತ್ಯಾಸಕ್ಕೆ ಒಳಪಟ್ಟಿರುವುದನ್ನು ತೋರಿಸುತ್ತದೆ. ಹೀಗಾಗಿ ಭಾಷಿಕ

ಸಮುದಾಯವೊಂದು ಈ ಸಂದರ್ಭದಲ್ಲಿ ಒಂದು ಭಾಷೆ ಅಥವಾ ಉಪಭಾಷೆಯೊಂದನ್ನು ಆಡುತ್ತಿರುತ್ತದೆ. ಅಲ್ಲದೆ ಅದು ಸಾಮಾಜಿಕ ಕಾರ್ಯಗಳ ಅಳತೆಗೋಲಿನಲ್ಲಿ ವ್ಯತ್ಯಾಸ ಉಂಟಾಗಿರುವುದನ್ನು ತೋರಿಸುತ್ತದೆ. ಇದು ಮನೆ, ಕಛೇರಿ, ಮಾರುಕಟ್ಟೆ, ಆಡಳಿತ, ಶಿಕ್ಷಣ ಕೇಂದ್ರಗಳು, ನ್ಯಾಯಾಂಗ, ಕಾಲೇಜು, ವಿಶ್ವವಿದ್ಯಾಲಯಗಳಂತಹ ಆವರಣಗಳಲ್ಲಿನ ಭಾಷಾ ಮಾದರಿಗಳಲ್ಲಿ ಭಿನ್ನತೆ ಉಂಟಾಗಿರುವುದನ್ನು ಹೇಳುತ್ತದೆ.

**The Dictionary of Applied Linguistics** 'ಆವರಣ'ವನ್ನು 'ಸಂಬಂಧಿತ ಭಾಷಿಕ ಸನ್ನಿವೇಶಗಳ ಗುಂಪು' ಎಂದು ವ್ಯಾಖ್ಯಾನಿಸುತ್ತದೆ. ಉದಾಹರಣೆಗೆ ಕೆಲವು ಸನ್ನಿವೇಶಗಳಲ್ಲಿ ಯಾವುದೇ ವ್ಯಕ್ತಿ ಮತ್ತೋಬ್ಬ ವ್ಯಕ್ತಿಯೊಂದಿಗೆ ಅಥವಾ ಕುಟುಂಬದ ಸದಸ್ಯರೊಂದಿಗೆ ಮಾತಾಡುವಿಕೆ, ತಾಯಿ ಮಕ್ಕಳೊಂದಿಗೆ, ತಂದೆ ತಾಯಿಯೊಂದಿಗೆ, ಅಕ್ಕ ತಂಗಿಯೊಂದಿಗೆ ಮಾತಾಡುವ ಸಂದರ್ಭವು ಕುಟುಂಬದ ಆವರಣ ಆಗಿರುತ್ತದೆ. ದ್ವಿಭಾಷಿಕ ಸಮುದಾಯಗಳಲ್ಲಿ ಹಾಗೂ ಬಹುಭಾಷಿಕ ಸಮುದಾಯಗಳಲ್ಲಿ ಒಂದು ಭಾಷೆಯು ಒಂದು ಆವರಣದಲ್ಲಿಯು ಮತ್ತೊಂದು ಭಾಷೆಯು ಬೇರೆ ಆವರಣದಲ್ಲಿಯು ಪ್ರಯೋಗಿಸುತ್ತಿರುವುದು ಕಂಡುಬರುತ್ತದೆ. ಅಮೇರಿಕಾದ ಪ್ಯೂಯೆರ್ಟೋರಿಕನ್‌ರು ಸ್ಪ್ಯಾನಿಷ್ ಭಾಷೆಯನ್ನು ಕುಟುಂಬ ಆವರಣದಲ್ಲಿಯೂ, ಇಂಗ್ಲಿಶ್ ಭಾಷೆಯನ್ನು ಕಛೇರಿ ಆವರಣದಲ್ಲಿ ಬಳಕೆ ಮಾಡುತ್ತಾರೆ.

ದ್ವಿಭಾಷಾ ಪ್ರದೇಶವೊಂದರ ದ್ವಿಭಾಷಿಕರು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಸಂಭಾಷಿಸುವಾಗ ಕಂಡುಬರುವ ಭಾಷಿಕ ಪ್ರಕ್ರಿಯೆಗಳಲ್ಲಿ ನುಡಿಜಿಗಿತ, ನುಡಿಮಿಶ್ರಣ, ದ್ವಿಭಾಷಾ ಸ್ವೀಕರಣ ಸಂದರ್ಭಗಳು ಬಹಳ ಮುಖ್ಯವಾದುವುಗಳು. ನುಡಿ ಜಿಗಿತದಲ್ಲಿ ವಾಕ್ಯವೊಂದನ್ನು ಆ ಭಾಷೆಯ ನಿಮಾನುಸಾರ ರಚನೆ ಮಾಡಿ, ಇನ್ನೊಂದು ಭಾಷೆಯಲ್ಲಿ ಹೊಸ ವಾಕ್ಯವೊಂದನ್ನು ರಚಿಸಿ ಬಳಸಲಾಗುತ್ತದೆ. ಒಂದು ಭಾಷೆಯ ವಾಕ್ಯವನ್ನು ಬಳಸುವಾಗ ಇನ್ನೊಂದು ಭಾಷೆಯ ಭಾಷಿಕ ಅಂಶಗಳನ್ನು ಬೆರೆಸಿ ಮಾತನಾಡುವುದು ನುಡಿ ಮಿಶ್ರಣ ಎನಿಸುತ್ತದೆ. ಒಂದು ಭಾಷೆಯ ಅರ್ಥದ ತೆರಪುಗಳನ್ನು ತುಂಬಲು ಬೇರೊಂದು ಭಾಷೆಯಿಂದ ಎರವಲು ಪಡೆಯುವುದೇ ದ್ವಿಭಾಷಾ ಸ್ವೀಕರಣ, ನುಡಿಜಿಗಿತ, ನುಡಿಮಿಶ್ರಣ, ದ್ವಿಭಾಷಾ ಸ್ವೀಕರಣ ಪರಿಕಲ್ಪನೆಗಳನ್ನು ಮೇಲ್ಕಂಡ ಅರ್ಥದಲ್ಲಿ ಬಳಸಲಾಗಿದೆ.

## ನುಡಿಜಿಗಿತ ನುಡಿಮಿಶ್ರಣ ದ್ವಿಭಾಷಾ ಸ್ವೀಕರಣ

ದ್ವಿಭಾಷಾ ಪ್ರದೇಶವೊಂದರ ದ್ವಿಭಾಷಿಕರು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಸಂಭಾಷಿಸುವಾಗ ಕಂಡುಬರುವ ಭಾಷಿಕ ಪ್ರಕ್ರಿಯೆಗಳಲ್ಲಿ ನುಡಿಜಿಗಿತ, ನುಡಿಮಿಶ್ರಣ, ದ್ವಿಭಾಷಾ ಸ್ವೀಕರಣ ಸಂದರ್ಭಗಳು ಬಹಳ ಮುಖ್ಯವಾದುವುಗಳು. ನುಡಿ ಜಿಗಿತದಲ್ಲಿ ವಾಕ್ಯವೊಂದನ್ನು ಆ ಭಾಷೆಯ ನಿಮಾನುಸಾರ ರಚನೆ ಮಾಡಿ, ಇನ್ನೊಂದು ಭಾಷೆಯಲ್ಲಿ ಹೊಸವಾಕ್ಯವೊಂದನ್ನು ರಚಿಸಿ ಬಳಸಲಾಗುತ್ತದೆ. ಒಂದು ಭಾಷೆಯ

ವಾಕ್ಯವನ್ನು ಬಳಸುವಾಗ ಇನ್ನೊಂದು ಭಾಷೆಯ ಭಾಷಿಕ ಅಂಶಗಳನ್ನು ಬೆರೆಸಿ ಮಾತನಾಡುವುದು ನುಡಿ ಮಿಶ್ರಣ ಎನಿಸುತ್ತದೆ. ಒಂದು ಭಾಷೆಯ ಅರ್ಥದ ತೆರಪುಗಳನ್ನು ತುಂಬಲು ಬೇರೊಂದು ಭಾಷೆಯಿಂದ ಎರವಲು ಪಡೆಯುವುದೇ ದ್ವಿಭಾಷಾ ಸ್ವೀಕರಣ, ನುಡಿಜಿಗಿತ, ನುಡಿಮಿಶ್ರಣ, ದ್ವಿಭಾಷಾ ಸ್ವೀಕರಣ ಪರಿಕಲ್ಪನೆಗಳನ್ನು ಮೇಲ್ಕಂಡ ಅರ್ಥದಲ್ಲಿ ಬಳಸಲಾಗಿವೆ.

### ಭಾಷಾ ಸಂಗೋಪನೆ ಮತ್ತು ಭಾಷಾ ನಿಷ್ಠೆ

ದ್ವಿಭಾಷಾ ಪರಿಸರದಲ್ಲಿ ಭಾಷೆಯೊಂದು ಅಲ್ಪಸಂಖ್ಯಾತವಾಗಿದ್ದಾಗ ಅಲ್ಲಿರುವ ಕೆಲವೇ ಭಾಷಿಕರಿಂದ ಬೇರೆ ಬೇರೆ ಆವರಣಗಳಲ್ಲಿ ನಿರಂತರವಾಗಿ ಉಪಯೋಗಿಸಲ್ಪಡುತ್ತಿದ್ದರೆ ಅದು ಭಾಷಾ ಸಂಗೋಪನೆ, ಅದೇ ಭಾಷಿಕರು ತಮ್ಮ ಜನಾಂಗೀಯ ಚಹರೆ ಹಾಗೂ ಭಾಷಿಕ ಚಹರೆಗಾಗಿ ಹಬ್ಬ ಹರಿದಿನಗಳು, ಸಾಂಸ್ಕೃತಿಕ ಆಸರೆಗಳು, ಪತ್ರಿಕೆ, ಮಾಧ್ಯಮಗಳ ಮೂಲಕ ತಮ್ಮ ಭಾಷಿಕ ಸಂದರ್ಭಗಳಲ್ಲಿ ವ್ಯಕ್ತಪಡಿಸುತ್ತಿದ್ದಾರೆ. ಅದು ಭಾಷಾನಿಷ್ಠೆ ಎನಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಪರಿಕಲ್ಪನೆಗಳನ್ನು ಬಳಸಲಾಗಿದೆ.

### ಭಾಷಾ ಪಲ್ಲಟ

ದ್ವಿಭಾಷಿಕರು ತಮ್ಮ ಸಂಭಾಷಣೆ ಸಂದರ್ಭದಲ್ಲಿ ಒಂದು ಭಾಷೆಯ ವಾಕ್ಯಗಳನ್ನಾಡುತ್ತಿದ್ದು ಅದನ್ನು ಮುಗಿಸಿ ಬೇರೊಂದು ಭಾಷೆಗೆ ಹೊರಳಿ ಹೊಸ ವಾಕ್ಯಗಳನ್ನು ಆ ಭಾಷೆಯಲ್ಲಿ ರಚಿಸಿ ಮಾತನಾಡುವುದು ಭಾಷಾ ಪಲ್ಲಟ ಎನಿಸುತ್ತದೆ.

### ಏಕ ಭಾಷಿಕರು ಮಾನೋಲಿಂಗ್ವಲ್ಸ್

ಎರಡು ಭಿನ್ನಭಾಷೆಗಳನ್ನಾಡುವ ಜನರಿರುವ ಪ್ರದೇಶದಲ್ಲಿ ಯಾರಿಗೆ ಎರಡೂ ಭಾಷೆಗಳನ್ನು ಬಳಸುವ ಅಗತ್ಯ ಇರುತ್ತದೆಯೋ ಅವರು ಮಾತ್ರ ದ್ವಿಭಾಷಿಕರಾಗಿರುತ್ತಾರೆ. ಉಳಿದವರು ಏಕಭಾಷಿಕರಾಗಿದ್ದರೂ ದ್ವಿಭಾಷಾ ಪರಿಸರದಲ್ಲೇ ಜೀವಿಸುತ್ತಾರೆ.ಈ ಸಂದರ್ಭದಲ್ಲಿ ಕನ್ನಡವೊಂದನ್ನೇ ಅಥವಾ ತೆಲುಗು ಒಂದನ್ನೇ ಬಳಸುತ್ತಿರುವ ಭಾಷಿಕರನ್ನು ಕ್ರಮವಾಗಿ ಕನ್ನಡ ಏಕಭಾಷಿಕರು ಹಾಗೂ ತೆಲುಗು ಏಕಭಾಷಿಕರೆಂದು ಪರಿಗಣಿಸಲಾಗಿದೆ.

### ದ್ವಿಭಾಷಿಕರು ಬೈಲಿಂಗ್ವೀಲ್ಸ್

ಭಾಷಿಕ ಕೌಶಲ್ಯಗಳಾದ ಮಾತು, ಗ್ರಹಿಕೆ, ಓದು, ಬರಹದ ನೆಲೆಗಳಲ್ಲಿ ಕನ್ನಡ ಹಾಗೂ ತೆಲುಗು ಭಾಷೆಗಳನ್ನು ಬಲ್ಲವರನ್ನು ಅಥವಾ ಯಾವುದೇ ಎರಡು ಭಾಷೆ ಬಲ್ಲವರನ್ನು ಇಲ್ಲಿ ದ್ವಿಭಾಷಿಕರೆಂದು ಕರೆಯಲಾಗಿದೆ. ಮೌಖಿಕ ನೆಲೆಯಲ್ಲಾಗಲೀ, ಸಾಕ್ಷರತೆಯ ನೆಲೆಯಲ್ಲಾಗಲಿ ಎರಡೂ ಭಾಷೆಗಳನ್ನು

ಬಳಸುವವರು ಇದ್ದಾರೆ. ಆದರೆ ಬಹಳಷ್ಟು ಮಂದಿ ಮೌಖಿಕ ನೆಲೆಯಲ್ಲೇ ಎರಡೂ ಭಾಷೆಗಳನ್ನು ತಿಳಿದಿದ್ದು ಅಂತಹವರನ್ನು ದ್ವಿಭಾಷಿಕರೆಂದು ಪರಿಗಣಿಸಲಾಗಿದೆ.

**ಅರೆದ್ವಿಭಾಷಿಕರು ಹಾಗೂ ಅರೆದ್ವಿಭಾಷಿಕತೆ**

ದ್ವಿಭಾಷಾ ಪ್ರದೇಶವೊಂದರಲ್ಲಿ ನೆಲೆಸಿರುವ ಭಾಷಿಕರು ತಮ್ಮ ಮನೆಯ ಭಾಷೆಯ ಜೊತೆಗೆ ಬೇರೊಂದು ಭಾಷೆಯನ್ನು ಗ್ರಹಿಸುವ ಅಥವಾ ಅರ್ಥೈಸಿಕೊಳ್ಳುವ ಸಾಮರ್ಥ್ಯ ಅಥವಾ ಕೌಶಲ್ಯ ಮಾತ್ರ ಇರುತ್ತದೆ. ಇಂತಹವರನ್ನು ಅರೆದ್ವಿಭಾಷಿಕರೆಂದು ಗುರ್ತಿಸಲಾಗುತ್ತದೆ. ಹಾಗೂ ಈ ಸಂದರ್ಭವನ್ನು ಅರೆದ್ವಿಭಾಷಿಕತೆ ಎಂದು ಕರೆಯಲಾಗುತ್ತದೆ. ಶೇ.೪೬.೮೪%ರಷ್ಟು ತೆಲುಗು ಭಾಷಿಕರು ಹಾಗೂ ಶೇ.೩.೨%ರಷ್ಟು ಕನ್ನಡ ಭಾಷಿಕರಿರುವ ಕೋಲಾರ ಜಿಲ್ಲೆಯಲ್ಲಿ ಕನ್ನಡಿಗರಾಗಲೀ ತೆಲುಗರಾಗಲಿ ತೆಲುಗನ್ನು ಬಹಳಷ್ಟು ಜನ ಕನ್ನಡಿಗರು ಜಿಲ್ಲೆಯಲ್ಲಿ ತೆಲುಗನ್ನು ಮೌಖಿಕ ನೆಲೆಯಲ್ಲಿ ಬಳಸುವುದನ್ನು ಕಾಣಬಹುದಾಗಿದೆ.

ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿರುವ ಸಾಮಾಜಿಕ ಭಿನ್ನಾಂಶಗಳು ದ್ವಿಭಾಷಿಕತೆಯ ಪ್ರಮಾಣವನ್ನು ಅಳೆಯುವಲ್ಲಿ ಸಾಮಾಜಿಕ ಭಿನ್ನಾಂಶಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಇಲ್ಲಿರುವ ಸಾಮಾಜಿಕ ಭಿನ್ನಾಂಶಗಳನ್ನು ಕುರಿತಾದ ಅರ್ಥವಿವರಣೆ ಕೆಳಕಂಡಂತಿದೆ.

**ಕುಟುಂಬ ವಿಭಕ್ತ-ಅವಿಭಕ್ತ**

ಗಂಡ ಹೆಂಡತಿ ಮತ್ತು ಮಕ್ಕಳು ಮಾತ್ರ ಇರುವ ಕುಟುಂಬವನ್ನು ವಿಭಕ್ತ ಕುಟುಂಬ ಎಂದು ಪರಿಗಣಿಸಲಾಗಿದೆ.

ಮನೆಯ ಯಜಮಾನನ ಹೆಂಡತಿ-ಮಕ್ಕಳೊಂದಿಗೆ ಆತನ ತಂದೆ-ತಾಯಿ, ಸಹೋದರ-ಸಹೋದರಿ ಯರನ್ನೊಳಗೊಂಡಂತೆ ಕುಟುಂಬದ ಇನ್ನಿತರ ಸದಸ್ಯರು ಇರುವ ಕುಟುಂಬಗಳನ್ನು ಅವಿಭಕ್ತ ಕುಟುಂಬವೆಂದು ಪರಿಗಣಿಸಲಾಗಿದೆ.

| | | |
|---|---|---|
| **ತಲೆಮಾರು** | : ೪೫ ವಯಸ್ಸಿನಿಂದ ಆಚೆಗೆ | - ಮೊದಲ ತಲೆಮಾರು |
| | ೨೫- ೪೫ರವರೆಗೆ | - ೨ನೇ ತಲೆಮಾರು |
| | ೧೨- ೨೫ರವರೆಗೆ | - ೩ನೇ ತಲೆಮಾರುಗಳು |
| **ಲಿಂಗ** | : ಮಹಿಳೆ ಮತ್ತು ಪುರುಷ | |
| **ಶಿಕ್ಷಣ** | : ವಿದ್ಯಾವಂತ ಮತ್ತು ಅವಿಧ್ಯಾವಂತ | |

ವರ್ಗ : ಮೇಲ್ವರ್ಗ : ವಾರ್ಷಿಕ ಆದಾಯ ೩ ಲಕ್ಷಕ್ಕೂ ಮೇಲ್ಪಟ್ಟವರು

ಮೇಲ್‌ಮಧ್ಯಮ : ವಾರ್ಷಿಕ ಆದಾಯ ೨ ಲಕ್ಷದಿಂದ ೩ ಲಕ್ಷದವರೆಗೂ

ಮಧ್ಯಮ : ವಾರ್ಷಿಕ ಆದಾಯ ೨ ಲಕ್ಷದವರೆಗೂ ಇರುವವರು

ಕೆಳಮಧ್ಯಮ : ವಾರ್ಷಿಕ ಆದಾಯ ೫೦ ಸಾವಿರದವರೆಗೂ ಇರುವವರು

ಕೆಳವರ್ಗ : ವಾರ್ಷಿಕ ಆದಾಯ ೧೦ ಸಾವಿರದ ಒಳಗಿರುವವರು.

**ಜಾತಿಯನ್ನು ಕುರಿತು**

ಕೋಲಾರ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಕಂಡುಬಂದ ಮಾಹಿತಿಯಿಂದ ಜಿಲ್ಲೆಯ ದ್ವಿಭಾಷಿಕತೆಯ ರಾಚನಿಕ ಸ್ವರೂಪವನ್ನು ತಿಳಿಯಲು ಜಾತಿವಾರು ವಿಂಗಡಣೆ ಮಾಡಿಕೊಳ್ಳಲಾಯಿತು. ಜನಸಂಖ್ಯಾ ಬಾಹುಳ್ಯ ಹೆಚ್ಚಾಗಿರುವ ಜಾತಿ-ವರ್ಗಗಳನ್ನು ಈ ಸಂದರ್ಭದಲ್ಲಿ ಗಣನೆಗೆ ತೆಗೆದು ಕೊಳ್ಳಲಾಯಿತು. ಸರ್ಕಾರದ ಜಾತಿವಾರು ವಿಂಗಡಣೆ ಪ್ರಕಾರ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಇತರೆ ಹಿಂದುಳಿದ ವರ್ಗದವರೂ ಹಾಗೂ ಸಾಮಾನ್ಯ ವರ್ಗಗಳು ಎಂದು ಗುರುತಿಸಿರುವ ಜಾತಿಗಳನ್ನು ಇಲ್ಲಿ ಅದೇ ರೀತಿಯ ಪಾರಿಭಾಷಿಕ ಅರ್ಥದಲ್ಲಿ ಬಳಸಲಾಗಿದೆ.

೧. ಪರಿಶಿಷ್ಟ ಜಾತಿ (ಹೊಲೆಯರು, ಬೋವಿ, ಮಾಸ್ಕೀಕ, ಸಿಂದ್ ಮಾದಿಗರು)

೨. ಪರಿಶಿಷ್ಟ ಪಂಗಡ (ಬೇಡ-ನಾಯಕ, ಮೇದ)

೩. ಒಕ್ಕಲಿಗ (ಮುಸುಕು ಒಕ್ಕಲಿಗ, ರೆಡ್ಡಿ ಒಕ್ಕಲಿಗ, ಮೊರಸು ಒಕ್ಕಲಿಗ)

೪. ಬಲಜಿಗ (ಗಾಜಲು ಬಲಜಿಗ, ಶೆಟ್ಟಿ ಬಲಜಿಗ, ಕಲಾಯಿ ಬಲಜಿಗ)

೫. ಕುರುಬ

೬. ಇತರೆ ಜಾತಿಗಳು (ಅಗಸ, ಈಡಿಗ, ಕುಂಬಾರ, ಗಾಣಿಗ, ಗೊಲ್ಲ, ಬೆಸ್ತ, ವಿಶ್ವಕರ್ಮ, ವೈಶ್ಯ, ವೀರಶೈವ)

# ಅಧ್ಯಾಯ ೩

## ಸಾಮಾಜಿಕ ಭಾಷಾ ವಿಜ್ಞಾನ ಹಾಗೂ ದ್ವಿಭಾಷಿಕತೆ

೩.೧. ಸಾಮಾಜಿಕ ಭಾಷಾ ವಿಜ್ಞಾನವನ್ನು ಕುರಿತ ನೋಟ

೩.೨. ಸಾಮಾಜಿಕ ಭಿನ್ನಾಂಶಗಳು

೩.೩. ದ್ವಿಭಾಷಿಕತೆಯ ಸುತ್ತಮುತ್ತ

೩.೪. ದ್ವಿಭಾಷಿಕತೆ ಬಗೆಗಳು

೩.೫. ಪಾಶ್ಚಾತ್ಯ ಸಂದರ್ಭದಲ್ಲಿ ದ್ವಿಭಾಷಿಕತೆಯ ಅಧ್ಯಯನದ ಬೆಳವಣಿಗೆ

೩.೬. ದ್ವಿಭಾಷಿಕತೆ ಕುರಿತು ಭಾರತ ಹಾಗೂ ಕರ್ನಾಟಕ ಸಂದರ್ಭದಲ್ಲಿ ನಡೆದ ಅಧ್ಯಯನಗಳು

೩

# ಸಾಮಾಜಿಕ ಭಾಷಾ ವಿಜ್ಞಾನ ಹಾಗೂ ದ್ವಿಭಾಷಿಕತೆ

## ೩.೧. ಸಾಮಾಜಿಕ ಭಾಷಾ ವಿಜ್ಞಾನವನ್ನು ಕುರಿತ ಒಂದು ನೋಟ

ಭಾಷಾ ವಿಜ್ಞಾನದ ಅತ್ಯಂತ ಪ್ರಮುಖವಾದ ಅಂಗ ಸಾಮಾಜಿಕ ಭಾಷಾವಿಜ್ಞಾನ. ಇತ್ತೀಚಿನ ವರ್ಷಗಳಲ್ಲಿ ಸಾಮಾಜಿಕ ಭಾಷಾವಿಜ್ಞಾನವು ಭಾಷಾ ವಿಜ್ಞಾನದಲ್ಲಿ ಸಂಶೋಧನೆ ಮಾಡುತ್ತಿರುವ ಭಾಷಾವಿಜ್ಞಾನಿಗಳಿಗೆ ತುಂಬಾ ಆಸಕ್ತಿದಾಯಕವಾದ ಕ್ಷೇತ್ರವಾಗಿದೆ. ರಾಷ್ಟ್ರವೊಂದರ ಭಾಷೆ ಮತ್ತು ಸಂಸ್ಕೃತಿ ಸಮಾಜದಲ್ಲಿ ಅದು ಪಡೆದಿರುವ ಸ್ಥಾನ ಹಾಗೂ ಮಹತ್ವವನ್ನು ಕುರಿತು ಇದು ಚರ್ಚಿಸುತ್ತದೆ. ಹೀಗಾಗಿ ಇಂದು ಸಾಮಾಜಿಕ ಭಾಷಾವಿಜ್ಞಾನವು ಅತ್ಯಂತ ಮಹತ್ವದ ಶಾಖೆಯಾಗಿ ಬೆಳೆಯುತ್ತಿದೆ.

ಇಂಗ್ಲೀಷಿನ ‘SOCIOLINGUISTICS’ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಸಾಮಾಜಿಕ ಭಾಷಾವಿಜ್ಞಾನ ಎಂದು ಬಳಸಲಾಗುತ್ತಿದೆ. ಪ್ರಪ್ರಥಮ ಬಾರಿಗೆ ಹ್ಯಾವರ್ ಸಿ. ಕ್ಯೂರಿ ೧೯೫೨ರಲ್ಲಿ ಪ್ರಚಾರಕ್ಕೆ ತಂದುದಾಗಿ ದಿಟ್ಟಮಾರ್ (೧೯೭೬, ೧೨೭) ಅವರು ಪ್ರಸ್ತಾಪಿಸುತ್ತಾರೆ. ಆದರೆ ಹ್ಯಾವರ್ ಕ್ಯೂರಿ ನೇರವಾಗಿ ಈ ಪರಿಕಲ್ಪನೆಯನ್ನು ನೀಡಲಿಲ್ಲ. ಇದಕ್ಕೂ ಮುಂಚೆಯೇ ಪ್ರಖ್ಯಾತ ಭಾಷಾವಿಜ್ಞಾನಿ ಫರ್ಡಿನೆಂಡ್ ಡಿ ಸಸ್ಸೂರ್ “ಭಾಷೆ ಎನ್ನುವುದು ಒಂದು ಸಾಮಾಜಿಕ ವಿಷಯ. ಆದ್ದರಿಂದ ಭಾಷೆ ಮತ್ತು ಸಮಾಜ ಒಂದಕ್ಕೊಂದು ಅಂತರ್ಗತವಾಗಿದೆ”ಯೆಂದು ಹೇಳಿದ. ಭಾಷಾವಿಜ್ಞಾನದ ಬೆಳವಣಿಗೆ ಹಾದಿಯಲ್ಲಿ ಪ್ರಾರಂಭಗೊಂಡ ವರ್ಣನಾತ್ಮಕವಾದ, ಸಂರಚನಾವಾದ, ಉತ್ಪಾದಕ ವ್ಯಾಕರಣ ತತ್ವಗಳು ಸಾಮಾಜಿಕ ಭಾಷಾವಿಜ್ಞಾನಕ್ಕೆ ಹೊಸರೀತಿಯ ಪ್ರಚೋದನೆಯನ್ನು ನೀಡಿದವು.

ಅಮೇರಿಕ ಮತ್ತು ಪ್ರಪಂಚದ ಇನ್ನಿತರ ಕಡೆಗಳಲ್ಲಿ ಮಾನವಶಾಸ್ತ್ರಜ್ಞರು ಭಾಷಾಧ್ಯಯನದಲ್ಲಿ ಆಳವಾದ ಆಸಕ್ತಿಯನ್ನು ತೋರಿಸಿದರು. ಮಾನವಶಾಸ್ತ್ರಜ್ಞರುಗಳಾದ ಬೋಸ್, ಸಪಿರ್ ಮತ್ತು ವೂರ್ಫ್ ಅವರುಗಳು ಭಾಷೆ ಮತ್ತು ಸಂಸ್ಕೃತಿಯ ಅಧ್ಯಯನಗಳನ್ನು ಒಟ್ಟಿಗೆ ಕೈಗೊಳ್ಳುವ ಅಗತ್ಯತೆಯನ್ನು ಒತ್ತಿ ಹೇಳಿದರು. ಭಾಷಾರೂಪಗಳು ಸಂಸ್ಕೃತಿಯ ಭಾಗವೆಂದೂ ಮತ್ತು ಸಂಸ್ಕೃತಿಯ ವಿಶೇಷ ಗುಣಗಳು ಅದರಲ್ಲಿ ಅಡಗಿವೆಯೆಂದು ಹೇಳಿದರು. ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಬೇಕಾದರೆ ಗೊತ್ತಾದ ಒಂದು ಸಮುದಾಯ ಅಥವಾ ಸಾಂಸ್ಕೃತಿಕ ಗುಂಪುಗಳ ಭಾಷೆಯನ್ನು ಅಧ್ಯಯನ ಮಾಡಬೇಕಾದ

ಅಗತ್ಯವಿದೆ ಎನ್ನಲಾಗಿದೆ. ಆದರೆ ಅವರ ಸಂಶೋಧನೆಗಳು ಕೇವಲ ಇಂಡೋಅಮೇರಿಕನ್ ಭಾಷೆಗಳ ಭಾಂದವ್ಯಗಳು ಮತ್ತು ವರ್ಣಪದ್ಧತಿಗಳಿಗಷ್ಟೇ ಸೀಮಿತವಾಯಿತು. ಇದಕ್ಕೆ ಕಾರಣ ಅವರ ಮೂಲ ಉದ್ದೇಶ ಕೇವಲ ಸಂಸ್ಕೃತಿಯ ಅಧ್ಯಯನಕ್ಕಷ್ಟೇ ಸೀಮಿತಗೊಂಡಿದ್ದು. ಸಾಮಾಜಿಕ ಭಾಷಾವಿಜ್ಞಾನದ ಅಳತೆಗೋಲುಗಳಲ್ಲಿ ಅದನ್ನು ಅವರು ಶೋಧಿಸಿದ್ದು ಬರೀ ಆನುಷಂಗಿಕವಾಗಿ ಮಾತ್ರ. ಬ್ರಿಟೀಷ್ ಮಾನವಶಾಸ್ತ್ರಜ್ಞ ಮಲಿನೋವ್‌ಸ್ಕಿ ಸಹ ಭಾಷೆ ಮತ್ತು ಅದರ ಸಾಂಸ್ಕೃತಿಕ ಆಶಯಗಳನ್ನು ಕುರಿತು ಅಧ್ಯಯನ ಮಾಡಿದ. ಆತ ಭಾಷಿಕ ರೂಪಗಳ ಸಾಂದರ್ಭಿಕ ಅರ್ಥ(Contextual meaning)ವನ್ನು ಕುರಿತು ಪ್ರಸ್ತಾಪಿಸಿದ. ಈ ವಿದ್ವಾಂಸರುಗಳು ಮುಂದೆ 'ಮನಃಶಾಸ್ತ್ರೀಯ ಭಾಷಾವಿಜ್ಞಾನಿಗಳು' ಎಂದು ಮತ್ತು ಅವರ ಕಾರ್ಯಕ್ಷೇತ್ರವನ್ನು 'ಮಾನವ ಶಾಸ್ತ್ರೀಯ ಭಾಷಾವಿಜ್ಞಾನ' ಎಂದು ಕರೆಯಲಾಯಿತು.

ಇತ್ತೀಚೆಗೆ ಕೆಲವು ಭಾಷಾವಿಜ್ಞಾನಿಗಳು ಮಾನವಶಾಸ್ತ್ರೀಯ ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಹೊಸ ರೀತಿಯ ಒಳನೋಟ ಅಥವಾ ಹೊಳಹುಗಳನ್ನು ನೀಡಿದ್ದಾರೆ.

ಡೆಲ್ ಹೈಮ್ಸ್ ಅವರು ಈ ರೀತಿಯ ಮೌಲ್ಯಯುತ ಕೊಡುಗೆಯನ್ನು ಈ ಕ್ಷೇತ್ರಕ್ಕೆ ನೀಡಿದವರಾಗಿದ್ದು, ರೂಪಾಂತರ ವ್ಯಾಕರಣಕಾರರಿಗಿಂತ ಭಿನ್ನವಾದ ನಿಲುವನ್ನು ಭಾಷಾಧ್ಯಯನ ವಿಷಯದಲ್ಲಿ ಹೊಂದಿದವರಾಗಿದ್ದಾರೆ. ಸಾಮಾಜಿಕ ಭಾಷಾವಿಜ್ಞಾನಿಗಳು ಎಲ್ಲ ವರ್ಗದ ಮಾಹಿತಿದಾರರಿಂದ 'ಭಾಷಿಕ ವ್ಯತ್ಯಾಸ'ವನ್ನು ಗಣನೆಗೆ ತೆಗೆದುಕೊಂಡರೆ, ರೂಪಾಂತರ ವ್ಯಾಕರಣಕಾರರು ಶಿಷ್ಟ ಭಾಷಿಕನ ಭಾಷಾಪದ್ಧತಿಯ ಮೇಲಿರುವ ಪರಿಪೂರ್ಣ ಕೌಶಲ್ಯವನ್ನು ಕುರಿತು ನಂಬುತ್ತಾರೆ. ರೂಪಾಂತರ ವ್ಯಾಕರಣಕಾರರು ಒಬ್ಬ ವ್ಯಕ್ತಿಯ ಮಾತಿನ ಶೈಲಿಯನ್ನು ಮತ್ತೊಬ್ಬ ವ್ಯಕ್ತಿಯ ಮಾತಿನ ಶೈಲಿಗೆ ಸಮನಾಗಿರುವಂತಹ ಭಾಷೆಯ ಸಮರೂಪದ ಪದ್ಧತಿಯಲ್ಲಿ ಆಸಕ್ತರಾಗಿದ್ದರೆ, ಸಾಮಾಜಿಕ ಭಾಷಾವಿಜ್ಞಾನಿಗಳು ಎರಡೂ ಭಿನ್ನ ಸಂದರ್ಭಗಳಲ್ಲಿಯ ಎಲ್ಲಾ ಭಾಷಿಕ ಉಚ್ಚಾರಣಾ ಶೈಲಿಯನ್ನು ಪ್ರಸ್ತುತವೆಂದು ಪರಿಗಣಿಸುತ್ತಾರೆ.

ಡೆಲ್ ಹೈಮ್ಸ್(೧೯೧೪)ರವರು ನೋಮ್‌ಚಾಮಸ್ಕಿಯವರ ಭಾಷಾ ನಿಲುವುಗಳಿಗಿಂತ ಬೇರೆಯಾಗಿದ್ದು, 'ಸಂವಹನಶೀಲ ಸಾಮರ್ಥ್ಯ' ಪರಿಕಲ್ಪನೆಯನ್ನು ಕುರಿತ ಒಲವುಳ್ಳವರಾಗಿದ್ದಾರೆ. ಅಷ್ಟೇ ಅಲ್ಲದೆ ಹೈಮ್ಸ್‌ರವರು ಮಾನವಶಾಸ್ತ್ರೀಯ ಭಾಷಾವಿಜ್ಞಾನಿಗಳಿಗಿಂತ ಭಿನ್ನರಾಗಿದ್ದಾರೆ. ಕಾರಣ ಅವರು ಭಾಷಿಕ ಸಮುದಾಯ, ಭಾಷಿಕ ಸಂದರ್ಭ, ಭಾಷಿಕ ನಿಯಮಗಳ ಕುರಿತಾಗಿ ಆಸಕ್ತಿ ಹೊಂದಿದ್ದಾರೆ. ಭಾಷಿಕ ಘಟಕಗಳಿಗೂ ಮತ್ತು ಭಾಷಿಕ ನಿಯಮಗಳಿಗೂ ಇರುವ ಅಂತಃಸಂಬಂಧವನ್ನು ಮತ್ತು ಭಾಷೆಯ ಸಾಮಾನ್ಯ ಉಪಯೋಗವನ್ನು ಕುರಿತಾದ ಅಧ್ಯಯನಕ್ಕೆ ಹೆಚ್ಚಿನ ಒತ್ತುಕೊಟ್ಟರು. ಅಷ್ಟೇ ಅಲ್ಲದೆ ಭಾಷಿಕ ಸಂಗತಿಗಳು, ಸಂದರ್ಭೋಚಿತವಾದ ನಿಯಮಗಳು, ಭಾಷಿಕನಿಗೂ+ಕೇಳುಗನಿಗೂ ನಡುವೆ ಇರುವ ಸಂಬಂಧ ಮತ್ತು ವಿಷಯದ ಆಯ್ಕೆಯ ರೂಪಗಳನ್ನು ಕುರಿತು ವಿವರಿಸಬೇಕೆಂದು ಒತ್ತಿ ಹೇಳುತ್ತಾರೆ.

ಈ ಎಲ್ಲಾ ಕಾರಣಗಳಿಂದ 'ಸಂವಹನಶೀಲ ಸಾಮರ್ಥ್ಯ'ವನ್ನು ಕುರಿತು ಪ್ರಸ್ತಾಪಿಸುತ್ತಾರಲ್ಲದೆ ವ್ಯಾಕರಣದಿಂದ ಬರುವ ತೊಂದರೆಗಳನ್ನು ನಿವಾರಿಸಲು ಸಾಧ್ಯವಿಲ್ಲವೆನ್ನುತ್ತಾರೆ.

ಡೆಲ್ ಹೈಮ್ಸ್‌ರ ಅನುಯಾಯಿಗಳನ್ನು ಜನಾಂಗೀಯ ಭಾಷಾವಿಜ್ಞಾನಿಗಳೆಂದು ಅದರ ಕಾರ್ಯಕ್ಷೇತ್ರವನ್ನು 'ಜನಾಂಗೀಯ ಭಾಷಾವಿಜ್ಞಾನ' ಎಂದೂ ಕರೆದಿದ್ದಾರೆ. ಗುಂಫರ್ಜ್ ಅವರು ಕೂಡ 'ಜನಾಂಗೀಯ ಭಾಷಾವಿಜ್ಞಾನಿ'ಯಾಗಿದ್ದು ಯಾವ ಒಂದು ಗುಂಪಿನ ಭಾಷಿಕರು ಭಾಷೆಯ ಸಾಮಾನ್ಯ ನಿಯಮಗಳು ಮತ್ತು ವ್ಯತ್ಯಾಸಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆಯೋ ಅಂತ ಬಣವನ್ನು "ಭಾಷಿಕ (ಭಾಷಾ) ಸಮುದಾಯ" ಎಂದು ಕರೆದಿದ್ದಾರೆ(ಗುಂಫರ್ಜ್ ೧೯೭೩: ೨೨೩).

ಡೆಲ್ ಹೈಮ್ಸ್‌ರವರು "ಭಾಷಿಕ ಸಮುದಾಯ" ಎನ್ನುವುದು ಭಾಷಿಕತೆಯ ನಿರ್ವಹಣೆ ಮತ್ತು ಅರ್ಥವಿವರಣೆಯ ನಿಯಮಗಳ ಜ್ಞಾನವನ್ನು ಹಂಚಿಕೊಳ್ಳುವುದೆನ್ನುತ್ತಾರೆ. ಆ ರೀತಿ ಹಂಚಿಕೆಯಾದ ಒಂದು ಭಾಷಾರೂಪ ಮತ್ತು ಜ್ಞಾನದ ಮಜಲುಗಳನ್ನು ಬಳಕೆಯಾಗಿ ಹೊಂದಿರುತ್ತದೆ. ಅಂದರೆ ಎರಡೂ ನಿಯಮಗಳು ಭಾಷಿಕ ಸಮುದಾಯವನ್ನು ವ್ಯಾಖ್ಯಾನಿಸುವಲ್ಲಿ ಅಗತ್ಯವಾಗುತ್ತದೆ(ಡೆಲ್ ಹೈಮ್ಸ್ ೧೯೭೪).

ಕೆಲವರು ಸಾಮಾಜಿಕ ಭಾಷಾವಿಜ್ಞಾನವನ್ನು (Sociology of Language) 'ಭಾಷಾ ಸಮಾಜ ವಿಜ್ಞಾನ' ಎಂದು ಕರೆಯುತ್ತಾರೆ. ಅದರ ಅರ್ಥ ಭಾಷಾ ನಡವಳಿಕೆಯ ಸಾಮಾಜಿಕ ಸಂಘಟನೆ ಎಂದು. ಇದು ಭಾಷಾ ಬಳಕೆಗಷ್ಟೇ ಸೀಮಿತವಾದುದಲ್ಲ. ಭಾಷಿಕ ಮನೋಭಾವ ಮತ್ತು ಭಾಷಾ ವರ್ತನೆಗಳ ಪ್ರಕಟವಾಗುವಿಕೆಯು ಭಾಷೆ ಮತ್ತು ಭಾಷಾ ಬಳಕೆದಾದರಿಗೆ ಸಂಬಂಧಿಸಿದೆಯೆಂದು ಹೇಳುತ್ತಾರೆ. ಆದ್ದರಿಂದ ಸಾಮಾಜಿಕ ಭಾಷಾ ವಿಜ್ಞಾನ ಮತ್ತು ಭಾಷಾ ಸಮಾಜ ವಿಜ್ಞಾನಕ್ಕೂ ಅಂತಹ ವ್ಯತ್ಯಾಸವೇನೂ ಇಲ್ಲ. ಇವೆರಡೂ ಕೂಡ ಮಾನವಶಾಸ್ತ್ರೀಯ ಭಾಷಾ ವೈಜ್ಞಾನಿಕ ನಿಲುವು ಒಂದು ಅಂಶದ ಭಾಷೆಯ ಸಮಾಜದ ರಚನೆಯ ಸಂಗತಿಗಳ ಸಂಗ್ರಹಕ್ಕಿಂತ ಮಿಗಿಲಾದುದು ಎಂಬ ವಿಲಿಯಂ ಬ್ರೈಟ್ ಅವರ (೧೯೭೬: ೨೪) ಅಭಿಪ್ರಾಯ ಇಲ್ಲಿ ಉಲ್ಲೇಖನೀಯ.

ಸೂಕ್ಷ್ಮ ಸಾಮಾಜಿಕ ವಿಜ್ಞಾನಕ್ಕೂ ಮತ್ತು ಸಮಗ್ರ ಭಾಷಾವಿಜ್ಞಾನಕ್ಕೂ ನಡುವೆ ಭೇದ ಕಲ್ಪಿಸಲಾಗಿದೆ. ಆರ್.ಟಿ. ಬೆಲ್ ಅವರ ಪ್ರಕಾರ "ಸೂಕ್ಷ್ಮ ಸಾಮಾಜಿಕ ಭಾಷಾವಿಜ್ಞಾನ"ವೆಂದರೆ ಇಬ್ಬರು ವ್ಯಕ್ತಿಗಳಲ್ಲಿರುವ ಭಾಷೆಕಾರ್ಯ ಮತ್ತು ಸಣ್ಣ ಗುಂಪುಗಳಲ್ಲಿನ ಅಂತಃಕ್ರಿಯೆ(೧೯೭೬:೧೨). "ಆದ್ದರಿಂದ ಸೂಕ್ಷ್ಮ ಸಾಮಾಜಿಕ ಭಾಷಾವಿಜ್ಞಾನದ ಮೇಲಿನ ಈ ಹೇಳಿಕೆಯು ಸ್ವಾಯತ್ತ ಮತ್ತು ಸಂಬಂಧಿತವಲ್ಲದ ವ್ಯಕ್ತಿ ಭಾಷೆಗಳ ಸಂಗ್ರಹಣೆಯ ವಿತರಣೆಯಾಗಿದ್ದು, ಉಪಭಾಷೆಗಳೊಳಗಿನ ಗುಂಪನ್ನು ವ್ಯಾಖ್ಯಾನಿಸುತ್ತದೆ. ಮತ್ತು ಸಾಮಾಜಿಕ ಭಾಷಾವಿಜ್ಞಾನದ ಮೇಲಿನ ವಿತರಣೆಯನ್ನು ವಸ್ತುವಿನ ನೆಲೆಯಲ್ಲಿ ನಿರಾಕರಿಸುತ್ತದೆ"

(೧೯೭೬: ೨೬). ಆದ್ದರಿಂದ ಸಾಮಾಜಿಕ ಭಾಷಾವಿಜ್ಞಾನವು ವ್ಯಕ್ತಿಯ ಮತ್ತು ತಾತ್ಕಾಲಿಕ ಸನ್ನಿವೇಶಗಳಲ್ಲಿನ ಭಾಷೆಯ ಉಪಯೋಗ, ಶೈಲಿ ಮತ್ತು ಗುಂಪಿನ ಗುರ್ತಿಸುವಿಕೆಯನ್ನು ಶಾಶ್ವತ ನೆಲೆಯಲ್ಲಿ ವ್ಯವಹರಿಸುತ್ತದೆಂದು ನಂಬಲಾಗುತ್ತದೆ. 'ಸಮಗ್ರ ಸಾಮಾಜಿಕ ಭಾಷಾವಿಜ್ಞಾನವೆಂದರೆ ವಿಶಾಲ ಗುಂಪುಗಳ ಮತ್ತು ದೇಶ ಅಥವಾ ರಾಜ್ಯದ ಒಟ್ಟಾರೆ ಸ್ಥಿತಿಯ ನಡುವಣ ಆಯ್ಕೆ' (ಬೆಲ್, ೧೯೭೬: ೧೨) "ಸಮಗ್ರ ಸಾಮಾಜಿಕ ವಿಜ್ಞಾನದ ಪ್ರಸ್ತುತತೆ"ಯೆಂದರೆ ಅದು ಆಸಕ್ತದಾಯಕವಾದುದು ಮತ್ತು ಯೋಗ್ಯವಾದುದು. ಕಾರಣ ಪ್ರತಿಯೊಬ್ಬ ಭಾಷಿಕನೂ ವೈಯಕ್ತಿಕವಾಗಿ ಕಾಣಿಸಿಕೊಳ್ಳುವುದಿಲ್ಲ. ಆತ ಸಮುದಾಯ/ಗುಂಪೊಂದರ ಪ್ರತಿನಿಧಿಯಾಗಿ ಅಂದರೆ ಸಾಮಾಜಿಕ ಭಿನ್ನಾಂಶಗಳಾದ ವಯಸ್ಸು, ಲಿಂಗ, ವಿದ್ಯಾರ್ಹತೆ, ಜಾತಿ ಮತ್ತು ಧರ್ಮಗಳ (ಬೆಲ್ ೧೯೭೬: ೭೬) ಆಧಾರದ ಮೇಲೆ ಗುರ್ತಿಸಲ್ಪಡುತ್ತಿರುತ್ತಾನೆ.

ಬೆರಿಲ್ ಬರ್ನ್‌ಸ್ಟೀನ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕೆಳಹಂತದ ಸಾಮಾಜಿಕ ಗುಂಪುಗಳಿಂದ ಬಂದ ಮಕ್ಕಳ ಅಭಿವೃದ್ಧಿ 'ನಿರ್ಬಂಧಿತ ಸಂಕೇತ' ಮತ್ತು ಮೇಲ್‌ಮಟ್ಟದ ಗುಂಪುಗಳ 'ವಿಸ್ತರಣಾ ಸಂಕೇತ' ಕುರಿತು ಪ್ರಸ್ತಾಪಿಸುತ್ತಾರೆ. ಆತನ ಸಂಕೇತ ತತ್ವದ ವಸ್ತುವೇನೆಂದರೆ ಕಲಿಯುವ ಭಾಷೆಯ ತೊಂದರೆಗಳ ಅನ್ವೇಷಣೆ. ಕಾರಣ ನಿರ್ಬಂಧಿತ ಸಂಕೇತದ ಅಭಿವೃದ್ಧಿಯು ಮಗುವನ್ನು ಕೆಳವರ್ಗಗಳ ಸಾಮಾಜಿಕ ಗುಂಪುಗಳಿಂದ 'ಸಂವಹನಶೀಲ ಸಾಮರ್ಥ್ಯ'ಕ್ಕೆ ತಡೆಯೊಡ್ಡುತ್ತದೆ(ಬರ್ನ್‌ಸ್ಟೀನ್ ೧೯೬೪: ೬). ಮಾರ್ಕ್ಸ್‌ವಾದಿ ಸಾಮಾಜಿಕ ಭಾಷಾವಿಜ್ಞಾನಿಗಳು ಆರ್ಥಿಕ ವಿಷಗಳು 'ನಿರ್ಬಂಧಿತ ಸಂಕೇತ'ದ ಅಭಿವೃದ್ಧಿಗೆ ಜವಾಬ್ದಾರಿ ಎಂಬ ಬರ್ನ್‌ಸ್ಟೀನ್ ಹೇಳಿಕೆಗೆ ಪೂರ್ಣಸಹಮತ ವ್ಯಕ್ತಪಡಿಸಿದ್ದರು. ಮಾರ್ಕ್ಸ್‌ವಾದಿಗಳು ಸಾಮಾಜಿಕ ಭಾಷಾವಿಜ್ಞಾನದ ಬದಲಾವಣೆಗಳು ಪ್ರಬಲವಾಗುತ್ತಿರುವ ವರ್ಗಗಳು ರಾಜಕೀಯ ನಿಯಂತ್ರಣವನ್ನು ಪ್ರಬಲವರ್ಗಗಳ ಮೇಲೆ ನಿಯಂತ್ರಣವನ್ನು ಇಟ್ಟುಕೊಳ್ಳುತ್ತವೆಂದು ನಂಬುತ್ತಾರೆ. ಪ್ರಬಲವಾಗುತ್ತಿರುವ ವರ್ಗಗಳು ಭಾಷಾ ಬಡ್ತಿಯಿಂದಾಗಿ ಸಾಮಾಜಿಕ ನಿಯಂತ್ರಣಗಳ ಮೇಲೆ ಪರಿಣಾಮ ಬೀರುತ್ತವೆ.

ಕೆಲವು ಸಾಮಾಜಿಕ ಭಾಷಾವಿಜ್ಞಾನಿಗಳು ಕುಟುಂಬ ಮಾದರಿಗಳು ಕೂಡ ಈ ರೀತಿ ಸಂಕೇತಗಳ ಅಭಿವೃದ್ಧಿಗೆ ಕಾರಣವೇ ಹೊರತು ಆರ್ಥಿಕ ತಂತ್ರವಲ್ಲ ಎಂಬ ಕಾರಣಗಳನ್ನು ಪ್ರಸ್ತಾಪಿಸುತ್ತಾರೆ. ಸಂರಚನಾವಾದಿಗಳು ಮತ್ತು ಸಾಮಾಜಿಕ ಭಾಷಾವಿಜ್ಞಾನಿಗಳ ನಡುವಿನ ಒಂದು ವ್ಯತ್ಯಾಸದ ಅಂಶವೆಂದರೆ ಭಾಷೆಯು ಸಮಾರೂಪವಾದುದು ಅಥವಾ ಏಕರೂಪದಿಂದ ಕೂಡಿದೆಯೆಂಬುದು. ಭಾಷೆಯಲ್ಲಿನ ಭಾಷಿಕ ಬದಲಾವಣೆಯನ್ನು ಅವರು 'ಮುಕ್ತ ವ್ಯತ್ಯಾಸ'ವೆನ್ನುವುದು ಮುಕ್ತವಾದುದಲ್ಲ. ಅದು ಸಾಮಾಜಿಕ ಷರತ್ತಿಗೆ ಒಳಪಟ್ಟಿದ್ದೆಂದು ಹೇಳುತ್ತಾರೆ(ವಿಲಿಯಂ ಬ್ರೈಟ್: ೧೯೬೪).

ಸಾಮಾಜಿಕ ಭಾಷಾವಿಜ್ಞಾನಿಗಳು ಉಪಭಾಷಾವಿಜ್ಞಾನಿಗಳಿಗಿಂತ ಭಿನ್ನವಾದವರು. ಏಕೆಂದರೆ ಉಪಭಾಷಾವಿಜ್ಞಾನಿಗಳು ಸಾಮಾಜಿಕ ವಿಷಯಗಳನ್ನು ನಿರಾಕರಿಸುತ್ತಾರೆ. ನಿಜವಾಗಿ ಭಾಷಿಕ ಬದಲಾವಣೆ

ಶುರುವಾಗುವುದು ಒಬ್ಬ ವ್ಯಕ್ತಿಯಿಂದ ಮತ್ತು ಅದು ಇತರರಿಂದ ಕಾಲಕ್ರಮದಲ್ಲಿ ಅನುಕರಣೆಗೊಳಗಾಗುತ್ತದೆ. ಭಾಷಿಕ ವೈಶಿಷ್ಟ್ಯಗಳ ಅನುಕರಣೆಯು ಸಾಮಾಜಿಕ ಶ್ರೇಣಿಕೃತ ವ್ಯವಸ್ಥೆಯ ಮೇಲೆ ಅಥವಾ ಅನುಕರಿಸುವವನು ಮತ್ತು ಅನುಕರಣೀಯ ವ್ಯಕ್ತಿಯ ನಡುವಿನ ಸಂಬಂಧಗಳ ಮೇಲೆ ಅವಲಂಬಿತವಾಗಿರುತ್ತದೆ. ಅನುಕರಿಸುವವನು ಮತ್ತು ಅನುಕರಣೀಯ ವ್ಯಕ್ತಿ ಇಬ್ಬರೂ ಸಾಮಾಜಿಕ ಗುಂಪಿನ ಸದಸ್ಯರಾಗಿರುತ್ತಾರೆ. ಈ ಗುಂಪುಗಳ ನಡುವಿನ ಸಂಬಂಧವು ವಯಸ್ಸು, ಲಿಂಗ, ವೃತ್ತಿ, ಮೂಲಸ್ಥಳ, ಧರ್ಮ ಇತ್ಯಾದಿಗಳಿಂದಾಗಿರುತ್ತದೆ. ಇದು ಗುಂಪಿನ ಒಗ್ಗಟ್ಟಿಗೆ ಕಾರಣವಾಗಿರುತ್ತದೆ. ಮತ್ತು ಅದರ ಉಪಯೋಗವನ್ನು ವಿಶಾಲಗೊಳಿಸುತ್ತದೆ. ಪ್ರಾದೇಶಿಕ ಏಕತೆಯ ಲಕ್ಷಣ ಬಂದ ಮೇಲೆ ಅದರ ಉಪಯೋಗವು ಮತ್ತೊಮ್ಮೆ ವಿಶಾಲವಾಗುತ್ತಾ ಹೋಗಬಹುದು. ಪ್ರಾದೇಶಿಕ ಏಕತೆಯು ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಪ್ರಬಲತೆಯನ್ನು ಪಡೆಯುತ್ತಾ ಹೋಗಬಹುದು. ಹಾಗಾಗಿ ಅನುಕರಣೆ ಎಂಬುದು ಭೌಗೋಳಿಕತೆಗಿಂತ ಹೆಚ್ಚಾಗಿ ಸಾಮಾಜಿಕವಾಗಿ ಮಹತ್ವವನ್ನು ಪಡೆದಿರುವಂತಹುದು. ಪ್ರಾದೇಶಿಕ ಲಕ್ಷಣಗಳು ಸಾಮಾಜಿಕ ಲಕ್ಷಣ ನಿರ್ಣಯಗಳಾಗಿ ಪರಿಣಮಿಸುವುದು ಮೇಲೆ ಹೇಳಿದ ಕಾರಣಗಳಿಂದಾಗಿ 'ಅಕ್ಷರ-ಧ್ವನಿ ತಿದ್ದುಪಡಿ'ಯು ಸಾಮಾಜಿಕ ತಿದ್ದುಪಡಿಯಾಗಿ ವ್ಯಕ್ತಿಯ ಭಾಷಿಕ ರೂಪಗಳ ಮೇಲೆ ಹೇರಲ್ಪಡುತ್ತದೆ. ಸಂರಚನಾ ಸಮರೂಪದ ಪ್ರಭಾವವು ಮೇಲಿನ ಒತ್ತಡಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬೇರೆ ಭಾಷಿಕ ಘಟಕಗಳ ಜೊತೆ ಸಾಮಾನ್ಯೀಕರಣಗೊಂಡು ಕರೆದೊಯ್ಯುತ್ತದೆ (ಲೆಬೊವ್, ೧೯೭೮: ೩೯). ಸಾಮಾಜಿಕವಾಗಿ ನಿರ್ಣಯಗೊಂಡ ಈ ಲಕ್ಷಣಗಳು ಯಾವಾಗ ಭಾಷಿಕ ಬದಲಾವಣೆಗಳ ಪ್ರಕ್ರಿಯೆಯಲ್ಲೂ 'ಭಾಷಿಕ ತಿದ್ದುಪಡಿ'ಯು ಒಬ್ಬ ವ್ಯಕ್ತಿಯಿಂದ ಕಾಲಾನುಕ್ರಮದಲ್ಲಿ ನಿರಂತರ ಬದಲಾವಣೆಗೆ ಒಳಪಟ್ಟು ಭಾಷಿಕರು ಅದನ್ನು ಅನುಸರಿಸುವಂತೆ ಮಾಡುತ್ತದೆ(ಸ್ಟುರ್ಟೆವಾಂಟ್ ೧೯೪೭).

ಎಂ ಬರ್ನ್‌ಸ್ಟೀನ್ ಅವರ ಎರಡು ಮುಖ್ಯ ಸಂಗತಿಗಳು ಭಾಷಿಕ ಬದಲಾವಣೆ ಕಾರಣವಾಗಿರುವುದನ್ನು ಗುರ್ತಿಸುತ್ತಾರೆ. ೧. ಸಾಮಾಜಿಕ ಒತ್ತಡ ಮತ್ತು ೨. ಆಂತರಿಕ ಭಾಷಿಕ ಒತ್ತಡ (೧೯೭೩: ೪೯) ಎಂಬುದಾಗಿ ಒಂದು ವರ್ಗ ಅಥವಾ ಗುಂಪಿನ ಮತ್ತು ಇತರ ಮೇಲೆ ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸುವುದಕ್ಕಾಗಿ ಸಾಮಾಜಿಕ ಒತ್ತಡ ಕಾರಣವಾಗುತ್ತದೆ. ಭಾಷಾನಡವಳಿಕೆಯ ಸ್ವರೂಪವು ಭಾಷಿಕನ ಸಾಮಾಜಿಕ ಸ್ಥಾನಮಾನ ಬದಲಾದಂತೆ, ತೀವ್ರಗತಿಯಲ್ಲಿ ಬದಲಾಗುತ್ತದೆ(ಲೆಬೊವ್, ೧೯೭೮: ೧೧೧). ಭಾಷಾ ನಡುವಳಿಕೆಯು ವೇಗವಾಗಿ ಬದಲಾಗಲು ಮುಖ್ಯ ಕಾರಣ ಭಾಷೆ ಎಂಬುದು ಸಂಸ್ಕೃತಿಯ ಒಂದು ಭಾಗವಾಗಿದ್ದು, ಅದು ಅನುವಂಶೀಕತೆಯಿಂದ ಬಂದದ್ದಲ್ಲ(ವಿಲಿಯಂ ಬ್ರೈಟ್: ೧೯೭೬: ೨). ಆಂತರಿಕ ಭಾಷಿಕ ಒತ್ತಡವು ಭಾಷಿಕ ಪದ್ಧತಿಯಲ್ಲಿನ ಸಮಾನತೆ ಹೆಚ್ಚಾಗಲು ಕಾರಣವಾಗುತ್ತದೆ(ಬರ್ನ್‌ಸ್ಟೀನ್ ೧೯೭೩: ೪೯). ಜನಾಂಗೀಯ ಭಾಷಾ ವಿಜ್ಞಾನಿಗಳು ಇದನ್ನೇ 'ಭಾಷಾ ಸಾಂಸ್ಕೃತೀಕರಣ' (ಡೆಲ್ ಹೈಮ್ಸ್

೧೯೭೦) ಎನ್ನುತ್ತಾರೆ. ಬದಲಾವಣೆಯ ಮೂಲವು ಅದರ ಪ್ರಚಾರದಿಂದ ಅಥವಾ ಇತರರ ಸ್ವೀಕರಣದಿಂದ ಆಗುವಂಥದ್ದು(ಲೆಬೋವ್, ೧೯೭೩).

ಎಲ್ಲಕ್ಕಿಂತ ಹೆಚ್ಚಾಗಿ ಪ್ರಾದೇಶಿಕ ಆಶಯಗಳು ಎಂದಿಗೂ ಸಾಮಾಜಿಕ ಆಶಯಗಳಿಂದ ಪ್ರತ್ಯೇಕವಾಗಿರುವುದಿಲ್ಲ. ಎರಡೂ ಆಗಿಂದಾಗ್ಗೆ ಒಂದು ಒಂದೆಡೆಯಿಂದ ಮತ್ತೊಂದೆಡೆಗೆ ಚಲಿಸುತ್ತಿರುತ್ತದೆ. (ವೂಲ್‌ಫ್ರಾಂ ಮತ್ತು ಫಸೋಲ್ಡ್, ೧೯೭೩: ೭೩, ೮೦) ವಿಲಿಯಂ ಲೆಬೋವ್‌ರ ಐತಿಹಾಸಿಕ ಮಹತ್ವದ ( Social Stratification of English in New york City, 1966) ಎಂಬ ಕೃತಿಯು ಸಾಮಾಜಿಕ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತಂದಿತು. ವಿಲಿಯಂ ಲೆಬೋವ್ ಅವರು ಭಾಷಿಕ ಬದಲಾವಣೆಯ ತಂತ್ರಗಳು ಮತ್ತು ಭಾಷಿಕ ವ್ಯತ್ಯಾಸಗಳ ಸ್ವರೂಪ ಹಾಗೂ ಅದರ ಕ್ರಮಬದ್ಧ ರಚನೆಯನ್ನು ಕುರಿತ ಸಂಶೋಧನೆಯಲ್ಲಿ ಅಪಾರವಾದ ಆಸಕ್ತಿಯನ್ನು ವಹಿಸಿದರು.

ಭಾಷಾಯೋಜನೆಯನ್ನು ಕೈಗೊಳ್ಳುವಲ್ಲಿ ಇರುವ ತೊಂದರೆಗಳನ್ನು ನಿವಾರಿಸುವಲ್ಲಿ ಇದೊಂದು ದೊಡ್ಡ ಹೆಜ್ಜೆಯಾಯಿತು. ಭಾಷೆಯಲ್ಲಿನ 'ವ್ಯತ್ಯಾಸಗಳು' ಭಾಷಿಕನ ಜ್ಞಾನದ ಒಂದು ಭಾಗವಾಗಿರುತ್ತದೆ ಎನ್ನುವ ಅಂಶವನ್ನು ಪ್ರಸ್ತಾಪಿಸುತ್ತಾ 'ವ್ಯತ್ಯಾಸ' ಎಂದರೆ ಸಾಮಾಜಿಕ ಮಾನದಂಡದಲ್ಲಾದ ಭಾಷಿಕ ಬದಲಾವಣೆಯಲ್ಲಿನ ನಿರಂತರ ವ್ಯತ್ಯಾಸಗಳು(ಲೆಬೋವ್ ೧೯೬೯: ೭೫೯). ಲೆಬೋವ್‌ರ ಕಾರ್ಯವು ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿನ ವ್ಯತ್ಯಾಸಗಳನ್ನು ಕುರಿತು ಹೇಳುವಲ್ಲಿ ಪ್ರಾರಂಭಿಕ ಸಂಶೋಧನೆಯಾಗಿದೆ. 'ವ್ಯತ್ಯಾಸ ತತ್ವ'ದ ಈಗಿನ ಮುಖ್ಯ ಉದ್ದೇಶ ಭಾಷೆಗಳ ಬೋಧನೆ ಮತ್ತು ಕಲಿಕೆಯನ್ನು ಪರಿಣಾಮಕಾರಿಯಾಗಿ ಜಾರಿ ಮಾಡುವುದೇ ಆಗಿದೆ.

'ವ್ಯಾಕರಣ ವ್ಯತ್ಯಾಸ'ಗಳು 'ಧ್ವನಿಯ ವ್ಯತ್ಯಾಸ'ಗಳಿಗಿಂತ ಹೆಚ್ಚಿನ ಪ್ರಭಾವಯುತವಾದ ಸ್ತರ ವಿನ್ಯಾಸಗಳನ್ನು ನೀಡುತ್ತವೆಂದು ನಂಬಲಾಗಿದೆ(ಫಸೋಲ್ಡ್, ೧೯೭೦: ೫೬೧). ಈ 'ವ್ಯತ್ಯಾಸ ತತ್ವ'ವು ಭಾಷಾವಿಜ್ಞಾನಿಗಳನ್ನು ತಾತ್ವಿಕವಾದ ವಿವಾದಗಳಿಂದ ದೂರ ಇಡುವಲ್ಲಿ ಸಹಾಯಕವಾಗಿದೆ. ಭಾಷಾ ಬೋಧನೆ ಮತ್ತು ಕಲಿಕೆ ಹಾಗೂ ಬೋಧನಾ ಸಾಮಗ್ರಿಗಳನ್ನು ತಯಾರಿಸುವಲ್ಲಿ ಈ ರೀತಿಯ ಅಧ್ಯಯನಗಳು ತುಂಬಾ ಫಲಪ್ರದವಾಗಿವೆ. ಇದು ಭಾಷಾ ಪ್ರಾಮಾಣೀಕರಣದ ಜಾರಿಯಲ್ಲಿ ಹೆಚ್ಚಿನ ಕೊಡುಗೆಯನ್ನು ನೀಡಿದೆ.

### ೩.೨. ಸಾಮಾಜಿಕ ಭಿನ್ನಾಂಶಗಳು

ಅಮೇರಿಕದ ಸಾಮಾಜಿಕ ಭಾಷಾಶಾಸ್ತ್ರಜ್ಞ ವಿಲಿಯಂ ಲೆಬೋವ್ ಅವರು ಸಾಮಾಜಿಕ ಭಿನ್ನಾಂಶ ಎಂಬ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದಾರೆ. ಭಾಷಿಕ ಸಮುದಾಯವೊಂದನ್ನು ಗಮನಿಸಿದಾಗ ಅಲ್ಲಿನ ಭಾಷಿಕರು

ಬಳಸುವ ಭಾಷೆಯು ಹಲವು ರೀತಿಯ ವ್ಯತ್ಯಾಸಗಳಿಗೆ ಈಡಾಗಿರುವುದು ಕಂಡುಬರುತ್ತದೆ. ಈ ರೀತಿಯ ವ್ಯತ್ಯಾಸಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಈ ಭಿನ್ನ ಅಥವಾ ವ್ಯತ್ಯಾಸ ರೂಪಗಳೇ 'ಸಾಮಾಜಿಕ ಭಿನ್ನಾಂಶಗಳು' ಸಾಮಾಜಿಕ ಭಾಷಾವಿಜ್ಞಾನದ ಅಧ್ಯಯನದ ಸಂದರ್ಭದಲ್ಲಿ ಈ ಸಾಮಾಜಿಕ ಭಿನ್ನಾಂಶಗಳು ಮಹತ್ತರ ಪಾತ್ರವನ್ನು ವಹಿಸುತ್ತವೆ. ಅಮೇರಿಕದ ಪ್ಯೂಯೆರ್ಟೋರಿಕನ್ ಸಮುದಾಯದ ಅಧ್ಯಯದ ಮಾಡಿದ ವಿಲಿಯಂ ಲಿಬೋವ್‌ರು ಅಲ್ಲಿನ ಸಾಮಾಜಿಕದ ಭಾಷಾ ಬಳಕೆಯಲ್ಲಿ ಉಂಟಾಗುವ ವ್ಯತ್ಯಾಸದ ಅಂಶಗಳನ್ನು ದಾಖಲಿಸುತ್ತಾರೆ. ಇದುವರೆಗೂ ಪಾಶ್ಚಾತ್ಯ ದೇಶಗಳಲಿ ನಡೆದಿರುವ ಸಾಮಾಜಿಕ ಭಾಷಾವಿಜ್ಞಾನದ ಅಧ್ಯಯನಗಳಲ್ಲಿ ಈ ಸಾಮಾಜಿಕ ಭಿನ್ನಾಂಶಗಳು ಹೇಗೆ ಭಾಷೆಯ ವ್ಯತ್ಯಾಸಕ್ಕೆ ಕಾರಣವಾಗುತ್ತವೆ ಹಾಗೂ ಭಾಷಾ ಬಳಕೆ ಮತ್ತು ಬೆಳವಣಿಗೆಯ ನೆಲೆಗಳಲ್ಲಿ ಹೇಗೆ ಪರಿಣಾಮ ಬೀರುತ್ತವೆ ಎಂಬ ಅಂಶವನ್ನು ವ್ಯಕ್ತಪಡಿಸಿವೆ. ಆದರೆ ಪಾಶ್ಯಾತ್ಯ ದೇಶಗಳ ಸಾಮಾಜಿಕ ಭಿನ್ನಾಂಶಗಳು ವರ್ಗ ವ್ಯವಸ್ಥೆಯಿಂದ ಕೂಡಿರುವಂಥವು. ಭಾರತದ ಸಾಮಾಜಿಕ ಸಂದರ್ಭದ ಸನ್ನಿವೇಶವೇ ಬೇರೆ. ಇಲ್ಲಿ ಶ್ರೇಣೀಕೃತ ವರ್ಣಾಶ್ರಮದ ಜಾತಿ ವ್ಯವಸ್ಥೆ ಸಾಮಾಜಿಕ ಭಿನ್ನಾಂಶವಾಗಿ ಕಂಡುಬರುತ್ತದೆ. ಇಲ್ಲಿ ನಡೆದಿರುವ ಬಹುತೇಕ ಅಧ್ಯಯನಗಳು ಜಾತಿಯನ್ನು ಭಿನ್ನಾಂಶವನ್ನಾಗಿಟ್ಟುಕೊಂಡು ನೋಡಿವೆ. ಮತ್ತೆ ಕೆಲವು ಅಧ್ಯಯನಗಳು ಶಿಕ್ಷಣ, ಲಿಂಗ, ವಯಸ್ಸು ಹೀಗೆ ಒಂದೊಂದು ಭಿನ್ನಾಂಶವನ್ನು ಮಾತ್ರ ಇಟ್ಟುಕೊಂಡು ಅಧ್ಯಯನ ಮಾಡಿವೆ. ಈ ಅಧ್ಯಾಯದಲ್ಲಿ ಇವೆಲ್ಲವುಗಳ ಜೊತೆಗೆ ಹಳ್ಳಿ, ಪಟ್ಟಣ, ವರ್ಗ, ವಿಭಕ್ತ, ಅವಿಭಕ್ತ ಕುಟುಂಬಗಳನ್ನು ಸಾಮಾಜಿಕ ಭಿನ್ನಾಂಶಗಳನ್ನಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಇದರಿಂದ ಜಿಲ್ಲೆಯ ಸಮಾಜದ ಸ್ವರೂಪ ಸರಂಚನೆಯನ್ನು ತಿಳಿಯಲು ಪ್ರಯತ್ನಿಸಲಾಗಿದೆ.

**ಜಾತಿ**

ಭಾರತೀಯ ಸಮಾಜದ ಸ್ತರವಿನ್ಯಾಸವನ್ನು ಗಮನಿಸಿದಾಗ ಇಲ್ಲಿನ ಸಮಾಜ ಪುರಾತನ ಕಾಲದಿಂದಲೂ ವರ್ಣಾಶ್ರಮದ ಆಧಾರದ ಮೇಲೆ ವಿಭಜನೆಯಾಗಿರುವುದು ಕಂಡುಬರುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು ಒಂದೊಂದು ಜಾತಿ-ಉಪಜಾತಿಗಳನ್ನು ಒಳಗೊಂಡಿವೆ. ಭಾಷಿಕ ಭಿನ್ನತೆ ಕಾಣಿಸಿಕೊಳ್ಳುವಿಕೆಗೆ ಪಾಶ್ಚಿಮಾತ್ಯ ಸಮಾಜದ ವರ್ಗಪ್ರಜ್ಞೆ ಕಾರಣವಾದರೆ ಭಾರತದಲ್ಲಿ ಇದಕ್ಕೆ ತದ್ವಿರುದ್ಧ. ಇಲ್ಲಿನ ಜಾತಿ ಪ್ರಜ್ಞೆ ಅತ್ಯಂತ ಸಂಕೀರ್ಣ ಹಾಗೂ ಸೂಕ್ಷ್ಮವಾದದ್ದು. ಇದರಿಂದಾಗಿ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿನ ಜಾತಿವಾರು ಭಾಷೆಗಳಲ್ಲಿ ಭಾಷಿಕ ವ್ಯತ್ಯಾಸ ಇರುವುದು ಕಂಡುಬರುತ್ತದೆ. ಭಾರತದಲ್ಲಿರುವ ಜಾತಿ ಸಾಮಾಜಿಕ ಭಿನ್ನಾಂಶಗಳನ್ನು ಭಾರತದ ಶ್ರೇಣೀಕೃತ ಸಮಾಜದಲ್ಲಿ ಕಂಡುಬರುವ ಪ್ರತಿಯೊಂದು ಜಾತಿ-ಉಪಜಾತಿಗಳ ಆಚಾರ-ವಿಚಾರ; ಉಡುಗೆ-ತೊಡುಗೆ; ಆಹಾರ ಪದ್ಧತಿ, ಪಾಲಿಸುವ ಸಂಪ್ರದಾಯಗಳು, ನಂಬಿಕೆ, ಜೀವನಕ್ರಮಗಳು ಎಲ್ಲವೂ ಭಿನ್ನವಾಗಿದ್ದು, ಈ ಜಾತಿಗಳ ಭಾಷಿಕರ ಭಾಷಾ

ಬಳಕೆ ಹಾಗೂ ಕಲಿಕೆಗಳು ವಿಭಿನ್ನವಾಗಿ ಕಂಡುಬರುತ್ತವೆ. ಇಲ್ಲಿರುವ ಮೇಲ್ ಜಾತಿ ಹಾಗೂ ಕೆಳಜಾತಿಗಳನ್ನು ಪರಿಶೀಲಿಸಿ ನೋಡಿದಾಗ ಹಲವಾರು ಸಂಗತಿಗಳು ಕಂಡುಬರುತ್ತವೆ. ಕೆಳಜಾತಿಯಲ್ಲಿನ ಭಾಷಿಕರ ಬಳಕೆ-ಕಲಿಕೆಗಳು ಮೇಲ್‌ಜಾತಿಯ ಭಾಷಿಕರಿಗಿಂತ ವ್ಯತ್ಯಸ್ತವಾಗಿರುವುದು ಕಂಡುಬರುತ್ತದೆ.

## ವರ್ಗ

ಸಮಾಜ ಶಾಸ್ತ್ರದಲ್ಲಿ 'ವರ್ಗ'ವು ಬಹು ಚರ್ಚಾಸ್ಪದ ವಿಷಯ. ಕುಟುಂಬ ವ್ಯವಸ್ಥೆ, ಶ್ರೇಣೀಕೃತ ಸಮಾಜ, ಉದ್ಯೋಗ ಹಾಗೂ ಮಾಲೀಕತ್ವದ ಅಂಶಗಳು 'ವರ್ಗ'ವನ್ನು ಇನ್ನೂ ಗೊಂದಲದಲ್ಲಿರಿಸಿವೆ. ವರ್ಗ ಎನ್ನುವುದು ಭಾಷೆಯ ಸಾಮಾಜಿಕ ಲಕ್ಷಣವನ್ನು ಎತ್ತಿ ತೋರಿಸುವ ಸಾಮಾಜಿಕ ಭಿನ್ನಾಂಶಗಳಲ್ಲಿ ಒಂದಾಗಿದ್ದು, ಸಮಾಜ ಸಾಮಾಜಿಕ ಸ್ತರ ವಿನ್ಯಾಸದಲ್ಲಿ ಒಳಪದರಗಳಲ್ಲಿ ಉಂಟುಮಾಡುವ ಒಂದು ಸ್ಥಿತಿ. ಪಾಶ್ಚಾತ್ಯರಲ್ಲಿ ವರ್ಗ ಒಂದು ಮುಖ್ಯವಾದ ಸಾಮಾಜಿಕ ಭಿನ್ನಾಂಶ. ಆದರೆ ಭಾರತದ ಸ್ಥಿತಿಯೇ ಬೇರೆ. ಇಲ್ಲಿ ಜಾತಿ-ವರ್ಗ ಕಲ್ಪನೆಯನ್ನು ಬೇರೆ ನೆಲೆಗಳಲ್ಲಿ ಗಮನಿಸಬೇಕಾಗುತ್ತದೆ. ಸನ್ನಿವೇಶಗಳ ಸಂದರ್ಭವನ್ನು ಅಧ್ಯಯನ ಮಾಡುವಾಗ ಪರಿಸ್ಥಿತಿಗೆ ತಕ್ಕಂತೆ ವರ್ಗ ಭಿನ್ನಾಂಶವನ್ನು ಬಳಸಲಾಗುತ್ತದೆ. ಇಲ್ಲಿ ಬಹಳ ಮುಖ್ಯವಾಗಿ ಆಸ್ತಿ, ಅಂತಸ್ತು, ಅಧಿಕಾರ, ಆದಾಯ ಮೊದಲಾದುವುಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡಲಾಗುವುದು. ಇಂದೊಂದು ಉಪಯೋಗಕರವಾದ ಸಾಮಾಜಿಕ ಭಿನ್ನಾಂಶವಾಗಿದ್ದು, ವರ್ಗದಿಂದ-ವರ್ಗಕ್ಕೆ ಇರುವಂತಹ ಭಾಷಿಕ ವ್ಯತ್ಯಾಸವನ್ನು ಮತ್ತು ಆಯಾ ವರ್ಗದ ಭಾಷಿಕರ ಭಾಷಾಕಲಿಕೆ ಮತ್ತು ಭಾಷಾ ಬಳಕೆಯನ್ನು ಗುರ್ತಿಸುವಲ್ಲಿ ನೆರವಾಗುತ್ತದೆ.

## ಕುಟುಂಬ

ಭಾರತೀಯ ಕೌಟುಂಬಿಕ ವ್ಯವಸ್ಥೆಯು ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬಗಳೆಂದು ಎರಡು ವಿಧವಾಗಿ ಕಂಡುಬರುತ್ತದೆ. ವಿಭಕ್ತ ಕುಟುಂಬಗಳು ಹೆಚ್ಚಿನ ಬದಲಾವಣೆ ಬಯಸುವ ಕಾರಣ ಭಾಷಿಕರು ಭಾಷಾಪಲ್ಲಟಗಳಿಗೆ ಒಳಗಾಗುವ ಸನ್ನಿವೇಶ ಕಂಡುಬಂದರೆ, ಅವಿಭಕ್ತ ಕುಟುಂಬದ ಭಾಷಿಕರು ಹೆಚ್ಚಿನ ಸಂದರ್ಭಗಳಲ್ಲಿ ಭಾಷಾ ಸಂಗೋಪನೆ ಮಾಡುತ್ತಿರುವುದು ಕಂಡುಬರುತ್ತಿರುವುದರಿಂದ 'ಕುಟುಂಬ'ವನ್ನು ಕೂಡ ಒಂದು ಸಾಮಾಜಿಕ ಭಿನ್ನಾಂಶವಾಗಿ ಪರಿಗಣಿಸಬಹುದಾಗಿದೆ.

## ಲಿಂಗ

ಸಾಮಾಜಿಕ ಭಿನ್ನಾಂಶಗಳಲ್ಲಿ 'ಲಿಂಗ' ಕೂಡ ಒಂದು ಪ್ರಮುಖ ಅಂಶವಾಗಿ ಪರಿಗಣಿತವಾಗಿದೆ. ಏಕೆಂದರೆ ಭಾಷಾ ಬಳಕೆ ಸಂದರ್ಭಗಳಲ್ಲಿ ಹೆಂಗಸರ ಹಾಗೂ ಗಂಡಸರ ಭಾಷಿಕ ನೆಲೆಗಳಲ್ಲಿ ವ್ಯತ್ಯಯಗಳಾಗುತ್ತವೆ. ಭಾಷಾ ಕಲಿಕೆ ಸಂದರ್ಭದಲ್ಲಿ ಹೆಣ್ಣು ಮಗುವಿಗೂ ಗಂಡು ಮಗುವಿಗೂ ಅಂತರಗಳಿರುತ್ತವೆ. ದ್ವಿಭಾಷಾ ಅಧ್ಯಯನಗಳ ಸಂದರ್ಭದಲ್ಲೆ ಹೆಣ್ಣು-ಗಂಡಿನ ಭಾಷೆಯನ್ನು ಕಲಿಯುವ

ಹಾಗೂ ಬಳಸುವ ನೆಲೆಗಳು ವ್ಯತ್ಯಾಸಗೊಳ್ಳುವುದು ಕಂಡುಬಂದಿದೆ. ಹೀಗಾಗಿ ಇದೂ ಕೂಡ ಒಂದು ಮುಖ್ಯವಾದ ಸಾಮಾಜಿಕ ಭಿನ್ನಾಂಶ.

### ವಯಸ್ಸು

ಒಂದು ಸಾಮಾಜಿಕ ಭಿನ್ನಾಂಶವನ್ನಾಗಿ 'ವಯಸ್ಸು'ನ್ನು ತಲೆಮಾರುಗಳ ನಡುವೆ ಆಗುತ್ತಿರುವ ಭಾಷಿಕ ಬದಲಾವಣೆಗಳನ್ನು ಗುರುತಿಸುವಲ್ಲಿ ಬಳಸಲಾಗುತ್ತಿದೆ. ಮನಃ ಶಾಸ್ತ್ರದ ಪ್ರಕಾರ ಮಗುವೊಂದು ಹಲವು ಭಾಷೆಗಳನ್ನು ೧೨ನೇ ವಯಸ್ಸಿನವರೆಗೂ ಚೆನ್ನಾಗಿ ಕಲಿಯಬಹುದೆಂದು ಹೇಳಲಾಗುತ್ತದೆ. ಸಣ್ಣ ವಯಸ್ಸಿನಲ್ಲಿ ಮಕ್ಕಳು ಭಾಷೆಯೊಂದನ್ನು ಕಲಿತು ಅದನ್ನು ಬಳಸುವಷ್ಟೇ ಸಹಜವಾಗಿ ದೊಡ್ಡವರು ಕಲಿಯಲಾಗುವುದಿಲ್ಲ. ದೊಡ್ಡವರು ಭಾಷೆಯನ್ನು ಕಲಿತು ಬಳಸುವುದಕ್ಕಿಂತ ಮಕ್ಕಳು ಭಾಷೆಯನ್ನು ಕಲಿತು ಬಳಸುವಾಗ ಹಲವು ವ್ಯತ್ಯಾಗಳಿರುತ್ತವೆ. ಹಾಗೆಯೇ ವಯೋವೃದ್ಧರ ಭಾಷಿಕ ಕಲಿಕೆಗಳು ಮತ್ತಷ್ಟು ಭಿನ್ನತೆಯಿಂದ ಕೂಡಿದ್ದು, ಭಾಷಾ ಕಲಿಕೆಯ ಸಾಮರ್ಥ್ಯ ಬಹಳಷ್ಟು ಕಡಿಮೆ ಇರುತ್ತದಲ್ಲದೆ, ಗ್ರಹಿಕೆ ನೆಲೆಯಲ್ಲಿ ಬೇರೊಂದು ಭಾಷೆಯನ್ನು ಪಡೆದಿರಬಹುದಾದ ಸಾಧ್ಯತೆಯಿರುತ್ತದೆ. ದೊಡ್ಡವರಲ್ಲಿ ಭಾಷಾ ಕಲಿಕೆ-ಭಾಷಾ ಬಳಕೆಯ ನೆಲೆಗಳು ಭಿನ್ನಸ್ವರೂಪದ್ದಾಗಿದ್ದು ಭಾಷಾ ಮಿಶ್ರಣ ಇತ್ಯಾದಿಗಳು ಕಂಡುಬರುತ್ತದೆ. ಹಾಗಾಗಿ 'ವಯಸ್ಸು'ಕೂಡ ಒಂದು ಪ್ರಮುಖವಾದ ಸಾಮಾಜಿಕ ಭಿನ್ನಾಂಶವಾಗಿದೆ.

### ಶಿಕ್ಷಣ

ಸಾಮಾಜಿಕ ಭಿನ್ನಾಂಶಗಳಲ್ಲಿ ಶಿಕ್ಷಣ ಅತ್ಯಂತ ಪ್ರಮುಖವಾದುದು. ಕಾರಣ ಭಾಷಾ ಬದಲಾವಣೆಯಲ್ಲಿ ಶಿಕ್ಷಣದ ಪಾತ್ರ ಮಹತ್ತರವಾದುದು. ಇದುವರೆಗೂ ನಡೆದಿರುವ ಹಲವಾರು ಭಾಷಾಧ್ಯಯನಗಳು ಶಿಕ್ಷಣದಿಂದಾಗಿ ಭಾಷಿಕ ಭಿನ್ನತೆಗಳು ಹೆಚ್ಚಾಗಿರುವುದನ್ನು ಗುರುತಿಸಿವೆ. ವಿದ್ಯಾವಂತರ-ಅವಿದ್ಯಾವಂತರ ನಡುವೆ ಇರುವ ಭಾಷೆಯ ಕಲಿಕೆ-ಬಳಕೆಗಳ ವ್ಯತ್ಯಾವನ್ನು ವಿದ್ಯಾವಂತ ಮತ್ತು ಅವಿದ್ಯಾವಂತ ಎಂಬ ನೆಲೆಗಳಲ್ಲಿ ಭಿನ್ನಾಂಶಗಳನ್ನು ಗುರುತಿಸಲಾಗುತ್ತದೆ. ವಿದ್ಯಾವಂತರು ಆಡುವ ಭಾಷೆ ಪ್ರಾಮಾಣೀಕೃತ ಅಥವಾ ಶಿಷ್ಟ ಭಾಷೆಗೆ ಹತ್ತಿರವಾಗಿದ್ದು, ಅವಿದ್ಯಾವಂತರು ಬಳಸುವ ಭಾಷೆಯು ಪ್ರಾದೇಶಿಕ ಅಥವಾ ಸಾಮಾಜಿಕ ಭಾಷಾ ಪ್ರಭೇದವೊಂದಕ್ಕೆ ಹತ್ತಿರವಾಗಿರುವ ಸಂದರ್ಭಗಳು ಹೆಚ್ಚು. ಅವಿದ್ಯಾವಂತರಿಗೆ ವಿದ್ಯಾವಂತರ ರೀತಿ ಸಂದರ್ಭಕ್ಕೆ ತಕ್ಕಂತೆ ಭಾಷೆಯನ್ನು ಬಳಸುವ ರೀತಿ ಬಾರದೆ ಇರಬಹುದು. ಕಲಿತವರು ಭಾಷೆಯನ್ನು ಪ್ರಜ್ಞಾಪೂರ್ವಕವಾಗಿ ಬಳಸುವಂತೆ ಅನಕ್ಷರಸ್ಥರು ಬಳಸುವುದಿಲ್ಲ. ಈ ನೆಲೆಗಳಲ್ಲಿ ಗಮನಿಸಿದಾಗ ಅಕ್ಷರಸ್ಥರಿಗೂ-ಅನಕ್ಷರಸ್ಥರಿಗೂ ಭಾಷಾ ಬಳಕೆಯಲ್ಲಿ ಇರುವ ವ್ಯತ್ಯಾಸಗಳು ಗೋಚರಿಸುತ್ತವೆ.

### ಕಸಬು

ಭಾರತೀಯ ಸಾಮಾಜಿಕ ಸ್ತರವಿನ್ಯಾಸವನ್ನು ಗಮನಿಸಿದಾಗ ಇಲ್ಲಿನ ಕಸುಬುಗಳು ಜಾತಿಯಾಧಾರಿತ ವಾಗಿರುವುದು ಕಂಡುಬರುತ್ತದೆ. ಕುಂಬಾರಿಕೆ, ಕುರಿಸಾಕಾಣಿಕೆ, ಅಕ್ಕಸಾಲಿಗ, ಕಮ್ಮಾರ, ಚಪ್ಪಲಿ

ಹೊಲಿಯುವುದು, ಪಶುಪಾಲನೆ, ಪೌರೋಹಿತ್ಯ, ವ್ಯವಸಾಯ, ಬಟ್ಟೆ, ಕಂಬಳಿ ನೇಯುವಿಕೆ, ಕ್ಷೌರಿಕವೃತ್ತಿ ಹೀಗೆ ಹಲವು ರೀತಿಯ ಸಾಂಪ್ರದಾಯಿಕ ಕಸುಬುಗಳಲ್ಲಿರುವವರು ಏಕಭಾಷಿಕವಾಗಿಯೇ ಇರುವುದು ಕಂಡುಬಂದಿದೆ. ಕೈಗಾರಿಕಾ ಕ್ರಾಂತಿಯಿಂದಾಗಿ ಸ್ವಾತಂತ್ರ್ಯಾನಂತರದಲ್ಲಿ ವ್ಯಕ್ತಿಗಳು ಇಂಜಿನಿಯರಿಂಗ್ ಆಟೋಮೊಬೈಲ್, ಲೋಹೋದ್ಯಮ, ಪ್ಲಾಸ್ಟಿಕ್ ಉದ್ಯಮ, ಸಾಫ್ಟವೇರ್ ತಂತ್ರಜ್ಞಾನ, ಬಾಹ್ಯಾಕಾಶ ವಿಜ್ಞಾನ, ಪಾಲಿಮರ್ ವಿಜ್ಞಾನಗಳಂತಹ ತಾಂತ್ರಿಕ ಕ್ಷೇತ್ರದ ವೃತ್ತಿಗಳು ಒಂದು ರೀತಿಯ ತಂತ್ರಜ್ಞಾನದ ಭಾಷಾ ವ್ಯತ್ಯಾಸಕ್ಕೆ ಕಾರಣವಾದರೆ ವೈದ್ಯಕೀಯ ವೃತ್ತಿ, ಸಸ್ಯಶಾಸ್ತ್ರಜ್ಞ, ಪ್ರಾಣಿಶಾಸ್ತ್ರಜ್ಞ, ರಸಾಯನಜ್ಞ, ಭೌತಜ್ಞ ಹೀಗೆ ಭಿನ್ನರೀತಿಯ ಕಸಬುಗಳು ಇಂದಿನ ಆಧುನಿಕ ಸಂದರ್ಭದಲ್ಲಿ ಭಾಷೆಯ ಬಹುಮುಖೀ ವ್ಯತ್ಯಾಸಕ್ಕೆ ಕಾರಣವಾಗಿವೆ. ಸಾಂಪ್ರದಾಯಕ ವೃತ್ತಿಗಳನ್ನು ಬಿಟ್ಟು ಬೇರೆ ವೃತ್ತಿಗಳಿಗೆ ಬಂದವರು ಇಂತಹ ವ್ಯತ್ಯಾಸಗಳಿಗೆ ಕಾರಣಕರ್ತರಾಗಿರುವುದು ಕಂಡುಬರುತ್ತದೆ. ಸಮಾಜದಲ್ಲಿ ಉನ್ನತ ವರ್ಗದಲ್ಲಿರುವವರು ವಿದ್ಯಾಭ್ಯಾಸದ ಸಂದರ್ಭದಲ್ಲಿ ಹಲವಾರು ಭಾಷೆಗಳನ್ನು ಕಲಿತಿರುತ್ತಾರಲ್ಲದೆ, ಸಮಾಜದ ಇತರ ಭಾಷಿಕರೊಡನೆ ವ್ಯವಹರಿಸುವ ಸಂದರ್ಭದಲ್ಲಿ ಅನೇಕ ಭಾಷೆಗಳನ್ನು ಬಳಸುವ ಅಗತ್ಯತೆ-ಅವಶ್ಯಕತೆ ಇರುತ್ತದೆ. ಇಂತಹವರು ಪ್ರಾಮಾಣೀಕೃತ ಭಾಷೆ ಅಥವಾ ಆಡಳಿತ ಭಾಷೆಯನ್ನು ಔಪಚಾರಿಕ ಸನ್ನಿವೇಶಗಳಲ್ಲಿ ಬಳಸಿದರೂ ಅನಕ್ಷರಸ್ಥ ಏಕಭಾಷಿಕರ ಬಳಿ ವ್ಯವಸಹರಿಸುವಾಗ ಅವರ ಸ್ಥಳೀಯ ಭಾಷೆಯಲ್ಲೇ ವ್ಯವಹರಿಸಬೇಕಾದ ಪ್ರಸಂಗಗಳು ಇರಬಹುದು. ಪಾರಂಪರಿಕ ಕಸಬುಗಳನ್ನು ಮಾಡುವವರಲ್ಲಿ ಹೆಚ್ಚಿನವರು ಮನೆಯ ಭಾಷೆಯನ್ನೇ ಬಳಸುವ ಸಾಧ್ಯತೆಗಳು ಹೆಚ್ಚು. ಇಂತಹವರು ಬೇರೆ ಆವರಣಗಳಲ್ಲಿ ಕೆಲಸ ಮಾಡುವ ಸಂದರ್ಭಗಳು ಕಡಿಮೆ. ಆದ್ದರಿಂದ ಈ ಬಗೆಯ ಭಾಷಿಕರು ಎಲ್ಲೋ ಕೆಲವೊಮ್ಮೆ ಆಂಶಿಕ ಪಲ್ಲಟವನ್ನು ಮಾತ್ರ ಇನ್ನೊಂದು ಭಾಷೆಯೊಂದಿಗೆ ಮಾಡುತ್ತಿರುತ್ತಾರೆ. ಇನ್ನಿತರ ಸಾಂಪ್ರದಾಯಿಕ ವೃತ್ತಿಗಳಾದ ಕುರಿ ಮೇಯಿಸುವಿಕೆ, ಪುರೋಹಿತರು, ನೇಯ್ಗೆಯವರು, ಅಕ್ಕಸಾಲಿಗರು, ಚಮ್ಮಾರರು ತಮ್ಮ ಮೂಲವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಗಳಿಗೆ ಪಲ್ಲಟವಾದಾಗ ಶಿಕ್ಷಣದ ಕಾರಣದಿಂದಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆಯಲು ಬೇರೆ ಇನ್ನೊಂದು ಭಾಷೆಗೆ ಪಲ್ಲಟವಾಗಿರುವುದು ಕಾಣಿಸುತ್ತದೆ. ವ್ಯಕ್ತಿ ತನ್ನ ಸಾಮಾಜಿಕ ಸ್ಥಾನಮಾನಗಳ ಕಾರಣಕ್ಕಾಗಿ ಮನೆಯಲ್ಲೇ ತನ್ನ ಮೊದಲ ಭಾಷೆಯನ್ನು ಹೊರ ಆವರಣಗಳಲ್ಲಿ ತಾನು ಪಲ್ಲಟಗೊಂಡ ಭಾಷೆಯನ್ನು ಬಳಸುವ ಸಂಗತಿಗಳು ಜರುಗುತ್ತಿರುತ್ತವೆ. ಇಂತಹವನ್ನೆಲ್ಲಾ ಗುರುತಿಸಲು ಈ ಸಾಮಾಜಿಕ ಭಿನ್ನಾಂಶ ನೆರವಾಗುತ್ತದೆ.

## ಹಳ್ಳಿ ಮತ್ತು ಪಟ್ಟಣ

ಭಾರತದ ಹೆಚ್ಚಿನ ಜನಸಂಖ್ಯೆ ವಾಸವಾಗಿರುವುದು ಹಳ್ಳಿಗಳಲ್ಲೇ. ಪಟ್ಟಣ ಪ್ರದೇಶಗಳ ಆಡಳಿತಾತ್ಮಕ ಕಾರಣಗಳು ಹಾಗೂ ಔದ್ಯೋಗಿಕ ಮತ್ತು ಕೈಗಾರಿಕೆಗಳ ಫಲವಾಗಿ ಆಗಾಗ ಹಳ್ಳಿಗರ ವಲಸೆ ಕಾರ್ಯ ಜರುಗುತ್ತಿರುತ್ತವೆ. ಈ ಕಾರಣಗಳಿಂದಾಗಿ ಮಿಕ್ಕೆಲ್ಲಾ ಸಾಮಾಜಿಕ ಭಿನ್ನಾಂಶಗಳಿಗಿಂತ ಹೆಚ್ಚಾಗಿ ಹಳ್ಳಿ

ಪಟ್ಟಣ ಸಂದರ್ಭಗಳಿಂದಾಗಿ ಭಾಷಿಕ ವ್ಯತ್ಯಾಸಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಹಳ್ಳಿ ವಾಸಿಗರು ಹೆಚ್ಚಿನ ಭಾಷೆಗಳನ್ನು ಕಲಿಯುವ ಅವಕಾಶ ಕಡಿಮೆ. ಅವರು ಬಹುತೇಕ ಏಕ ಭಾಷಿಕರಾಗಿ ಉಳಿಯುವ ಸಂದರ್ಭವೇ ಹೆಚ್ಚು. ಆದರೆ ಪಟ್ಟಣ ವಾಸಿಗಳ ಭಾಷಿಕ ಸ್ಥಿತಿಗತಿಯೇ ಬೇರೆ. ಅವರಿಗೆ ಹೆಚ್ಚಿನ ಭಾಷೆಗಳನ್ನು ಕಲಿಯುವ ಅವಕಾಶ ಮತ್ತು ಅನಿವಾರ್ಯತೆ ಹೆಚ್ಚಾಗಿರುತ್ತದೆ. ಹಳ್ಳಿವಾಸಿಗಳಲ್ಲಿ ಹೆಚ್ಚಾಗಿ ಭಾಷೆಯ ಸಂಗೋಪನೆ ಆಗುವುದು ಕಂಡುಬಂದರೆ ಪಟ್ಟಣ ವಾಸಿಗಳಲ್ಲಿ ಹೆಚ್ಚಾಗಿ ಭಾಷಾಪಲ್ಲಟಗಳು ಜರುಗುವುದು ಕಂಡುಬರುತ್ತದೆ. ಶಿಕ್ಷಣ ಸಂದರ್ಭಗಳಲ್ಲಿ ಹಳ್ಳಿ ಮಕ್ಕಳು ಮಾಧ್ಯಮಿಕ ಶಾಲೆಯವರೆಗೆ ಓದಲವಕಾಶವಿರುತ್ತದೆ. ನಂತರ ಅವರು ಪಟ್ಟಣ ಪ್ರದೇಶಕ್ಕೆ ಬರಬೇಕಾದ ಸಂದರ್ಭ ಇರುತ್ತದೆ. ಉನ್ನತ ಶಿಕ್ಷಣಕ್ಕೆ ಒಳಗಾದ ಸಂದರ್ಭಗಳಲ್ಲಿ ಹಳ್ಳಿ ಮಕ್ಕಳಲ್ಲಿ ಭಾಷಾ ಪಲ್ಲಟವಾಗಬಹುದಷ್ಟೇ. ಪ್ರೌಢಶಿಕ್ಷಣ ಮಟ್ಟದವರೆಗೂ ಬಂದರೂ ಅಂತಹ ಮಕ್ಕಳಲ್ಲಿ ಹೆಚ್ಚಿನ ಭಾಷಿಕ ವ್ಯತ್ಯಾಸವೇನು ಕಂಡುಬರದೆ ಕೇವಲ ಆಂಶಿಕ ಪಲ್ಲಟವಷ್ಟೇ ಕಂಡುಬರುತ್ತದೆ.

ಮೇಲೆ ವಿವರಿಸಿದ ಎಲ್ಲಾ ಸಾಮಾಜಿಕ ಭಿನ್ನಾಂಶಗಳು ಪರಸ್ಪರ ಕೊಂಡಿಯಂತೆ ಬೆಸೆದುಕೊಂಡಿರುತ್ತದೆ. ಆದ ಕಾರಣ ಯಾವುದೇ ಒಂದನ್ನು ಬಿಟ್ಟು ಮತ್ತೊಂದನ್ನು ಅಧ್ಯಯನಕ್ಕೆ ಒಳಪಡಿಸಿದರೂ ಅಂತಹ ಭಾಷಾಧ್ಯಯನಗಳು ಅಷ್ಟೇ ಫಲಪ್ರದವಾಗಲಾರದು. ಹೀಗಾಗಿ ಎಲ್ಲಾ ಸಾಮಜಿಕ ಭಿನ್ನಾಂಶಗಳನ್ನು ಅಧ್ಯಯನಗಳಲ್ಲಿ ಬಳಸಿಕೊಂಡಾಗ ಮಾತ್ರ ಹೆಚ್ಚಿನ ವಿಷಯವನ್ನು ಅರಿಯಬಹುದಾಗಿದೆ.

## ೩.೩. ದ್ವಿಭಾಷಿಕತೆಯ ಸುತ್ತಮುತ್ತ

ದ್ವಿಭಾಷಿಕತೆಯ ಅಧ್ಯಯನವು ಸಾಮಾಜಿಕ ಭಾಷಾವಿಜ್ಞಾನದ ಬಹಳ ಪ್ರಮುಖವಾದ ವಿಷಯ. ದ್ವಿಭಾಷಿಕತೆ ಎಂದರೇನು? ದ್ವಿಭಾಷಿಕರೆಂದರೆ ಯಾರು? ದ್ವಿಭಾಷಿಕತೆ ಉಂಟಾಗಲು ಕಾರಣಗಳೇನು? ದ್ವಿಭಾಷಿಕತೆಯ ಪರಿಣಾಮಗಳು ಸಮಾಜ, ಶಿಕ್ಷಣ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗಬಲ್ಲುದೇ ಇತ್ಯಾದಿ ವಿಷಯಗಳು ಇಲ್ಲಿನ ಆಸಕ್ತಿಯಾಗಿದೆ. ವ್ಯಕ್ತಿಯೊಬ್ಬನ ಭಾಷಿಕ ನಡವಳಿಕೆ ಕುರಿತ ಹಾಗೆ ಸಮಾಜದ ಪಾತ್ರ ಏನು ಎಂಬುದರ ಕುರಿತು ಇದುವರೆಗೆ ನಡೆದಿರುವ ಸಂಶೋಧನೆಗಳು ತೀರಾ ಕಡಿಮೆ. ಸಾಮಾನ್ಯವಾಗಿ ಏಕಭಾಷಿಕತೆ ಎಂದರೆ 'ಯಾವುದೇ ಒಂದು ಭಾಷೆಯಲ್ಲಿನ ಬಳಕೆ ಸಾಮರ್ಥ್ಯ' ಎಂಬುದು ಜಗತ್ತಿನಾದ್ಯಂತ ಒಪ್ಪಿತವಾದ ವಿಷಯವಾಗಿದೆ. ಆದರೆ ಸಂಶೋಧಕರಲ್ಲಿ 'ದ್ವಿಭಾಷಿಕತೆ' ಎಂದರೆ ಹಲವು ರೀತಿಯ ಸಾಹಿತ್ಯಿಕ ವ್ಯಾಖ್ಯೆಗಳಿವೆ. ಇದಕ್ಕೆ ಕಾರಣ ಈ ಪದಕ್ಕಿರುವ ಬಹುಮುಖಿ ವಾತಾವರಣದ ಅರ್ಥಸಂಧಿಗ್ದತೆ. ಒಂದು ಅಂದಾಜಿನಂತೆ ಇಂದು ಜಗತ್ತಿನ ಜನ ಸಂಖ್ಯೆಯಲ್ಲಿ ಅರ್ಧದಷ್ಟು ಜನ ದ್ವಿಭಾಷಿಕರಾಗಿದ್ದಾರೆ (ಗ್ರೊಸ್‌ಜಿನ್, ೧೯೮೨, ಪುಟ vii) ಎಂಬ ಮಾತು ದ್ವಿಭಾಷಿಕತೆಗಿರುವ ವ್ಯಾಪ್ತಿ ವೈಶಾಲ್ಯಗಳನ್ನು ತಿಳಿಸುತ್ತದೆ.

'ದ್ವಿಭಾಷಿಕತೆ' ಎಂದರೇನೆಂಬುದಕ್ಕೆ ನಿಖರವಾದ ವ್ಯಾಖ್ಯಾನ ನೀಡಲು ಕಷ್ಟವಾದರೂ ಕೆಲವೊಂದು ವಿವರಗಳನ್ನು ಗಮನಿಸಬಹುದು. ದೇಸೀ ಭಾಷಿಕ(ನೇಟಿವ್ ಸ್ಪೀಕರ್)ರೆಲ್ಲರೂ ತಮ್ಮ ಭಾಷೆಯ ಎಲ್ಲ ಸ್ತರಗಳಲ್ಲೂ ಪರಿಣಿತರಿರುವುದಿಲ್ಲ. ಬಹಳಷ್ಟು ದ್ವಿಭಾಷಿಕರು ಭಾಷೆಯ ಎಲ್ಲ 'ರಿಜಿಸ್ಟರ್'ಗಳನ್ನು ಎರಡು ಭಾಷೆಗಳಲ್ಲೂ ಹೊಂದಲಿಕ್ಕೆ ಸಾಧ್ಯವಿಲ್ಲ. ಅದೇ ಸಮಯಕ್ಕೆ ತಮ್ಮ ದೇಸೀ ಭಾಷೆಗಳಲ್ಲೂ ಕೂಡ ಹೊಂದಿರುವುದು ಸಾಧ್ಯವಿಲ್ಲ. ಉದಾಹರಣೆಗೆ ಒಂದು ಭಾಷೆಯ ಭಾಷಿಕನೊಬ್ಬ ತನ್ನ ದೇಶವನ್ನು ಬಿಟ್ಟು ಬೇರೊಂದು ದೇಶಕ್ಕೆ ಹೋದಾಗ ಅಲ್ಲಿನ ಭಾಷಾ ಕೌಶಲ್ಯವನ್ನು ಆ ದೇಶದಲ್ಲಿ ನೆಲೆಸಿದಾಗ ಕಲಿಯಬೇಕಾಗುತ್ತದೆ. ಆದರೆ ಇದು ಪರಿಪೂರ್ಣತೆಯನ್ನು ಪಡೆದಿರುವುದಿಲ್ಲ. ಏಕೆಂದರೆ ಆ ಹೊಸ ಭಾಷೆಯ ಅಗತ್ಯವಾದ ಪದಕೋಶವನ್ನು ವ್ಯಕ್ತಿ ಕಲಿತಿರುವುದಿಲ್ಲ. ಹೀಗಾಗಿ ಇಂತಹ ದ್ವಿಭಾಷಿಕ ಭಿನ್ನ ರೀತಿಯ ಚಟುವಟಿಕೆಗಳ ಸಂದರ್ಭದಲ್ಲಿ 'ಇಷ್ಟಭಾಷೆ' ಅಥವಾ 'ಒಲವಿನ ಭಾಷೆ'(ಪ್ರಿಫರ್ಡ್ ಲ್ಯಾಂಗ್ವೇಜ್)ಯನ್ನು (ಡಾಡ್ಸನ್, ೧೯೮೧) ಬಳಸುತ್ತಾನೆ.

ಪ್ರತಿಯೊಂದು ಮಗುವೂ ತನ್ನ ಮೊದಲ ಭಾಷೆಯನ್ನು ತನ್ನ ಪೋಷಕರು ಮತ್ತು ತಾನು ವಾಸಿಸುತ್ತಿರುವ ಸಮುದಾಯದಿಂದ ಕಲಿಯುತ್ತಿರುತ್ತದೆ. ಕೆಲವು ಮಂದಿ ದ್ವಿತೀಯ ಭಾಷೆಯನ್ನು ವಿದ್ಯಾಭ್ಯಾಸಕ್ಕಾಗಿ ಅಥವಾ ಕೆಲವೊಂದು ಐತಿಹಾಸಿಕ ಸನ್ನಿವೇಶಗಳ ಕಾರಣಕ್ಕಾಗಿ ಕಲಿಯುತ್ತಾರೆ. ಮತ್ತೆ ಕೆಲವೊಂದು ವ್ಯಕ್ತಿಗಳು ಎರಡು ಭಿನ್ನ ಭಾಷಾ ಸಮುದಾಯಗಳು ಪರಸ್ಪರ ಸಂಪರ್ಕದಲ್ಲಿದ್ದಾಗ ಅಗತ್ಯಗಳ ಕಾರಣಕ್ಕಾಗಿ ದ್ವಿಭಾಷಿಕರಾಗುತ್ತಾರೆ. ಇದಕ್ಕೆ ಒಳ್ಳೆಯ ಉದಾಹರಣೆಗಳೆಂದರೆ ಸ್ವಿಜ್ಜರ್‌ಲೆಂಡ್ ಮತ್ತು ಕೆನಡಾ ದೇಶಗಳು. ದ್ವಿಭಾಷಿಕ ಸನ್ನಿವೇಶಗಳು ಸಾಮಾನ್ಯವಾಗಿ ತಿಳಿದುಕೊಂಡಿರುವುದಕ್ಕಿಂತ ಹೆಚ್ಚಿನ ವಿಸ್ತಾರವಾದ ಹರಹುಗಳನ್ನು ಪಡೆದುಕೊಂಡಿವೆ. ದ್ವಿಭಾಷಿಕತೆಯ ಈ ರೀತಿಯ ವಿಸ್ತಾರವಾದ ಹರಹುಗಳನ್ನು ಮೇಲ್ಸ್, ಸ್ಪೇನ್ ಮತ್ತು ಫ್ರಾನ್ಸ್‌ಗಳ ಭಾಷಾ ಸಂದರ್ಭಗಳು, ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಆಗ್ನೇಯ ಭಾಗ, ಪೂಯೆರ್ಟೋರಿಕೋ, ಟರ್ಕಿ, ರಷ್ಯಾ, ಆಫ್ರಿಕಾದ ಹಲವಾರು ದೇಶ ಗಳಷ್ಟೇ ಅಲ್ಲದೆ ಜಗತ್ತಿನ ಎಲ್ಲ ದೇಶಗಳೂ ಈ ರೀತಿಯ ವಿದ್ಯಮಾನಗಳಿಗೆ ಪಕ್ಕಾಗಿವೆ.

ಭಾರತದಲ್ಲಿ ಕೂಡ ಇದೇ ರೀತಿಯ ಸನ್ನಿವೇಶವಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಕನ್ನಡ-ತೆಲುಗು ದ್ವಿಭಾಷಾ ಸಂದರ್ಭ, ಮಹಾರಾಷ್ಟ್ರ-ಕರ್ನಾಟಕ(ಮರಾಠಿ-ಕನ್ನಡ), ಕೇರಳ-ಕರ್ನಾಟಕ(ಮಲಯಾಳಂ-ಕನ್ನಡ), ಕರ್ನಾಟಕ-ತಮಿಳುನಾಡು (ಕನ್ನಡ-ತುಳು) ದ್ವಿಭಾಷಿಕ ಸಂದರ್ಭಗಳೇ ಅಲ್ಲದೆ ಉತ್ತರ ಭಾರತದ ರಾಜ್ಯಗಳ ಗುಜರಾಥಿ, ಹಿಂದಿ, ಒರಿಯಾ, ಅಸ್ಸಾಮಿ, ನಾಗಾ, ಕಾಶ್ಮೀರಿ ಮುಂತಾದ ಭಾಷಾ ಸಂದರ್ಭಗಳು ಭಾಷಾಪರಿಸರಗಳಾಗಿ ರೂಪಗೊಂಡಿವೆ.

ದ್ವಿಭಾಷಿಕತೆ ಎಂದರೇನು? ಯಾರು ದ್ವಿಭಾಷಿಕರು? ಎಂಬ ಪ್ರಶ್ನೆಗೆ ಭಾಷಾವಿಜ್ಞಾನಿಗಳ ವ್ಯಾಖ್ಯಾನಗಳು ವಿವಿಧ ರೀತಿಯಲ್ಲಿವೆ. ಲಿಯೋನಾಲ್ಡ್ ಬ್ಲೂಮ್ ಫೀಲ್ಡ್ (೧೯೩೩) "ಸ್ಥಳೀಯ ಭಾಷಿಕರಿಗಿರುವ ಎರಡು

ಭಾಷೆಗಳ ಮೇಲಿನ ಪ್ರಭುತ್ವ" (ಪು. ೫೬) ಎಂದರೆ ಮ್ಯಾಕ್‌ನಮಾರ (೧೯೬೭) ಅವರ "ಯಾವನೇ ಒಬ್ಬ ದ್ವಿಭಾಷಿಕ ತನ್ನ ಮಾತೃ ಭಾಷೆಯನ್ನು ಬಿಟ್ಟು ಎರಡನೆಯ ಭಾಷೆಯಲ್ಲಿ ನಾಲ್ಕು ರೀತಿಯ ಭಾಷಾ ಕೌಶಲ್ಯಗಳಾದ ಮಾತನಾಡುವ, ಅರ್ಥೈಸಿಕೊಳ್ಳುವ, ಓದುವ, ಬರೆಯುವ ಕೌಶಲ್ಯಗಳಲ್ಲಿ ಯಾವುದಾದರೂ ಒಂದರಲ್ಲಾದರೂ ಕನಿಷ್ಟ ಸಾಮರ್ಥ್ಯವನ್ನು ಹೊಂದಿದ್ದರೆ ಸಾಕು" ಎನ್ನುವ ಹೇಳಿಕೆಗಳಿವೆ. ಒಬ್ಬ ಭಾಷಿಕನಿಗೆ ಎರಡೂ ಭಾಷೆಗಳ ಮೇಲಿರುವ ಸಮಾನ ಪ್ರಭುತ್ವ. ಸರಿಸಮಾನವಾಗಿ ಇದೇ ರೀತಿಯ ವ್ಯಾಖ್ಯೆಯನ್ನು ಅಪ್ಪಿಷಿಯರ್ (೧೯೭೪) ನೀಡುತ್ತಾರೆ. "ಎರಡು ಭಾಷಿಕ ಪ್ರಕ್ರಿಯೆಗಳ ನಡುವೆ ಯಾವುದೇ ಮಧ್ಯಸ್ಥಿಕೆ ಇಲ್ಲದೆ ಆ ವಿಭಿನ್ನ ಭಾಷೆಗಳ ಮೇಲೆ ಸಂಪೂರ್ಣ ಮೇಲುಗೈ ಸಾಧಿಸುವುದು" (ಪು. ೧) ಪ್ರಶ್ನೆಗಳಿಗೆ ಭಾಷಾವಿಜ್ಞಾನಿಗಳ ವ್ಯಾಖ್ಯಾನಗಳು ವಿವಿಧ ರೀತಿಯಲ್ಲಿವೆ. ದ್ವಿಭಾಷಿಕತೆಯ ಪರಿಕಲ್ಪನೆಯು ಮೊದಲ ನೋಟಕ್ಕೆ ಅಂತಹ ಸಮಸ್ಯೆಯಾಗೇನೂ ಕಾಣುವುದಿಲ್ಲ. ವೆಬ್‌ಸ್ಟರ್ಸ್ ನಿಘಂಟಿನ ಪ್ರಕಾರ (೧೯೬೧) ದ್ವಿಭಾಷಿಕತೆಯೆಂದರೆ "ಎರಡು ಭಾಷೆಗಳನ್ನಾಡುವ ಅಥವಾ ಬಳಸುವ ವಿಶೇಷವಾಗಿ ಸ್ಥಳೀಯ ಭಾಷಿಕನ ಹಾಗೆ (ನೇಟಿವ್ ಸ್ಪೀಕರ್) ಪ್ರಭಾವಿಗುಣಗಳುಳ್ಳವನು; ಒಬ್ಬ ವ್ಯಕ್ತಿ ಎರಡು ಭಾಷೆಗಳನ್ನು ಬಳಸುತ್ತಿದ್ದು, ವಿಶೇಷವಾಗಿ ಹವ್ಯಾಸಿಯಾಗಿ ಸ್ವಾಭಾವಿಕವಾಗಿ ಮತ್ತು ಹಿಡಿತವಾಗಿ ಸ್ಥಳೀಯ ಭಾಷಿಕನ ಹಾಗೆ ಇರುವವನು. ಹಾಗೂ ದ್ವಿಭಾಷಿಕತೆ ಎಂದರೆ ಎರಡೂ ಭಾಷೆಗಳಲ್ಲಿ ಸ್ಪಷ್ಟವಾಗಿ ಆಡುವಲ್ಲಿ ರೀತಿ" ಎಂದು ವ್ಯಾಖ್ಯಾನಿಸುತ್ತದೆ.

ಹೇಗನ್‌ರವರು (೧೯೫೬) "ಯಾವುದೇ ಭಾಷೆಯೊಂದರ ಭಾಷಿಕನೊಬ್ಬನು ಇನ್ನೊಂದು ಭಾಷೆಯಲ್ಲಿ ಸಂಪೂರ್ಣವಾಗಿ, ಅರ್ಥಪೂರ್ಣವಾಗಿ ಮಾತನ್ನು ಉತ್ಪಾದಿಸುವಂತಿರಬೇಕು"(ಪು. ೭) ಎಂದು ಹೇಳಿದರೆ, ವೈನ್‌ರಿಕ್ (೧೯೫೩) "ಎರಡು ಭಾಷೆಗಳನ್ನು ಪರ್ಯಾಯವಾಗಿ ಬಳಸುವ ಅಭ್ಯಾಸವೇ ದ್ವಿಭಾಷಿಕತೆ ಹಾಗೂ ಅದರಲ್ಲಿ ಭಾಗಿಯಾಗುವ ವ್ಯಕ್ತಿ 'ದ್ವಿಭಾಷಿಕ'ನೆನಿಸುತ್ತಾನೆ (ಪು. ೧) ಎಂದೂ ದ್ವಿಭಾಷಿಕತೆಯ ಜೊತೆಗೆ ದ್ವಿಭಾಷಿಕನು ಯಾರೆಂದೂ ವ್ಯಾಖ್ಯಾನಿಸುತ್ತಾರೆ. ಮ್ಯಾಕೆಯವರು (೧೯೫೭) "ವ್ಯಕ್ತಿಯೊಬ್ಬನಿಂದ ಎರಡು ಅಥವಾ ಅದಕ್ಕಿಂತ ಹೆಚ್ಚು ಭಾಷೆಗಳನ್ನು ಪರ್ಯಾಯವಾಗಿ ಬಳಸುವ ಸಂದರ್ಭ" (ಪು.೫೧) ಎಂದು ವ್ಯಾಖ್ಯಾನಿಸಿದರೆ ಟೇಲರ್ (೧೯೭೬)ರವರ ಪ್ರಕಾರ "ಒಂದು ಅಥವಾ ಅದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಅದರ ಉಪಭಾಷೆ ಅಥವಾ ಮಾತಿನ ಶೈಲಿಯ ವಿಭಿನ್ನಧ್ವನಿ, ಪಾರಿಭಾಷಿಕ ಮತ್ತು ವಾಕ್ಯರಚನೆಗಳೊಡನೆ ಮಾತನಾಡುವುದು" (ಪು. ೨೪೯) ಎಂದು ಭಾಷೆಯಲ್ಲಿನ ಆಂತರಿಕ ರಚನಾಮಟ್ಟದ ವ್ಯಾಖ್ಯೆಯನ್ನು ನೀಡುತ್ತಾರೆ. ಈ ಎಲ್ಲ ಹೇಳಿಕೆಗಳು ಭಾಷಿಕನಿಗೆ ಭಾಷೆಯ ಮೇಲಿರುವ ಪ್ರಭುತ್ವವನ್ನೋ ಅಥವಾ ಭಾಷಾ ಬಳಕೆಯ ಸಂದರ್ಭದಲ್ಲಿ ಕಂಡುಬರುವ ಭಿನ್ನತೆಯ ವೈಚಿತ್ರವನ್ನೋ ಕುರಿತು ಹೇಳಿದ ವ್ಯಾಖ್ಯೆಗಳು. ಭಾಷೆಯೆನ್ನುವುದು ಸಮುದಾಯವೊಂದರ ಆಸ್ತಿಯಾದರೆ, ದ್ವಿಭಾಷಿಕತೆ ಎಂಬುದು ವ್ಯಕ್ತಿಯೊಬ್ಬನ ವೈಯಕ್ತಿಕ ಆಸ್ತಿ. ಹಾಗೆಯೇ ವ್ಯಕ್ತಿಯೊಬ್ಬನ ಎರಡು ಭಾಷೆಗಳ ಬಳಕೆಯು ಎರಡು

ವಿಭಿನ್ನ ಭಾಷಾ ಸಮುದಾಯಗಳ ಅಸ್ತಿತ್ವವನ್ನು ಕುರಿತು ಸಾರುತ್ತದೆ. ದ್ವಿಭಾಷಿಕತೆಯೆಂಬುದು ಒಂದು ಭಾಷಾವಾತಾವರಣವಲ್ಲ. ಅದೊಂದು ತನ್ನಿಂದ ತಾನೇ ಬಳಕೆಯಾಗುವ ಒಂದು ನಡವಳಿಕೆಯಾಗಿದೆ (ಎಂ.ಎಸ್. ತಿರುಮಲೈ, ಶ್ಯಾಮಲಾ ಚೆಂಗಪ್ಪ, ೧೯೮೬).

## ೩.೪. ದ್ವಿಭಾಷಿಕತೆಯ ಬಗೆಗಳು

ದ್ವಿಭಾಷಿಕತೆ ಉಂಟಾಗುವ ಸನ್ನಿವೇಶಗಳಲ್ಲಿ ಆಯಾ ಭಾಷಿಕರ ರಾಜಕೀಯ ಸಾಂಸ್ಕೃತಿಕ ಸ್ಥಾನಮಾನಗಳನ್ನು ಅನುಸರಿಸಿ ಬೇರೆ ಬೇರೆ ರೀತಿಯ ದ್ವಿಭಾಷಿಕತೆಗಳು ಉಂಟಾಗುತ್ತವೆ. ಹಾಗೆಯೇ ದ್ವಿಭಾಷಿಕರಾದವರು ತಮ್ಮ ಭಾಷಾ ಸಾಮರ್ಥ್ಯಗಳನ್ನು ಬಳಸುವ ವಿಧಾನಗಳನ್ನು ಅವಲಂಬಿಸಿ ದ್ವಿಭಾಷಿಕತೆಯಲ್ಲಿ ಬೇರೆ ಬೇರೆ ಬಗೆಗಳುಂಟಾಗುತ್ತವೆ(ನಾರಾಯಣ ಕೆ.ವಿ., ೧೯೯೮, ಪು.೭).

ದ್ವಿಭಾಷಿಕನೊಬ್ಬನಿಗೆ ಎರಡೂ ಭಾಷೆಗಳಲ್ಲಿನ ಸಾಮರ್ಥ್ಯವು ಸಮಪ್ರಮಾಣದಲ್ಲಿದ್ದರೆ, ಅಂತಹ ದ್ವಿಭಾಷಿಕ, ಸಮದ್ವಿಭಾಷಿಕನಾಗುತ್ತಾನೆ. ಆದರೆ ಇಂತಹ ಸಮತೋಲಿತ ದ್ವಿಭಾಷಿಕರು ವಿರಳವಾಗಿ ಕಾಣಸಿಗುತ್ತಾರೆ. ಕೆಲವೊಂದು ಸನ್ನಿವೇಶಗಳಲ್ಲಿ ಸ್ಪಷ್ಟ ಸಮದ್ವಿಭಾಷಿಕನೊಬ್ಬ ಅವಧಾರಣೆ, ಉಚ್ಚಾರಣೆ ಮತ್ತು ಸ್ಪಷ್ಟತೆಗಳಲ್ಲಿ ಒಂದು ಭಾಷೆಯಲ್ಲಿನ ಹೆಚ್ಚಿನ ಕೌಶಲ್ಯವನ್ನು, ಮತ್ತೊಂದು ಭಾಷೆಯಲ್ಲಿ ಕಡಿಮೆ ಕೌಶಲ್ಯಗಳನ್ನು ಹೊಂದಿರಬಹುದು(ಬೆಟನ್ಸ್ ಬೇರ್ಡ್ಸ್ಮೋರ್, ೧೯೮೬, ಪು.೯).

ದೀರ್ಘಕಾಲ ತಮ್ಮ ಸ್ವಭಾಷೆಯನ್ನು ಬಳಸದೇ ಆ ಭಾಷೆಯಲ್ಲಿನ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುವುದು ಅವ್ಯಕ್ತ ದ್ವಿಭಾಷಿಕತೆ (ಡಾರ್ಮ್ಯಾಂಟ್ ಬೈಲಿಂಗ್ವಸಂ) ಎನ್ನಬಹುದು (ಪು.೧೬). ವಿದೇಶಿ ಭಾಷೆಯೊಂದನ್ನು ಯಾವುದೇ ರೀತಿಯ ಔಪಚಾರಿಕತೆಯಿಲ್ಲದೆ ಭಾಷೆಯೊಂದನ್ನು ಸ್ವಾಭಾವಿಕ ರೀತಿಯಲ್ಲಿ ಕಲಿಯುವುದನ್ನು 'ಸಹಜ ದ್ವಿಭಾಷಿಕತೆ'(ಬೇಟನ್ಸ್-ಬೇರ್ಡ್ಸ್ಮೋರ್, ೧೯೮೬, ಪು.೮) ಅಥವಾ 'ಪ್ರಾಥಮಿಕ ದ್ವಿಭಾಷಿಕತೆ' (ಹೌಸ್ಟನ್, ೧೯೭೨) ಎನ್ನಲಾಗಿದೆ. ಹಾಗೆಯೇ ವಿದೇಶಿ ಭಾಷೆಯೆದನ್ನು ಔಪಚಾರಿಕವಾಗಿ ಬೋಧನೆಯ ಮೂಲಕ ಕಲಿತ ಸಂದರ್ಭವನ್ನು 'ದ್ವಿತೀಯ ದ್ವಿಭಾಷಿಕತೆ' ಎನ್ನಬಹುದು. ದ್ವಿಭಾಷಿಕ ಸಮಾಜವೊಂದರಲ್ಲಿ ಮಾತನಾಡುವ ಭಾಷೆಗಳಲ್ಲಿ ಅಧಿಕಾರ, ಸಂಸ್ಕೃತಿ ಮತ್ತು ಅಲ್ಲಿನ ಸಮಾಜದ ಕೌಟುಂಬಿಕ ಜೀವನದಲ್ಲಿ ಸಮಾನತೆಯಿದ್ದು, ಯಾವುದೇ ತಾರತಮ್ಯಗಳಿಲ್ಲದಿದ್ದರೆ ಅಂತಹ ಭಾಷೆಯನ್ನು ಸಮಾನಂತರ ದ್ವಿಭಾಷಿಕತೆ ಎನ್ನುತ್ತಾರೆ. ಎಲ್ಲಿ ಒಂದೇ ಭಾಷೆಯು ಅಧಿಕಾರಸ್ಥ 'ಸ್ಥಾನಮಾನ' ಉಳ್ಳದ್ದಾಗಿರುತ್ತದೋ ಅದು 'ಓರೆ ದ್ವಿಭಾಷಿಕತೆ'ಯಾಗಿರುತ್ತದೆ (ಪೋಲ್ ೧೯೬೫) 'ಸಮಾಂತರ ದ್ವಿಭಾಷಿಕತೆ' ಸಂದರ್ಭಗಳಲ್ಲಿ ರೂಪುಗೊಳ್ಳುವ ದ್ವಿಭಾಷಿಕರು ತಾವು ಕಲಿತ ಎರಡೂ ಭಾಷೆಗಳನ್ನು ಬಳಸುವಾಗ ಯಾವುದೇ ನಿರ್ಬಂಧವನ್ನು ಅನುಭವಿಸುವುದಿಲ್ಲ. ಎಲ್ಲ ವಲಯಗಳಲ್ಲೂ ಆ ಭಾಷೆಗಳನ್ನು ಬಳಸಲು ಸಿದ್ಧರಿರುತ್ತಾರೆ. ಆದರೆ ಆ ಎರಡೂ ಭಾಷೆಗಳ ನಡುವೆ ಅಧಿಕಾರದ, ಸಂಸ್ಕೃತಿಯ ತಾರತಮ್ಯವಿದ್ದರೆ ಆಗ ಉಂಟಾಗುವ ದ್ವಿಭಾಷಿಕತೆಯನ್ನು 'ಲಂಬಾಂತರ ದ್ವಿಭಾಷಿಕತೆ' ಎನ್ನುತ್ತಾರೆ(ನಾರಾಯಣ ಕೆ.ವಿ., ೧೯೯೮, ಪು.೯).

ಮೇಲೆ ಹೇಳಿದ ದ್ವಿಭಾಷಿಕತೆಯ ವಿಭಜನೆಗಳು ದ್ವಿಭಾಷಿಕತೆ ನಿರ್ಮಾಣವಾಗುವ ಸಂದರ್ಭ ಕ್ರಮ ಇತ್ಯಾದಿಗಳನ್ನು ಅವಲಂಬಿಸಿರುವುದಿಲ್ಲ. ದ್ವಿಭಾಷಾ ಯೋಜಕರಿಗೆ, ಮನೋವಿಜ್ಞಾನಿಗಳಿಗೆ ಈ ದ್ವಿಭಾಷಿಕತೆಯ ವಿಭಜನೆ ಅಥವಾ ಬಗೆಗಳ ಉಪಯೋಗವಿದೆ.

## ೩.೫. ಪಾಶ್ಚಾತ್ಯ ಸಂದರ್ಭದಲ್ಲಿ ದ್ವಿಭಾಷಿಕತೆಯ ಅಧ್ಯಯನದ ಬೆಳವಣಿಗೆ

ಪಶ್ಚಿಮದಲ್ಲಿ ಭಾಷೆಯ ಅಧ್ಯಯನವು ಒಂದು ಶಿಸ್ತಾಗಿ ರೂಪುಗೊಂಡಿದ್ದು ಅಮೇರಿಕಾ, ಇಂಗ್ಲೆಡ್, ಜರ್ಮನಿ ಮತ್ತು ಫ್ರಾನ್ಸ್‌ಗಳಲ್ಲಿ. ೧೯೨೦ರವರೆಗೆ ಅಂದರೆ ಲಿಯೋನಾಲ್ಡ್ ಬ್ಲೂಮ್‌ಫೀಲ್ಡ್‌ವರೆಗೆ ಈ ರಾಷ್ಟ್ರಗಳಲ್ಲಿರುವ ಭಾಷಾಸಮುದಾಯದ ಭಾಷಿಕರೆಲ್ಲರೂ ಒಂದೇ ಭಾಷೆಯನ್ನಾಡುತ್ತಾರೆ ಎಂಬುದಾಗಿ ಹಾಗೂ ಈ ಭಾಷಿಕರಲ್ಲಿ ಭಾಷೆ ಮಿಶ್ರ ಇರುವುದಿಲ್ಲ ಎಂಬ ದೃಷ್ಟಿಕೋನದಲ್ಲಿ ಇಲ್ಲಿನ ಭಾಷಾಧ್ಯಯನಗಳು ನಡೆದಿವೆ. ಈ ಅಧ್ಯಾಯದಲ್ಲಿ ದ್ವಿಭಾಷಿಕತೆ ಕುರಿತ ಸಂಶೋಧನೆಗಳ ಮೇಲೆ ಕಾಲಾನುಕ್ರಮವಾಗಿ ಒಳನೋಟವನ್ನು ಬೀರಲಾಗಿದೆ.

### ದ್ವಿಭಾಷಿಕತೆಯ ಅಧ್ಯಯನದ ಇತಿಹಾಸ

೧೯೧೩ರಲ್ಲಿ ರೊಂಜತ್ ಅವರು ತಮ್ಮ ಮಗ ಲೂಯಿಸ್ ಫ್ರೆಂಚ್/ಜರ್ಮನ್ ದ್ವಿಭಾಷಿಕನಾದ ಬಗೆಯನ್ನು ವಿವರಿಸಿದ್ದಾರೆ. ಲಿಯೋಪೋಲ್ಡ್ ಅವರ ೧೯೩೯-೪೯ರವರೆಗಿನ ಅವಧಿಯಲ್ಲಿ ನಡೆಸಲಾದ ಮಕ್ಕಳಲ್ಲಿನ ದ್ವಿಭಾಷಿಕತೆಯ ಬಗೆಗಿನ ಅಧ್ಯಯನ ಅತ್ಯುತ್ತಮವೆನಿಸಿದೆ. ಈ ಅವಧಿಯಲ್ಲಿ ಲಿಯೋಪೋಲ್ಡ್ ತಮ್ಮ ಮಗಳಾದ ಹಿಲ್ಡೆಗಾರ್ಡ್‌ಳ ತಂದೆಯ ಜರ್ಮನ್ ಭಾಷೆ ಮತ್ತು ತಾಯಿಯ ಇಂಗ್ಲೀಷ್ ಭಾಷೆಯು ಹೇಗೆ ಬೆಳವಣಿಗೆ ಆಯಿತೆಂಬುದನ್ನು ತಮ್ಮ ದಿನಚರಿ ಅಧ್ಯಯನದಲ್ಲಿ ದಾಖಲಿಸಿದ್ದಾರೆ. ಇಲ್ಲಿನ ವಿಶಾಲ ವಾತಾವರಣದಲ್ಲಿ ಮಗುವಿನ ದ್ವಿಭಾಷಿಕತೆಯ ಬೆಳವಣಿಗೆಯನ್ನು ಕುರಿತು ದಾಖಲಿಸಿರುವುದಲ್ಲದೆ, ಎರಡು ಭಾಷೆಗಳ ಪ್ರತ್ಯೇಕತೆ; ಬೇರೊಬ್ಬರ ಮಗುವಿನ ಜೊತೆ ಮಾತನಾಡುವಾಗ ಮಗುವಿನ ಮೇಲೆ ಬೀರುವ ಪರಿಣಾಮ, ದ್ವಿಭಾಷಿಕ ಸಾಮರ್ಥ್ಯದ ಅಸಮಾನತೆಯ ಅಂಶ ಪ್ರಬಲ ಭಾಷೆಯೊಂದು ಹೇಗೆ ದುರ್ಬಲ ಭಾಷೆಯ ಮೇಲೆ ತನ್ನ ಪರಿಣಾಮ ಬೀರುತ್ತದೆಂಬ ಅಂಶಗಳ ಮೇಲೆ ಕುತೂಹಲಕರ ನೋಟವನ್ನು ಬೀರಿದ್ದಾರೆ.

ಯೂರಿಯಲ್ ವೆನ್‌ರೀಚ್ ಅವರ 'ಲಾಂಗ್ವೇಜಸ್ ಇನ್ ಕಾಂಟ್ಯಾಕ್ಟ್' (೧೯೫೩) ಕೃತಿಯು ಭಾಷಿಕತೆಯ ಮೇಲೆ ಅಧ್ಯಯನ ಕೈಗೊಂಡ ಮೊದಲ ಕೃತಿಗಳಲ್ಲಿ ಅತ್ಯಂತ ಪ್ರಭಾವಯುತವಾದುದು. ಸ್ವಿಟ್ಜರ್‌ಲೆಂಡ್ ದ್ವಿಭಾಷಿಕತೆಯ ಮೇಲೆ ವಿಶೇಷ ಗಮನಹರಿಸಿ ಅಧ್ಯಯನ ಕೈಗೊಂಡ ಸಂದರ್ಭದಲ್ಲಿ ಈ ಮನೋವೈಜ್ಞಾನಿಕ ಭಾಷಾವಿಜ್ಞಾನ ಮತ್ತು ಸಾಮಾಜಿಕ ಭಾಷಾವಿಜ್ಞಾನಗಳ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿದ್ದಾರೆ. ದ್ವಿಭಾಷಿಕತೆಯ ಅಧ್ಯಯನಕ್ಕೆ ಉತ್ತಮ ಸೈದ್ಧಾಂತಿಕ ಚೌಕಟ್ಟನ್ನು ನೀಡಿದ ಕೃತಿ ಇದ್ದಾಗಿದ್ದು,

ರೋಮನ್ ಜಾಕೋಬ್‌ಸನ್ ಮತ್ತು ಆಂಡ್ರೆ ಮಾರ್ಟಿನೆಜ್‌ರ ಯೂರೋಪಿನ ಸಂರಚನವಾದ ಈತನ ಮೇಲೆ ಪ್ರಭಾವ ಬೀರಿದೆ.

ರೊಂಜತ್ ಮತ್ತು ವೆನ್‌ರೀಚ್ ನಡುವಿನ (೧೯೧೩-೧೯೫೩) ಅವಧಿಯಲ್ಲಿ ಯೂರೋಪ್ ಖಂಡದಲ್ಲಿ ರಾಷ್ಟ್ರೀಯತೆ, ರಾಜ್ಯ ಪ್ರಭುತ್ವ ಭಾಷಾ ಅಲ್ಪಸಂಖ್ಯಾತ ಸಮುದಾಯಗಳ ಭಾಷಾ ಪಲ್ಲಟ, ಭಾಷಾ ಶುದ್ಧತೆ ಮುಂತಾದವುಗಳ ಮೇಲೆ ಸಾಕಷ್ಟು ಅಧ್ಯಯನಗಳು ನಡೆದವು. ಇವುಗಳ ಉಪಯೋಗಾತ್ಮಕ ಚಿತ್ರಣ (Vildomec) ವಿಲ್ಡೋಮೆಕ್ (೧೯೬೩) ಅವರ ಸಾಹಿತ್ಯದಲ್ಲಿ ಸಿಗುತ್ತದೆ.

ಇದಾದ ಮೇಲೆ ಐನ್‌ರ್ ಹೇಗನ್‌ರ 'ದಿ ನಾರ್ವೇಯನ್ ಲಾಂಗ್ವೇಜ್ ಇನ್ ಅಮೇರಿಕ' ಕೃತಿಯು ೧೯೫೩ ರಲ್ಲಿ ಎರಡು ಸಂಪುಟಗಳಲ್ಲಿ ಹೊರಬಂದಿತು. ಈ ಶತಮಾನದ ೩೦-೪೦ರ ದಶಕಗಳಲ್ಲಿ ಸಂಶೋಧನೆ ಮತ್ತು ಕ್ಷೇತ್ರಕಾರ್ಯವನ್ನು ಗಮನದಲ್ಲಿಟ್ಟುಕೊಂಡು ರಚಿತವಾದ ಈ ಕೃತಿ ಭಾಷಾ ಸಂಪರ್ಕ ಮತ್ತು ದ್ವಿಭಾಷಿಕತೆಯ ಮೇಲಿನ ಮುದ್ರಿತ ರೂಪದ ಅತ್ಯಂತ ವಿಸ್ತೃತ ಅಧ್ಯಯನವಾಗಿದೆ.

ಅಷ್ಟೇ ಅಲ್ಲದೆ ಈ ಸಂಪುಟಗಳು ಹೊಸ ರೀತಿಯಾಗಿ ವಲಸಿಗರ ಸಮುದಾಯ ಮತ್ತು ಐತಿಹಾಸಿಕ ಹಿನ್ನಲೆ ಉಪಭಾಷಾ ವೀಕ್ಷಣೆ, ಸಾಮಾಜಿಕ ಭಾಷಾವಿಜ್ಞಾನದ ನೆಲೆಗಳಲ್ಲಿ ತಾಂತ್ರಿಕವಾಗಿ ಅಧ್ಯಯನಗೊಂಡ ಕೃತಿಗಳಾಗಿವೆ. ಇಲ್ಲಿ ಅಮೇರಿಕಾದ ಸಂರಚನಾವಾದ ಪ್ರಭಾವಿಸಿರುವ ಅಮೇರಿಕನ್ ಮತ್ತು ಸ್ಕ್ಯಾಂಡಿನೇವಿಯಾದ ಭಾಷ ಪ್ರಭೇದ ವಿಜ್ಞಾನದ ಮಾದರಿ ಸೈದ್ಧಾಂತಿಕ ಚೌಕಟ್ಟು ಹಾಗೂ ಕ್ಷೇತ್ರಕಾರ್ಯಗಳನ್ನು ಆಧರಿಸಿ ವಿಶ್ಲೇಷಣೆ ಮಾಡಲಾಗಿದೆ. ಅಮೇರಿಕ-ನಾರ್ವೆ ಪದಗಳ ಪರಸ್ಪರ ಸ್ವೀಕರಣ ಪ್ರಕ್ರಿಯೆ, ಧ್ವನಿಮಾ, ಮನೋಭಾಷಾವಿಜ್ಞಾನದ ಆಯಾಮಗಳು ಹಾಗೂ ಸಾಮಾನ್ಯ ಭಾಷಾವಿಜ್ಞಾನಗಳ ಮೇಲೆ ಈ ಸಂಪುಟಗಳು ಬೆಳಕು ಚೆಲ್ಲುತ್ತವೆ.

ಜೋಷುವಾ ಫಿಷ್‌ಮನ್ ಅವರು ಅಮೇರಿಕಾದ ನ್ಯೂಯಾರ್ಕ್‌ಗೆ ವಲಸೆ ಬಂದ ಭಾಷಾ ಸಮುದಾಯಗಳಾದ ಸ್ಪ್ಯಾನಿಷ್-ಇಂಗ್ಲೀಷ್ ದ್ವಿಭಾಷಿಕರ ನಡುವಿನ ಭಾಷಾನಿಷ್ಠೆಯ ಸಂದರ್ಭವನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಅವರ ೧೯೬೫ರ ಪ್ರಸಿದ್ಧ ಪ್ರಬಂಧದಲ್ಲಿ 'ಆವರಣ' ಎನ್ನುವ ಪದದ ಪರಿಕಲ್ಪನೆಯನ್ನು ನೀಡಿದ್ದಾರೆ. 'ಆವರಣ' ಎಂದರೆ "ಒಂದು ಸಾಮಾನ್ಯ ನಡಾವಳಿ ನಿಯಮಗಳಿಂದ ನಿರ್ಬಂಧಿತವಾದ ಸಾಮಾಜಿಕ ಸಂದರ್ಭಗಳ ಗುಚ್ಚ ಅಥಾ ಗೊಂಚಲು" ಮೂಲಭೂತವಾಗಿ ಆವರಣ ವಿಶ್ಲೇಷಣೆಯು ಸಮಗ್ರ ವಿಶ್ಲೇಷಣೆಯನ್ನು ಹೊಂದಿರುವ ಅಧ್ಯಯನ. ಇದು ವ್ಯಕ್ತಿಗಳ ಭಾಷಾ ನಡುವಳಿಕೆ, ಸಾಮಾಜಿಕ ಸಂರಚನೆಯನ್ನು ವಿವರಿಸುತ್ತದೆ.

ಮ್ಯಾಕೆಯವರು (೧೯೬೨-೭೦) ಪ್ರಾಯೋಗಿಕ ಸ್ತರದಲ್ಲಿ ಜಗತ್ತಿನಾದ್ಯಂತ ಹೇಗೆ ದ್ವಿಭಾಷಿಕತೆಯು ವಿಭಿನ್ನ ಸ್ವರೂಪ ಪಡೆದಿದೆಯೆಂದು ಕ್ರಮಬದ್ಧವಾಗಿ ವಿವರಿಸಿದ್ದಾರೆ. ಫ್ರೆಂಚ್ ಭಾಷಿಕ ಕೆನಡಾದ ದ್ವಿಭಾಷಿಕತೆಯ ಸಂದರ್ಭವನ್ನು ಮರುಪರಿಶೀಲನೆ ಒಳಪಡಿಸಬೇಕೆಂದು ಅಭಿಪ್ರಾಯ ಪಡುತ್ತಾರೆ.

ರೆಜಿನಾ ಕೊಪ್ಪೆ ಮತ್ತು ಜೂರ್ಜೆನ್ ಮೀಸಲ್ ಅವರು ದ್ವಿಭಾಷಿಕ ಮಕ್ಕಳಲ್ಲಿನ ಫ್ರೆಂಚ್ ಮತ್ತು ಜರ್ಮನ್ ಭಾಷೆಯನ್ನು ಏಕಕಾಲಕ್ಕೆ ಪ್ರಥಮ ಭಾಷೆಯನ್ನಾಗಿ ಸ್ವೀಕರಿಸಿದ ಸಂದರ್ಭವನ್ನು ಅಧ್ಯಯನ ನಡೆಸಿದ್ದಾರೆ. ಹಾಗೆಯೇ ಸ್ಪ್ಯಾನಿಷ್-ಇಟಾಲಿಯನ್ ವಲಸಿಗ ಕಾರ್ಮಿಕರು ಜರ್ಮನ್ ಭಾಷೆಯನ್ನು ದ್ವಿತೀಯ ಭಾಷೆಯಾಗಿ ಸ್ವೀಕರಿಸಿದ ಸಂದರ್ಭವನ್ನು ಹಾಗೂ ಭಾಸ್ಕ್ ಮತ್ತು ಸ್ಪ್ಯಾನಿಷ್ ದ್ವಿಭಾಷಾ ಸ್ವೀಕರಣವನ್ನು ಕುರಿತು ಅಧ್ಯಯನ ನಡೆಸಿದ್ದಾರೆ.

ಕೆನೆತ್ ಹಿಲ್ಟೆನ್‌ಸ್ಟ್ಯಾಮ್ ಅವರು ಮನೋಭಾಷಾವಿಜ್ಞಾನದ ಮೂಲಕ ದ್ವಿಭಾಷಿಕತೆಯ ಅಧ್ಯಯನದಲ್ಲಿ ಸ್ವೀಡಿಷ್ ವಯಸ್ಕರ ದ್ವಿತೀಯ ಭಾಷಾ ಸ್ವೀಕರಣವನ್ನು ಕುರತು ಬೆಳಕು ಚೆಲ್ಲಿದ್ದಾರೆ. ಹಾಗೆಯೇ ಅಲ್ಜೀಮರ್ಸ್‌ನ ಬುದ್ಧಿಮಾಂದ್ಯರ ದ್ವಿಭಾಷಿಕ ಸಾಮರ್ಥ್ಯದ ಪರಿಣಾಮಗಳು ಹಾಗೂ ಫಿನ್ನಿಷ್ ಸ್ವೀಡಿಷ್ ದ್ವಿಭಾಷಿಕರ ನುಡಿಜಿಗಿತದ ನಡವಳಿಕೆಗಳನ್ನು ಅಭ್ಯಾಸ ಮಾಡಿದ್ದಾರೆ.

ಪೀಟರ್ ಆಯೆರ್ ಅವರು ಉಪಭಾಷಿಕತೆ, ಸಾಮಾಜಿಕ ಭಾಷಾವಿಜ್ಞಾನ, ದ್ವಿಭಾಷಿಕತೆ ಹಾಗೂ ಧ್ವನಿವಿಜ್ಞಾನಗಳ ಕ್ಷೇತ್ರದಲ್ಲಿ ಆಳವಾದ ಅಧ್ಯಯನ ನಡೆಸಿ ಕೃತಿಗಳನ್ನು ಪ್ರಕಟಿಸಿದ್ದಾರೆ. ಈ ವಿಷಯಗಳ ಮೇಲೆ ಹಲವು ಸಂಪುಟಗಳನ್ನು ಹೊರತಂದಿರುವ ಇವರು ದಕ್ಷಿಣ ಜರ್ಮನಿಯ ಕೊನ್‌ಸ್ಟಾಂಜ್ ಮೂಲದ ಇಟಾಲಿಯನ್-ಜರ್ಮನ್ ಭಾಷಿಕ ಮಕ್ಕಳ ಭಾಷಾ ನಡವಳಿಕೆಯನ್ನು ಕುರಿತ ವಿಸ್ತೃತ ಅಧ್ಯಯನವನ್ನು ಕೈಗೊಂಡಿದ್ದಾರೆ. ಇತ್ತೀಚೆಗೆ ಕೆನಡಾದಲ್ಲಿನ ದ್ವಿಭಾಷಿಕ ಅಧ್ಯಯನವನ್ನು ಕೈಗೊಂಡಿದ್ದಾರೆ.

ಲೆಸ್ಲಿ ಮಿಲ್ರಾಯ್ ಮತ್ತು ಲಿ ವೆಯ್ ನುಡಿ ಆಯ್ಕೆ (Code Choice) ಮತ್ತು ನುಡಿಜಿಗಿತದ ಮೇಲೆ ಟೈನೆ ಬಳಿಯ ಚೀನಿ ಸಮುದಾಯದವರ ಹಲವು ತಲೆಮಾರುಗಳ ಅಧ್ಯಯನದ ಅತಿದೊಡ್ಡ ಯೋಜನೆಯನ್ನು ಕೈಗೆತ್ತಿಕೊಂಡಿದ್ದಾರೆ.

ಮೋನಿಕಾ ಹೆಲ್ಲರ್ ಅವರು ಸಾಮಾಜಿಕ ಭಾಷಾವಿಜ್ಞಾನಿಯಾಗಿ ಬರ್ಕ್ಲಿಯಲ್ಲಿ ತರಬೇತಿಗೊಂಡ ಸಾರ್ವಜನಿಕ ಹಾಗೂ ಖಾಸಗಿ ವಲಯಗಳ ರಾಜಕೀಯ ಆಯಾಮಗಳ ದ್ವಿಭಾಷಿಕತೆ ಹಾಗೂ ನುಡಿಜಿಗಿತಗಳ ಮೇಲೆ ನಿರ್ಧಿಷ್ಟ ಪರಿಸರ ಮೂಲಕ ಅಧ್ಯಯನ ಅಷ್ಟೇ ಅಲ್ಲದೆ ಮಾಂಟ್ರಿಯಲ್‌ನ ದೊಡ್ಡ ದೊಡ್ಡ ಮದ್ಯ ತಯಾರಿಕಾ ಘಟಕಗಳಲ್ಲಿನ ಕಾರ್ಮಿಕರ ಫ್ರೆಂಚ್-ಇಂಗ್ಲೀಷ್ ದ್ವಿಭಾಷಾ ಪರಿಸರದ ಕ್ಷೇತ್ರಕಾರ್ಯ ಕೈಗೊಂಡಿದ್ದಾರೆ. ಇತ್ತೀಚೆಗೆ ಟೊರಾಂಟೊ ಮೆಟ್ರೋಪಾಲಿಟನ್ ಪ್ರದೇಶದಲ್ಲಿನ ಶಾಲೆಗಳ ದ್ವಿಭಾಷಿಕ ಅಧ್ಯಯನಗಳ ಹಾಗೂ ನುಡಿಜಿಗಿತದ ಮೇಲಿನ ಸಂಪುಟಗಳನ್ನು ಅವರು ಸಂಪಾದಿಸಿದ್ದಾರೆ(Mouton de Grayter, ೧೯೮೮). ಪೀಟರ್ ಮ್ಯುಸ್ಕಿನ್ ಅವರು ಆಂಡಿಸ್‌ನ ಕ್ವೆಚುವಾದ ಕ್ವೆಚುವ-ಸ್ಪ್ಯಾನಿಷ್ ಭಾಷಾ ಸಂಪರ್ಕ ಮತ್ತು ಕೆರಿಬಿಯನಂ, ಪೆಪಿಯಮೆಂಟು ಮತ್ತು ನೆಗೆರ್‌ಹಾಲ್ಯಾಂಡ್ಸ್‌ನ ಕ್ರಿಯೋಲ್ ಭಾಷೆಗಳನ್ನ ಕುರಿತಾಗಿ ಅಧ್ಯಯನ ಮಾಡಿದ್ದಾರೆ.

ಶಾನ್ ಪಾಪ್‌ಲಾಕ್ ಅವರು ನ್ಯೂಯಾರ್ಕಿನ ಪ್ಯೂಯೆರ್ಟೋರಿಕನ್ ಸಮುದಾಯ, ಒಟ್ಟಾವ-ಹಲ್ ಪ್ರದೇಶದ ಫ್ರೆಂಚ್ ಭಾಷಿಕ ಸಮುದಾಯದವರ ಮತ್ತು ಕೆನಡಾದಲ್ಲಿನ ಫಿನ್ನಿಷ್, ತಮಿಳು ಮತ್ತು ಪಶ್ಚಿಮ ಆಫ್ರಿಕಾ ವಲಸಿಗರು ಹಾಗೂ ಮೊದಲ ಆಫ್ರಿಕನ್ ಅಮೇರಿಕನ್‌ರ ಇಂಗ್ಲೀಷ್ ಹೇಗೆ ಇಂಗ್ಲೀಷ್ ಸಮಾನಾ, ನೋವಾಸ್ಕಾಟಿಯಾ ಮತ್ತು ಎಕ್ಸ್‌ಸ್ಲೇವ್ ರೆಕಾರ್ಡಿಂಗ್‌ಗಳಲ್ಲಿ ಹೇಗೆ ಪ್ರತಿಫಲಿಸಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಕೆರೋಲ್ ಮಯರ್ಸ್ ಸ್ಕಾಟಿನ್ ಅವರು ಪೂರ್ವ ಆಫ್ರಿಕಾದ ಸ್ವಾಹಿಲಿ ಇಂಗ್ಲೀಷ್ ದ್ವಿಭಾಷಿಕತೆಯನ್ನು ಕುರಿತಾದ ಹಲವು ರೀತಿಯ ದೃಷ್ಟಿಕೋನಗಳನ್ನು ಹೊಂದಿದ್ದಾರೆ. ಭಾಷೆಯ ತಟಸ್ಥ ತಂತ್ರ ಹಾಗೂ ನುಡಿಜಿಗಿತಗಳ ಕುರಿತು ಅಧ್ಯಯನ ಮಾಡಿದ್ದಾರೆ.

ಫ್ರಾಂಕೋಯಿಸ್ ಗ್ರೋಸ್‌ಜೀನ್ ಮನಃಶಾಸ್ತ್ರಜ್ಞರೂ ಆಗಿದ್ದು, ಮನೋಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಫ್ರೆಂಚ್-ಇಂಗ್ಲೀಷ್ ದ್ವಿಭಾಷಿಕ ಪ್ರಕ್ರಿಯೆಯನ್ನು ಕುರಿತು ಹಲವು ವರ್ಷಕಾಲ ಕಾರ್ಯನಿರ್ವಹಿಸಿದ್ದಾರೆ. ಇದರ ಬಗೆಗಿನ ಅವರ ಅಧ್ಯಯನ ಜ್ಞಾನವನ್ನು ಅವರದ್ದೆ ಕೃತಿ Life with Two Language ಕೃತಿಯಲ್ಲಿ ನೋಡಬಹುದು.

ಲೂಯಿಸ್ ದಬೆನ್ ಮತ್ತು ಡೇನಿಯಲ್ ಮೂರ್ ಅವರುಗಳು ಯೂರೋಪಿನ ವಲಸಿಗರ ದ್ವಿಭಾಷಾ ನಡುವಳಿಕೆಯನ್ನು ಹಲವು ವರ್ಷಗಳ ಅಭ್ಯಾಸ ಮಾಡಿದ್ದಾರೆ. ಫ್ರಾನ್ಸಿನ ಮಘ್ರೆಬಿನ್ ವಲಸಿಗರ ದೈನಂದಿನ ಜೀವನದ ಸಂಕೀರ್ಣವಾದ ಬದುಕಿನ ಸಂದರ್ಭಗಳ ಸಾಮಾನ್ಯ ಭಾಷಾ ನಡುವಳಿಕೆಯನ್ನು ಕುರಿತ ಪ್ರಬಂಧವನ್ನು ಪ್ರಕಟಿಸಿದ್ದಾರೆ.

ಡೇನಿಯಲ್ ಮೂರ್ ಅವರು ಉತ್ತರ ಇಂಗ್ಲೆಂಡಿನ್ ಬ್ರಾಡ್‌ಫೋರ್ಡ್‌ನಲ್ಲಿರುವ ಪಂಜಾಬಿ-ಇಂಗ್ಲೀಷ್ ದ್ವಿಭಾಷಿಕರ ಕುಟುಂಬಗಳೊಳಗಿನ ಸಂವಹನ ಮಾದರಿಗಳ ಮೇಲೆ ವಿಶೇಷವಾದ ಬೆಳಕನ್ನು ಚೆಲ್ಲಿದ್ದಾರೆ.

ಪೆನಿಲೊಪೆ ಗಾರ್ಡನರ್-ಕ್ಲೋರಸ್ ಅವರು ಸ್ಟ್ರಾಸ್ ಬರ್ಗ್‌ನ ಫ್ರೆಂಚ್-ಅಲ್ಸೇಶಿಯನ್ ದ್ವಿಭಾಷಿಕರ ಸಮಗ್ರೋ-ಸಾಮಾಜಿಕ, ಮನಃಶಾಸ್ತ್ರೀಯ ಮತ್ತು ವ್ಯವಹಾರಿಕ ಪ್ರಕ್ರಿಯೆಗಳ ಬಗ್ಗೆ ಸಮಗ್ರದೃಷ್ಟಿಕೋನವನ್ನುಳ್ಳ ಸಂಶೋಧನೆಯನ್ನು ಮಾಡಿದ್ದಾರೆ. ಅಷ್ಟೇ ಅಲ್ಲದೆ ಮೆಟ್ರೋಪಾಲಿಟನ್ ಲಂಡನ್ನಿನಲ್ಲಿ ವಾಸವಾಗಿರುವ ಸೈಪ್ರಸ್ ಜನಸಮುದಾಯದವರ (ಗ್ರೀಕ್ ಭಾಷಿಕರು) ದ್ವಿಭಾಷಿಕ ಬಳಕೆಯನ್ನು ಕುರಿತ ಮಿಶ್ರ ತಲೆಮಾರಿನವರ ವಿಸ್ತೃತ ಅಧ್ಯಯನವನ್ನು ಮಂಡಿಸಿದ್ದಾರೆ.

ಮೆರಿಲಿನ್ ಮಾರ್ಟಿನ್ ಜೋನ್ಸ್ ಅವರು ದ್ವಿತೀಯ ಜಾಗತಿಕ ಮಹಾಯುದ್ಧದ ತರುವಾಯ ಇಂಗ್ಲೆಂಡಿಗೆ ವಲಸೆ ಬಂದ ಕಾರ್ಮಿಕರ ಸ್ವಭಾವ ಮತ್ತು ವ್ಯಾಪ್ತಿಯ ಕುರಿತು ವ್ಯವಸ್ಥಿತವಾಗಿ ವಿವರಿಸಿದ

ಮೊದಲ ಯೋಜನೆ ಇದಾಗಿದೆ. ೧೯೮೫ರಲ್ಲಿ ಈಕೆ ಸಹಲೇಖಕಿಯಾಗಿ ತನ್ನ ಸಹೋದ್ಯೋಗಿಗಳ ಜೊತೆ ಸೇರಿ The other Languages of England ಎಂಬ ಕೃತಿ ರಚನೆ ಮಾಡಿದ್ದಾರೆ. ಅಷ್ಟೇ ಅಲ್ಲದೆ Econamic and Social Research Council ಅನುದಾನಿತ ಎರಡು ಬಹುಭಾಷಿಕತೆಯ ಮೇಲಿನ ಅಧ್ಯಯನಗಳನ್ನು ಕೈಗೊಂಡಿದ್ದಾರೆ. ಮೊದಲನೆಯದು South West England ಪ್ರಾಥಮಿಕ ಶಾಲೆಗಳನ್ನು ಕುರಿತದ್ದು. ಎರಡನೆಯದು ಲಂಕಾಷೈರ್‌ನಲ್ಲಿ ಗುಜರಾತಿ ಇತರ ಸಮುದಾಯದವರ ಮೇಲಿನ Ethnographic Project(೧೯೯೩-೯೫)ನ್ನು ಕುರಿತು ಅಧ್ಯಯನ ಮಾಡಿದ್ದಾರೆ.

## ೩.೬. ದ್ವಿಭಾಷಿಕತೆ ಕುರಿತು ಭಾರತದಲ್ಲಿ ಹಾಗೂ ಕರ್ನಾಟಕ ಸಂದರ್ಭದಲ್ಲಿ ನಡೆದ ಅಧ್ಯಯನಗಳು

ಭಾರತದಲ್ಲಿ ದ್ವಿಭಾಷಿಕತೆಯ ಅಧ್ಯಯನಗಳು ನಡೆದುದು ತೀರಾ ವಿರಳವೆಂದೆ ಹೇಳಬೇಕು. ಏಕೆಂದರೆ ಸ್ವಾತಂತ್ರನಂತರ ಪ್ರವರ್ಧಮಾನಕ್ಕೆ ಬರುತ್ತಿರುವ ಭಾರತಕ್ಕೂ ಪಾಶ್ಚಾತ್ಯ ದೇಶಗಳಿಗೂ ಅಜಗಜಾಂತರ ವ್ಯತ್ಯಾಸಗಳಿವೆ. ಬಹುಮುಖೀ ಸಂಸ್ಕೃತಿಯ ಬಹುಭಾಷಾ ಪರಿಸರವಿರುವ ಭಾರತದಲ್ಲಿ ದ್ವಿಭಾಷಿಕತೆ ಕುರಿತು ನಡೆಸಿದ ಅಧ್ಯಯನಗಳು ಕೆಲವೇ ಕೆಲವು. ೧೯೭೫ರಲ್ಲಿ ಟಿ.ಎಸ್.ರಾವ್ ಅವರು ಮದ್ರಾಸಿನ ತಮಿಳು ಮಾಧ್ಯಮ ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿದ್ದ ತೆಲುಗು ಅಥವಾ ಕನ್ನಡ ಭಾಷಿಕ ಮಕ್ಕಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಬಹುಸಂಖ್ಯಾತ ಭಾಷಾ ಸಮುದಾಯದಲ್ಲಿರುವ ಅಲ್ಪಸಂಖ್ಯಾತ ಭಾಷಾಮಕ್ಕಳ ಮನೆಯ ಆವರಣದ ಭಾಷೆಗೂ ಶಾಲಾ ಆವರಣದ ಭಾಷೆಗೂ ಇರುವ ವ್ಯತ್ಯಾಸವನ್ನು ಕುರಿತು ಹೇಳುತ್ತಾರೆ. ಆ ಮಕ್ಕಳ ದ್ವಿಭಾಷಿಕತೆಯ ಮೇಲೆ ಮನಃಶಾಸ್ತ್ರೀಯ ಶಿಕ್ಷಣದ ಪರಿಣಾಮ ಕುರಿತು ಪ್ರಸ್ತಾಪಿಸುತ್ತಾರೆ. ೧೯೮೦ರಲ್ಲಿ ಸೌತವರ್ತ ಅವರು ಮಲಯಾಳಂ ಏಕಭಾಷಿಕ ಮಕ್ಕಳು ಮತ್ತು ತಮಿಳು ಮತ್ತು ಕೊಂಕಾಣಿ ಭಾಷಿಕ ೧೩೦೦ ಮಕ್ಕಳ ಮೇಲೆ ಕೈಗೊಂಡ ಅಧ್ಯಯನವು ಏಕಭಾಷಿಕ ಮಕ್ಕಳಿಗಿಂತ ದ್ವಿಭಾಷಾ ಮಕ್ಕಳ ಬೌದ್ಧಿಕ ಮಟ್ಟವು ಎಲ್ಲ ಸ್ತರಗಳಲ್ಲೂ ಪ್ರಬುದ್ಧತೆಯಿಂದಲೇ ಕೂಡಿರುತ್ತದೆ ಎಂಬ ಅಂಶವನ್ನು ಸಾಧಿಸಿ ತೋರಿಸಿದ್ದಾರೆ.

ಅಜಿತ್ ಕೆ.ಮೊಹಾಂತಿಯವರ ಬೈಲಿಂಗ್ವಲಿಸಂ ಇನ್ ಎ ಮಲ್ಟಿಲಿಂಗ್ವಲ್ ಸೊಸೈಟಿ ಕೃತಿಯಲ್ಲಿ ಭಾರತದ ಬಹುಭಾಷಿಕ ಸಂದರ್ಭದಲ್ಲಿ ಕಂಡುಬರುವ ಮನಸೋ ಸಾಮಾಜಿಕ ಹಾಗೂ ಶಿಕ್ಷಣ ರಂಗದಲ್ಲಿ ಹಾಸುಹೊಕ್ಕಾಗಿರುವ ದ್ವಿಭಾಷಿಕತೆಯ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ ೧೯೯೪. ಬಸವಯ್ಯನವರು ೧೯೮೦ ಏಕಭಾಷಿಕ ಹಾಗೂ ದ್ವಿಭಾಷಿಕ ಮಕ್ಕಳ ನಡುವೆ ಶೈಕ್ಷಣಿಕ ಸಾಧನೆಯನ್ನು ಸಾಧಿಸುವಲ್ಲಿ ಯಾವುದೇ ಗಮನಾರ್ಹವಾದ ವ್ಯತ್ಯಾಸಗಳಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಬುದ್ಧಿಮತ್ತೆಯನ್ನು ಮಾಪನ ಮಾಡುವ ಪರೀಕ್ಷೆಗಳಲ್ಲಿ ದ್ವಿಭಾಷಿಕ ವಿದ್ಯಾರ್ಥಿಗಳು ಏಕ ಭಾಷಾ

ವಿದ್ಯಾರ್ಥಿಗಳಿಗಿಂತ ಕಡಿಮೆ ಅಂಕಗಳನ್ನು ಪಡೆಯುತ್ತಾರೆ ಎಂಬ ಹೇಳಿಕೆಯ ಹಿನ್ನೆಲೆಯಲ್ಲಿ ಬಸವಯ್ಯನವರ ಹೇಳಿಕೆ ಮಹತ್ವ ಪಡೆದುಕೊಂಡಿದೆ.

ಜೆನ್ನಿಫರ್ ಮೇರಿ ಬಾಯರ್ ಅವರು ಬೆಂಗಳೂರಿನ ತಮಿಳು ಭಾಷಾ ಅಲ್ಪಸಂಖ್ಯಾತರ ಭಾಷಾ ಸಂಗೋಪನೆ ಕುರಿತು ಡೈನಾಮಿಕ್ಸ್ ಆಫ್ ಲಾಂಗ್ವೇಜ್ ಮೆಂಟೆನೆನ್ಸ್ ಅಮಾಂಗ್ ಲಿಂಗ್ವಿಸ್ಟಿಕ್ ಮೈನಾರಿಟೀಸ್ ಕೃತಿಯಲ್ಲಿ ವಿಶದೀಕರಿಸಿದ್ದಾರೆ ೧೯೮೬. ಎಂ.ಎಸ್.ತಿರುಮಲೈ ಹಾಗೂ ಶ್ಯಾಮಲ ಚೆಂಗಪ್ಪ ಅವರ ಸೈಮಲ್ಟೇನಿಯಸ್ ಅಕ್ವಸಿಷನ್ ಆಫ್ ಟು ಲಾಂಗ್ವೇಜಸ್ ಕೃತಿಯಲ್ಲಿ ಏಕಕಾಲಕ್ಕೆ ಎರಡು ಭಾಷೆಗಳಲ್ಲಿ ಕೊಡುವ ಕನ್ನಡ ಸಾಮರ್ಥ್ಯಗಳಿಸುವುದನ್ನು ಕುರಿತು ಹೇಳಲಾಗಿದೆ.

೧೯೬೪ರಲ್ಲಿ ಗುಂಪರ್ಜ್ ಅವರು ಹಿಂದಿ ಹಾಗೂ ಪಂಜಾಬಿ ಭಾಷೆಯಲ್ಲಿ ನುಡಿಮಿಶ್ರಣ ಹಾಗೂ ನುಡಿಜಿಗಿತದ ಪ್ರಕ್ರಿತೆಯಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ೧೯೭೧ ಮಹಾರಾಷ್ಟ್ರದ ಸಾಂಗ್ಲಿಯ ಜಿಲ್ಲೆಯ ಗ್ರಾಮವಾದ ಕುಪ್ವಾರ್ ಎಂಬಲ್ಲಿನ ಕನ್ನಡ ಮರಾಠಿ ಉರ್ದು ಭಾಷಿಕರ ಸಂದರ್ಭದಲ್ಲಿ ಕನ್ನಡ ಭಾಷೆಯಲ್ಲಿನ ವ್ಯವಾಹರ ಹಂತದಲ್ಲಿ ಆಗಿರುವ ಪ್ರಭಾವವನ್ನು ಗುಂಪರ್ಜ ಹಾಗೂ ವಿಲ್ಸನ್ ಅವರ ಅಧ್ಯಯನಗಳು ತೋರಿಸಿಕೊಟ್ಟಿವೆ. ಈ ಅಧ್ಯಯನಗಳು ಭಾರತದ ದ್ವಿಭಾಷಾ ಅಧ್ಯಯನ ಕ್ಷೇತ್ರದಲ್ಲಿ ಉಲ್ಲೇಖನಿಯವಾಗಿವೆ. ಬೀದರ್ ಜಿಲ್ಲೆಯ ಕನ್ನಡವನ್ನು ಕುರಿತು ತಮ್ಮ ಸಂಶೋಧನಾ ಲೇಖನದಲ್ಲಿ ಯು.ಪಿ.ಉಪಾಧ್ಯಾಯ ಅವರು ೧೯೭೧ ಬೀದರ್ ಜಿಲ್ಲೆಯ ಕನ್ನಡದ ಮೇಲೆ ಉರ್ದು ಭಾಷೆಯ ಪ್ರಭಾವವನ್ನು ಅದರ ವ್ಯಾಕರಣ ರಚನೆಯಲ್ಲಿ ಅವಲೋಕಿಸಿದ್ದಾರೆ. ಬೀದರ್ ಕನ್ನಡವನ್ನು ಅವರು ಪಿಜಿನೀಕೃತ ಕನ್ನಡ (ಪಿಜಿನೈಜ್ಡ್ ಕನ್ನಡ) ಎಂದೇ ಗುರುತಿಸುತ್ತಾರೆ. ಟಿ.ಎಸ್.ಸತ್ಯನಾಥ್ ೧೯೮೨ ಅವರು ದೆಹಲಿಯ ಕನ್ನಡಿಗರನ್ನು ಕುರಿತಾದ ತಮ್ಮ ಸಂಶೋಧನಾ ಲೇಖನದಲ್ಲಿ ಅಲ್ಲಿನ ಕನ್ನಡಿಗರು ತಾವು ಉದ್ಯೋಗ ಮಾಡುವ ಸಂಸ್ಥೆಯ ಆವರಣಗಳಲ್ಲಿ ಇಂಗ್ಲಿಷಿನ ಬಳಕೆಯನ್ನು, ಸಂಸ್ಥೇತರ ಆವರಣಗಳಲ್ಲಿ ಅಂದರೆ ಹೋರಗಿನ ಆವರಣಗಳಲ್ಲಿ ಹಿಂದಿಯನ್ನು, ಮನೆಯ ಆವರಣ ಹಾಗೂ ಒಳಸಮುದಾಯಗಳಲ್ಲಿ ಕನ್ನಡವನ್ನು ಬಳಕೆ ಮಾಡುತ್ತಿರುವುದನ್ನು ಗುರುತಿಸುತ್ತಾ, ಹೊಸ ತಲೆಮಾರಿನವಲ್ಲಿ ಮನೆಯ ಆವರಣದಲ್ಲಿಯೇ ಇಂಗ್ಲಿಷಿಗೆ ಪಲ್ಲಟವಾಗುತ್ತಿರುವ ಅಂಶಗಳನ್ನು ದೆಹಲಿ ಕನ್ನಡಿಗರಲ್ಲಿ ಶೋಧಿಸಿದ್ದಾರೆ. ತಮಿಳುನಾಡಿನಲ್ಲಿ ಬಹಳ ವರ್ಷಗಳ ಹಿಂದೆಯೇ ಬಂದು ನೆಲೆಸಿರುವ ಸೌರಾಷ್ಟ್ರೀಯರ ಬಗೆಗಿನ ತಮ್ಮ ಅಧ್ಯಯನದಲ್ಲಿ ಪಿ.ಪಿ.ಪಂಡಿತ್ ೧೯೭೨ ಅವರು ತಮಿಳಿಗೆ ಹೆಚ್ಚಿನ ಪಲ್ಲಟವಾಗದೇ ತಮ್ಮ ಭಾಷೆಯನ್ನು ಸಂಗೋಪನೆ ಮಾಡಿರುವುದರ ಕುರಿತು ಹೇಳುತ್ತಾರೆ. ಸೌರಾಷ್ಟ್ರೀಯನ್ನರ ಭಾಷೆಯಲ್ಲಿ ತಮಿಳಿನ ವ್ಯಾಕರಣ ಮಾದರಿಗಳಿರುವುದನ್ನು ಇವರ ಅಧ್ಯಯನ ಹೇಳುತ್ತದೆ.

ಕನ್ನಡದ ಸಂದರ್ಭದಲ್ಲಿ ದ್ವಿಭಾಷಿಕತೆಯನ್ನು ಕುರಿತಂತೆ ನಡೆದ ಅಧ್ಯಯನಗಳಲ್ಲಿ ಹೆಸರಿಸಬಲ್ಲ ಕೆಲವು ಅಧ್ಯಯನಗಳು ಹೀಗಿವೆ. ಕೆ.ಪಿ.ಭಟ್ಟರು ೧೯೮೫ರಲ್ಲಿ ಕೋಲಾರ ಜಿಲ್ಲೆಯ ಕನ್ನಡ ತೆಲುಗು

ದ್ವಿಭಾಷಿಕತೆಯನ್ನು ಕುರಿತು ಹೇಳುವಾಗ ತೆಲುಗು ಭಾಷೆಯ ಪ್ರಭಾವ ಕನ್ನಡದ ಮೇಲೆ ದಟ್ಟವಾಗಿರುವುದನ್ನು ವ್ಯಾಕರಣಾಂಶಗಳ ಮೂಲಕ ಗುರುತಿಸುತ್ತಾರೆ. ಸಾಮಾಜಿಕ ಭಿನ್ನಾಂಶಗಳ ಮೂಲಕ ಭಾಷಿಕರ ಭಾಷೆಗಳಲ್ಲಿ ವಿಲೀನದಿಂದ ಉಂಟಾಗುವ ವ್ಯತ್ಯಾಸವನ್ನು ಗುರುತಿಸುತ್ತಾರೆ. ದ್ವಿಭಾಷಿಕತೆಯನ್ನು ಕುರಿತಂತೆ ಕರ್ನಾಟಕ ಭಾರತಿ ವಿಶೇಷ ಸಂಚಿಕೆಯಲ್ಲಿ ಆಂಧ್ರದ ಕನ್ನಡ ಮಹಾರಾಷ್ಟ್ರದ ಕನ್ನಡ, ತಮಿಳುನಾಡಿನ ಕನ್ನಡ, ಕೇರಳದ ಕನ್ನಡ ಕುರಿತು ಕೆ.ಜಿ.ಶಾಸ್ತ್ರಿ, ಜೆ.ರಾಮಸ್ವಾಮಿ, ಬಿ.ರಾಮಚಂದ್ರರಾವ್ ಅವರುಗಳು ಬರೆದಿರುವ ಲೇಖನಗಳು ಕನ್ನಡ ತೆಲುಗು, ಕನ್ನಡ ಮರಾಠಿ, ಕನ್ನಡ ತಮಿಳು, ಕನ್ನಡ ಮಲಯಾಳಂ ದ್ವಿಭಾಷಾ ಸಂದರ್ಭಗಳನ್ನು ಕುರಿತು ಹೇಳುತ್ತವೆ. ಎಸ್.ಎಸ್.ಅಂಗಡಿಯವರು ತಮ್ಮ ಕನ್ನಡ ಮರಾಠಿ ದ್ವಿಭಾಷಿಕತೆಯನ್ನು ಲೇಖನದಲಿ ಕನ್ನಡ ಮರಾಠಿ ಕುರಿತು ಹೆಚ್ಚಿನ ಮಾಹಿತಿಯನ್ನು ನೀಡುತ್ತಾರೆ.

ಭಾರತದಲ್ಲಿ ಅದರಲ್ಲೂ ಕನ್ನಡದಲ್ಲಿ ದ್ವಿಭಾಷಿಕತೆ ಕುರಿತ ಅಧ್ಯಯನಗಳು ತೀರಾ ಕಡಿಮೆ. ಬದಲಾಗುತ್ತಿರುವ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಭಾಷಿಕರಲ್ಲಿ ಬದಲಾವಣೆಗಳು ಹುಟ್ಟುತ್ತಿದ್ದು, ಬೇರೆ ಬೇರೆ ಭಾಷೆಗಳ ಸಂಪರ್ಕದಿಂದಾಗಿ ದ್ವಿಭಾಷಿಕ ಸನ್ನಿವೇಶಗಳು ಸೃಷ್ಟಿಯಾಗುತ್ತಿದ್ದು, ದ್ವಿಭಾಷಾ ಸಂದರ್ಭಗಳ ಬಗೆಗೆ ಹೆಚ್ಚಿನ ಅಧ್ಯಯನ ಅತ್ಯಂತ ಅಗತ್ಯವಿದೆ.

## ಅಧ್ಯಾಯ ೪

# ಕೋಲಾರ ಜಿಲ್ಲೆಯ ದ್ವಿಭಾಷಿಕತೆ ಹಿನ್ನೆಲೆ

೪.೧. ಕೋಲಾರ ಜಿಲ್ಲೆಯ ಭೌಗೋಳಿಕ ವಿವರಣೆ

೪.೨. ಸಂಕ್ಷಿಪ್ತ ಕೋಲಾರ ಜಿಲ್ಲೆಯ ಇತಿಹಾಸ

೪.೩. ಕೋಲಾರ ಕನ್ನಡ-ತೆಲುಗು ಕವಿ-ಕಾವ್ಯ ಹಿನ್ನೆಲೆ

೪.೪. ಕೋಲಾರ ಜಿಲ್ಲೆಯ ದ್ವಿಭಾಷಿಕರು ಹಾಗೂ ದ್ವಿಭಾಷಾ ಪರಿಸರ

೪.೫. ಶಿಕ್ಷಣಾರ್ಥಿಗಳು, ವಲಸಿಗರು, ಪ್ರವಾಸಿಗರಿಂದ ಉಂಟಾದ ದ್ವಿಭಾಷಿಕತೆ

೪.೬. ಜನಗಣತಿಯನ್ನು ಆಧರಿಸಿದ ಕನ್ನಡ-ತೆಲುಗು ದ್ವಿಭಾಷಿಕರ ಅಂಕಿ-ಅಂಶಗಳ ನೋಟ

೪.೭. ಕನ್ನಡ-ತೆಲುಗು ಭಾಷೆಗಳನ್ನು ದ್ವಿತೀಯ ಭಾಷೆಯನ್ನಾಗಿ ಬಳಸುತ್ತಿರುವ ಅನ್ಯಭಾಷಿಕರು

೪.೮. ಮಾಧ್ಯಮಗಳಲ್ಲಿ ತೆಲುಗು-ಕನ್ನಡ ಭಾಷಾ ಬಳಕೆ

# ಕೋಲಾರ ಜಿಲ್ಲೆಯ ದ್ವಿಭಾಷಿಕತೆ ಹಿನ್ನೆಲೆ

## ೪.೧. ಕೋಲಾರ ಜಿಲ್ಲೆಯ ದ್ವಿಭಾಷಿಕತೆ ಹಿನ್ನೆಲೆ

ಕರ್ನಾಟಕದ ಮೂಡಣದಿಕ್ಕಿನಲ್ಲಿರುವ ಕೋಲಾರ ಜಿಲ್ಲೆಯು ಬಹಳ ಹಿಂದಿನಿಂದಲೂ ದ್ವಿಭಾಷಿಕ ಪ್ರದೇಶವಾಗಿದೆ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಜಿಲ್ಲೆಯ ಪೂರ್ವೋತ್ತರ ಭಾಗದಲ್ಲಿ ಆಂಧ್ರಪ್ರದೇಶವೂ ದಕ್ಷಿಣದಲ್ಲಿ ತಮಿಳುನಾಡು ರಾಜ್ಯಗಳು ಕರ್ನಾಟಕಕ್ಕೆ ಗಡಿಗಳಾಗಿವೆ. ಹೀಗಾಗಿ ಈ ಪ್ರದೇಶ ಕನ್ನಡ-ತೆಲುಗು ಹಾಗೂ ಕನ್ನಡ-ತಮಿಳು ದ್ವಿಭಾಷಾ ಪ್ರದೇಶವಾಗಿ ಪರಿಣಮಿಸಿದೆ "ಜಿಲ್ಲೆಯು ಭೌಗೋಳಿಕವಾಗಿ ೧೨°-೪೬' ಮತ್ತು ೧೩°-೫೮' ಉತ್ತರ ಅಕ್ಷಾಂಕ್ಷ ಹಾಗೂ ೭೭°-೨೧' ಮತ್ತು ೭೮°-೩೫' ಪೂರ್ವ ರೇಖಾಂಶಗಳ ನಡುವೆ ಇರುವ ಪ್ರದೇಶವಾಗಿದೆ. ಜಿಲ್ಲೆಯ ಪಶ್ಚಿಮದಲ್ಲಿ ಬೆಂಗಳೂರು ಹಾಗೂ ತುಮಕೂರು ಜಿಲ್ಲೆಗಳು, ಉತ್ತರ ಮತ್ತು ಪೂರ್ವದಲ್ಲಿ ಆಂಧ್ರಪ್ರದೇಶ (ಅನಂತಪುರ ಮತ್ತು ಚಿತ್ತೂರು ಜಿಲ್ಲೆಗಳು) ಮತ್ತು ದಕ್ಷಿಣದಲ್ಲಿ ತಮಿಳುನಾಡು (ಉತ್ತರ ಆರ್ಕಾಟ್ ಮತ್ತು ಧರ್ಮಪುರಿ ಜಿಲ್ಲೆಗಳು) ರಾಜ್ಯಗಳಿಂದ ಸುತ್ತುವರೆದಿವೆ. ಒಟ್ಟಾರೆ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೮೨೨೩ ಚ.ಕಿ.ಮೀಗಳು. ಕರ್ನಾಟಕದ ೨೭ ಜಿಲ್ಲೆಗಳ ಪೈಕಿ ವಿಸ್ತೀರ್ಣದಲ್ಲಿ ಕೋಲಾರ ಜಿಲ್ಲೆಯು ಒಂಬತ್ತನೇ ಸ್ಥಾನದಲ್ಲಿದೆ. ಇದು ರಾಜ್ಯದ ವಿಸ್ತೀರ್ಣದ ಶೇ.೪.೨೯%ರಷ್ಟಿದೆ(ಹೆಚ್. ಚಿತ್ತರಂಜನ್, ೨೦೦೫-೧೨)".

ಈ ಜಿಲ್ಲೆಯಲ್ಲಿ ವರ್ಷವಿಡೀ ತುಂಬಿ ಹರಿಯುವ ಜೀವನದಿಗಳಿಲ್ಲ. ಮಳೆಗಾಲದಲ್ಲಿ ಮಾತ್ರ ಪಾಲಾರ್ ಉತ್ತರ ಪಿನಾಕಿನಿ, ದಕ್ಷಿಣ ಪಿನಾಕಿನಿ ನದಿಗಳು ತುಂಬಿ ಹರಿಯುತ್ತವೆ. ಜಿಲ್ಲೆಯ ಉತ್ತರ ಭಾಗ ಅನೇಕ ಬೆಟ್ಟ ಗುಡ್ಡಗಳಿಂದ ಆವೃತ್ತವಾಗಿದ್ದು ಈ ಬೆಟ್ಟಗಳು ದೊಡ್ಡ ಗ್ರಾನೈಟ್ ಕಲ್ಲುಗಳಿಂದ ಕೂಡಿವೆ. ಚಿನ್ನ, ಗ್ರಾಫೈಟ್ ಕಾವಿಮಣ್ಣು, ಕೆ.ಜಿ.ಎಫ್.ನಲ್ಲಿರುವ ಭಾರತ್ ಗೋಲ್ಡ್‌ಮೈನ್ಸ್ ಲಿಮಿಟೆಡ್‌ನ ಚಾಂಪಿಯನ್ಸ್ ರೀಫ್ಸ್ ಗಣಿಗಳು ಜಗತ್ತಿನಲ್ಲೇ ಅತ್ಯಂತ ಆಳವಾದ ಚಿನ್ನದ ಗಣಿಗಳೆಂದು ಪ್ರಖ್ಯಾತವಾಗಿವೆ(ಶಂಕರ ಮು.ನ., ೧೯೭೮:೨೮, ೨೯). ಹಾಲು ಉತ್ಪಾದನೆಯಲ್ಲಿ ರಾಜ್ಯದಲ್ಲೇ ಅಗ್ರಗಣ್ಯ ಸ್ಥಾನದಲ್ಲಿದ್ದು, ರೇಷ್ಮೆ ಉತ್ಪಾದನೆ ಕೂಡ ಅದೇ ಹಾದಿಯಲ್ಲಿದೆ. ಅಲ್ಲದೆ ಬುಲ್‌ಡೋಜರ್, ರೈಲ್ವೇ ಕೋಚ್, ರಕ್ಷಣಾ ಟ್ಯಾಂಕರ್‌ಗಳ ಉತ್ಪಾದನೆಯಲ್ಲಿ ಭಾರತ್ ಅರ್ಥ್ ಮೂವರ್ಸ್

ಲಿಮಿಟೆಡ್(beml) ಮುಂಚೂಣಿಯಲ್ಲಿದೆ. ಇವೆಲ್ಲವೂ ಕೂಡ ದ್ವಿಭಾಷಿಕತೆಯೊಂದಿಗೆ ಬಹುಭಾಷಾ ಆವರಣಗಳು ರೂಪುಗೊಳ್ಳುವಿಕೆಗೆ ಕಾರಣೀಭೂತವಾಗಿದೆ. ಆಂಧ್ರದ ಮದನಪಲ್ಲಿ, ಕಡಪ ಜಿಲ್ಲೆಯ ಚಿಂತಾಮಣಿ-ಶ್ರೀನಿವಾಸಪುರಗಳಿಗೆ ಹತ್ತಿರವಾಗಿರುವುದರಿಂದ ಇಲ್ಲಿನ ಆಲೂಗಡ್ಡೆ, ಮಾವು, ಅವರೆಕಾಯಿ, ಟೋಮೋಟೋಗಳು ಹಾಗೂ ಇನ್ನಿತರ ತರಕಾರಿಗಳು ಮತ್ತು ಅವರೆ, ಭತ್ತ ಇತ್ಯಾದಿ ಕಾರಣಕ್ಕಾಗಿ ವ್ಯಾಪಾರ ಸಂಪರ್ಕ ಹೆಚ್ಚಿದ್ದು, ಸಹಜವಾಗೇ ಕನ್ನಡ-ತೆಲುಗು ಭಾಷಾ ಸಂಪರ್ಕ ಏರ್ಪಟ್ಟಿದೆ. ಅದೇ ರೀತಿ ಆಂಧ್ರದ ಪುಂಗನೂರು, ಪಲಮನೇರು, ಚಿತ್ತೂರುಗಳು ಕೂಡ ಹತ್ತಿರದ ಜಿಲ್ಲೆಯ ಮುಳಬಾಗಿಲಿಗೆ ನಿರಂತರ ಸಂಪರ್ಕ ಏರ್ಪಟ್ಟಿದೆ. ಮುಳಬಾಗಿಲಿಗೆ ಹತ್ತಿರವಿರುವ ಆಂಧ್ರದ ಪುಂಗನೂರು ಕನ್ನಡ ಪ್ರಸಿದ್ಧ ರತ್ನತ್ರಯರಲ್ಲೊಬ್ಬನಾದ ಪೊನ್ನನ ಹುಟ್ಟೂರು ಎಂಬುದೂ ಗಮನಾರ್ಹ. ಕೋಲಾರ ಜಿಲ್ಲೆಯಲ್ಲಿ ಕನ್ನಡ-ತೆಲುಗು ಭಾಷೆಗಳು ಸಹಜ ದ್ವಿಭಾಷಿಕತೆ ಏರ್ಪಡಲು ಮೇಲೆ ಹೇಳಿದ ಎಲ್ಲ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ಕಾರಣವಾಗಿದೆ.

## ೪.೨. ಸಂಕ್ಷಿಪ್ತ ಕೋಲಾರ ಜಿಲ್ಲೆಯ ಇತಿಹಾಸ

ಇದುವರೆಗೂ ದೊರೆತಿರುವ ಶಾಸನಗಳ ಆಧಾರದ ಮೇಲೆ ಕರ್ನಾಟಕ ರಾಜ್ಯದ ಇತಿಹಾಸ ಮೌರ್ಯರಿಂದ ಆರಂಭವಾದರೂ ಕೋಲಾರ ಜಿಲ್ಲೆಯ ಇತಿಹಾಸ ಆರಂಭವಾಗುವುದು ಶಾತನಾಹನರು ಹಾಗೂ ಬಾದಾಮಿ ಚಾಲುಕ್ಯರು ಸಾಮಂತರಾಗಿದ್ದ ಮಹಾವಲಿಗಳು ಅಥವಾ ಬೃಹದ್‌ಬಾಣರ ಆಡಳಿತದೊಂದಿಗೆ. ಕ್ರಿ.ಶ.೨ನೇ ಶತಮಾನದ ಕೊಂಗುಣಿವರ್ಮ ಗಂಗಾಧಿಪತಿ ಎಂಬುವನಿಗೆ 'ಬಾಣವನ ದಾವಾಗ್ನಿ' ಎಂಬ ಬಿರುದು ಇದೆ. ಮಯೂರ ಶರ್ಮನ ತಲಗುಂದ ಶಾಸನದಲ್ಲಿ (ಕ್ರಿ.ಶ.೨೫೦) ಬಾಣರ ಪ್ರಸ್ತಾಪವಿದೆ. ಗಂಗರ ಆರಂಭದ ರಾಜಧಾನಿ ಕುವಲಾಲಪುರ(ಇಂದಿನ ಕೋಲಾರ)ವಾಗಿದ್ದು, ಶಾಸನಗಳಲ್ಲಿ ಅವರು ತಮ್ಮನ್ನು ಕುವಲಾಲಪುರವರಾಧೀಶ್ವರ, ನಂದಗಿರಿ(ನಂದಿಬೆಟ್ಟ)ನಾಥರೆಂದೇ ಕರೆದುಕೊಂಡಿದ್ದಾರೆಂದು ಬಹುತೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಡಾ.ಶೇಕ್‌ಅಲಿಯವರಂತಹ ವಿದ್ವಾಂಸರು ಸ್ಥಳೀಯರಾಗಿದ್ದ ಗಂಗರು ತಲಕಾಡಿನಿಂದ ತಮ್ಮ ರಾಜ್ಯಭಾರವನ್ನು ಆರಂಭಿಸಿದರೆಂಬ ವಾದವನ್ನು ಪ್ರಬಲವಾಗಿ ಪ್ರತಿಪಾದಿಸುತ್ತಾರೆ. ಆದರೆ ಗಂಗರ ಶಾಖೆಗಳು ಕೋಲಾರ ಜಿಲ್ಲೆಯ ಕೈವಾರ ಹಾಗೂ ಪಕ್ಕದ ಈಗಿನ ನೆರೆಯ ಹಿಂದೂಪುರ ತಾಲ್ಲೂಕು (ಆಂಧ್ರ) ಪರುವಿಗಳಲ್ಲಿ ಅಸ್ತಿತ್ವದಲ್ಲಿದ್ದ ಅಂಶವನ್ನು ಒಪ್ಪುತ್ತಾರೆ. ಕೋಲಾರವನ್ನು ಆಡಳಿತ ಕೇಂದ್ರವನ್ನಾಗಿ ಹೊಂದಿದ್ದ ಕುವಲಾಲ-೩೦೦ ಆಡಳಿತ ಘಟಕವನ್ನು ಹೊಂದಿದ್ದ ಈ ಪ್ರದೇಶ ಗಂಗವಾಡಿ-೬೦೦೦ (ಗಂಗಾರುಸಾಸಿರ) ನಾಡೆಂದೇ ಪ್ರಸಿದ್ಧವಾಗಿತ್ತು. ಅಲ್ಲದೆ ಗಂಗವಾಡಿ-೯೬೦೦೦ದ ಅವಿಭಾಜ್ಯ ಅಂಗವಾಗಿತ್ತು ನಂತರ ಗಂಗ-ರಾಷ್ಟ್ರಕೂಟ ಹಾಗೂ ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ನೊಳಂಬರ ಆಳ್ವಿಕೆಗೆ ಒಳಪಟ್ಟ ನೊಳಂಬವಾಡಿ ೩೨೦೦೦ ನಾಡಿನ ಭಾಗವಾಗಿ ಕಾಣಿಸಿಕೊಳ್ಳುವ ಕೋಲಾರ ಜಿಲ್ಲೆ, ಚೋಳರ ಆಗಮನದೊಂದಿಗೆ ಸುಮಾರು ಒಂದು

ಶತಮಾನಕ್ಕೂ ಹೆಚ್ಚು ಕಾಲ ಅವರ ಆಡಳಿತಕ್ಕೆ ಒಳಪಡುವ ಮೂಲಕ ತಮಿಳು ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿತ್ತು. ಇವರ ಆಳ್ವಿಕೆಯ ಅವಧಿಯಲ್ಲಿ ಕೋಲಾರ ಜಿಲ್ಲೆಯ ತೊಂಡೈಮಂಡಲ, ನಿಗರಲಿ ಚೋಳಮಂಡಲ, ವಿಕ್ರಮಚೋಳಮಂಡಲ, ಮಾರಾಯಪಡಿ ಹಾಗೂ ವಿಜಯರಾಜಮಂಡಲಗಳ ಭಾಗವಾಗಿತ್ತು. ಈಗಿನ ಜಿಲ್ಲಾ ಕೇಂದ್ರದಲ್ಲಿರುವ ಕೋಲಾರಮ್ಮನ ದೇವಾಲಯವೂ ಸೇರಿದಂತೆ ಅನೇಕ ದೇವಾಲಯಗಳು ಚೋಳ ಆಡಳಿತಾವಧಿಯಲ್ಲಿ ಜಿಲ್ಲೆಯಲ್ಲಿ ಅಭಿವೃದ್ಧಿಗೊಂಡವು. ನಂತರ ಪ್ರಾಬಲ್ಯಕ್ಕೆ ಬಂದ ಹೊಯ್ಸಳರ ಆಡಳಿತಕ್ಕೆ ಕೋಲಾರವು ಒಂದು ಶತಮಾನಕ್ಕೂ ಹೆಚ್ಚುಕಾಲ ಒಳಪಟ್ಟಿತ್ತು. ಮುಮ್ಮಡಿ ನರಸಿಂಹನ ಅಧಿಕಾರಾವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯ ಇಬ್ಭಾಗವಾಗಿ ಸೋದರ ರಾಮನಾಥನ ಆಳ್ವಿಕೆಗೆ ಒಳಪಟ್ಟಿತ್ತು.

ಪರಂಪರಾಗತವಾಗಿ ದ್ವಿಭಾಷಾ ಪ್ರದೇಶವೆಂದೇ ಖ್ಯಾತಿ ಪಡೆದಿರುವ ಕೋಲಾರ ಜಿಲ್ಲೆಯ ಪ್ರದೇಶವು ಹೊಯ್ಸಳರ ಪತನಾನಂತರ ವಿಜಯನಗರದ ಸಂಗಮ ಮನೆತನದ (೧೩೩೦) ಆಡಳಿತಕ್ಕೆ ಒಳಪಟ್ಟಿತ್ತು ಈ ಮನೆತನದ ಪ್ರಾರಂಭದ ಅರಸರಿಗೆ ಸೇರಿದ ಆರಂಭಿಕ ಶಾಸನಗಳಲ್ಲಿ ಕೆಲವು ಕೋಲಾರ ಜಿಲ್ಲೆಯಲ್ಲಿ ಲಭಿಸಿದ್ದು, ಈ ಭಾಗದ ಮುಳಬಾಗಿಲು, ಟೇಕಲ್, ಸಾದಲಿ, ಕೋಲಾರ ಮುಂತಾದ ಪ್ರಾಂತ್ಯಗಳಿಗೆ ರಾಜಕುಟುಂಬದವರೇ ಪ್ರಾಂತಾಧಿಕಾರಿಗಳಾಗಿ ಆಡಳಿತ ನಡೆಸುತ್ತಿದ್ದ ಅಂಶ ಅವುಗಳಿಂದ ವೇದ್ಯವಾಗುತ್ತದೆ. ಈ ವಂಶಕ್ಕೆ ಸಂಬಂಧಪಟ್ಟ ಕೆಲವು ಶಾಸನಗಳು ತಮಿಳಿನಲ್ಲಿವೆ. ಇತರ ಬಹುಪಾಲು ಶಾಸನಗಳು ಕನ್ನಡ ಹಾಗೂ ತೆಲುಗು ಭಾಷೆಗಳಲ್ಲಿವೆ.

ಮುಂದೆ ಆದಿಲ್‌ಶಾಹಿಗಳು, ಮರಾಠರು ನಂತರ ಹೈದರಾಲಿ-ಟಿಪ್ಪುಸುಲ್ತಾನರ ಹಿಡಿತಕ್ಕೂ ಒಳಪಟ್ಟಿತು. ನಂತರ ಮೈಸೂರು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತಲ್ಲದೆ ಟಿಪ್ಪುವಿನ ಪತನದ ನಂತರ (೧೭೯೯) ಮದ್ರಾಸ್ ಪ್ರೆಸಿಡೆನ್ಸಿಯ ಮೈಸೂರು ಹಾಗೂ ಮಲಬಾರ್ ಪ್ರಾಂತಗಳಲ್ಲಿ ಪ್ರವಾಸ ಕೈಗೊಂಡಿದ್ದ ಫ್ರಾನ್ಸಿಸ್‌ಬುಕನಾನ್ ಸಮೀಕ್ಷೆ ನಡೆಸಿ ಸಿದ್ಧಪಡಿಸಿರುವ ಪ್ರವಾಸಿಕಥನದಲ್ಲೂ ಕೋಲಾರ ಪರಿಸರದ ಬಗ್ಗೆ ಮಹತ್ವದ ಮಾಹಿತಿಯನ್ನು ಒದಗಿಸಿದ್ದಾನೆ.

## ೪.೩. ಕೋಲಾರ ಕನ್ನಡ-ತೆಲುಗು ಕವಿ ಕಾವ್ಯ ಹಿನ್ನೆಲೆ

ಕೋಲಾರ ದ್ವಿಭಾಷಾ ಪರಿಸರದಲ್ಲಿ ತೆಲುಗು ಭಾಷಿಕ ಕನ್ನಡಿಗರು ತಮ್ಮನ್ನೆಂದೂ ತೆಲುಗರೆಂದು ಗುರುತಿಸಿಕೊಂಡವರಲ್ಲ. ಭಿನ್ನಾಭಿಪ್ರಾಯ ತಳೆದು ಜಗಳವಾಡಿದವರಲ್ಲ. ಅರಿವಿನ ಮೂಲಕ ಗಳಿಸಿದ ಸಹನೆ, ವಿಶ್ವಾಸದಲ್ಲಿ ಬದುಕುತ್ತಿರುವ ಇವರು ಅವಿಭಕ್ತ ಕುಟುಂಬದ ಜವಾಬ್ದಾರಿಯುವ ಸದಸ್ಯರು. ಹಾಗಾಗಿ ತೆಲುಗು-ಸಂಸ್ಕೃತಿ ಕನ್ನಡದವರದು. ಕನ್ನಡ ಸಂಸ್ಕೃತಿ ತೆಲುಗರದು ಎಂಬ ಭಾವನೆಗೆ ಇಂಬುಕೊಟ್ಟ ಕವಿ ಸಾರ್ವಭೌಮ ಶ್ರೀನಾಥ, ಅವನ ಈ ಪದ್ಯ ಅದಕ್ಕೆ ಸಾಕ್ಷಿ.

ಪ್ರೌಢಿಮೆಯ (ತನ್ನ ಕಾವ್ಯದ) ಕಂಡು ಸಂಸ್ಕೃತ ಭಾಷೆಯೆಂಬರು
ಪಲುಕು ನುಡಿಕಾರರಲ್ಲಿ ಆಂಧ್ರಭಾಷೆಯೆಂದು
ಯಾರೇನು ಅಂದರು ನನಗೇನು ಕೊರತೆ
ನಿಜವೆನ್ ಕವಿತ್ವವು ಕರ್ಣಾಟ ಭಾಷೆ

(ಅನು: ಸ.ರಘುನಾಥ, ೭೨)

ಕೋಲಾರ ಜಿಲ್ಲೆಯ ಕವಿಗಳು ಉಭಯ ಭಾಷಾ ಕವಿಗಳು. ಅವರೇನು ತೆಲುಗುನಾಡಿನಿಂದ ವಲಸೆ ಬಂದವರಲ್ಲ. ಇಲ್ಲೇ ಶತಮಾನಗಳಿಂದ ನೆಲೆಸಿದವರು. ಮಾತೃ ಭಾಷೆ ತೆಲುಗಾಗಿದ್ದವರು. ಅಥವಾ ಈ ಪ್ರದೇಶದಲ್ಲಿ ಅಂದು ವ್ಯವಹಾರಿಕ ಭಾಷೆಯಾಗಿದ್ದ ತೆಲುಗು ಭಾಷೆಯ ಪ್ರಭಾವಕ್ಕೆ ಒಳಗಾಗಿದ್ದವರು. ಎರಡು ಭಾಷೆಗೂ ಒಂದೇ ತಾಯಿ ಸ್ಥಾನಮಾನ ಕೊಟ್ಟು ಗೌರವಿಸಿದ್ದಾರೆ. ಆದ್ದರಿಂದ ಇವರು ರಚಿಸಿದ ತೆಲುಗು-ಕನ್ನಡ ಕಾವ್ಯಗಳು ತೆಲುಗು-ಕನ್ನಡಿಗರಿಬ್ಬರ ಗೌರವಕ್ಕೆ ಅರ್ಹವಾಗಿವೆ. ಶ್ರೀನಾಥ ತನ್ನ ಕಾವ್ಯದ ಭಾಷೆ ಕನ್ನಡವೆನ್ನುತ್ತಾನೆ. ಆನಂದ ಕವಿ ತನ್ನ 'ವೇದಾಂತ ಸಾರಮು' ಕೃತಿಯಲ್ಲಿ ಚಿಕ್ಕಬಳ್ಳಾಪುರವನ್ನು ಅಜ್ಜಾಡ ಆದಿಭಟ್ಟ ನಾರಾಯಣದಾಸ ಮೈಸೂರು, ಬೆಂಗಳೂರು ನಗರಗಳನ್ನು ವರ್ಣಿಸಿ ಪದ್ಯ ರಚನೆ ಮಾಡಿದ್ದಾರೆ.

ಕೋಲಾರ ಮಂಡಲಕ್ಕೆ ಸಂಬಂಧಿಸಿದ ೧೫ನೇ ಶತಮಾನದ ನಂತರದ ಇತಿಹಾಸವನ್ನು ಗಮಿಸಿದಾಗ ಸುಗಟೂರಿನ ಮುಮ್ಮಡಿ ತಿಮ್ಮೇಗೌಡ ಅಥವಾ ಮುಮ್ಮಡಿ ತಿಮ್ಮಭೂಪಾಲ ಎಂಬುವನು ಸಂಸ್ಕೃತಾಂಧ್ರ ಕನ್ನಡ ಭಾಷೆಗಳಲ್ಲಿ ಉದ್ದಾಮ ಪಂಡಿತನಾಗಿದ್ದನೆಂದು ತಿಳಿದುಬರುತ್ತದೆ. ಇವನು ತೆಲುಗಿನಲ್ಲಿ ಕುಮಾರಾರ್ಜುನೀಯಂ, ಸೌಂದರೇಶ ಚರಿತಂ, ರಾಜೇಂದ್ರಚೋಳ ಚರಿತಂ ಮುಂತಾದ ಕೃತಿಗಳನ್ನು ಬರೆದನೆಂದು ಹೇಳಲಾಗಿದ್ದರೂ ಅವುಗಳಲ್ಲಿ ಯಾವೊಂದು ಲಭ್ಯವಾಗಿಲ್ಲ. ಇದೇ ಕವಿಯ ಸಂಸ್ಕೃತದ 'ಕೌಮುದಿ ವ್ಯಾಖ್ಯಾನಂ' ಕನ್ನಡದ ಕೃತಿ 'ಶಂಕರ ಸಂಹಿತೆ' ಎಂಬುದಾಗಿ ತಿಳಿದುಬಂದಿದೆ. ಅಲ್ಲದೆ ಮೌಖಿಕವಾಗಿ ಕನ್ನಡದಲ್ಲಿ ಯಕ್ಷಗಾನ ಒಂದನ್ನು ಹೇಳಿದ್ದಾಗಿ ತಿಳಿದುಬರುತ್ತದೆ. ತೆಲುಗಿನ ಕವಿ-ಚರಿತೆಕಾರ ಶ್ರೀ ಆರುದ್ರ ಅವರು ಈತನ ಕಾಲವನ್ನು ೧೬೧೪-೧೬೩೦ ಎಂದು ಗುರುತಿಸುತ್ತಾರೆ.

ಶ್ರೀನಿವಾಸಪುರ ತಾಲ್ಲೂಕಿನ ತಾಡಿಗೋಳ್ಳು ಪಾಳೆಪಟ್ಟನ್ನು ಆಳಿದ ಪಾಲಕವೇರಿ ಕದಿರಿಪತಿ ನಾಯಕ ಎಂಬುವನು 'ಶುಕಸಪ್ತತಿ' ಎಂಬ ಹಾಸ್ಯಪೂರಿತ ಶೃಂಗಾರ ಕಥಾ ಸಾಹಿತ್ಯವನ್ನು ರಚಿಸಿದ್ದಾನೆ. (ಸಮಗ್ರಾಂಧ್ರ ಸಾಹಿತ್ಯಮು ೧೧ನೇ ಸಂಪುಟ) ಇದು 'ತೂತಿನಮ' ಎಂಬ ಹೆಸರಿಂದ ಪರ್ಷಿಯನ್ (ತೆಲುಗು ವಿಶ್ವಕೋಶ ಸಂಪುಟ ೪ ಪುಟ.೭೦೯) ಹಾಗೂ ಉರ್ದು ಭಾಷೆಗಳಲ್ಲಿ ತರ್ಜುಮೆಗೊಂಡಿದೆ.

ಕೋಲಾರದ ಮಂಡಲ ಕವಿಗಳಲ್ಲಿ ಅಥವಾ ರಾಜಾಶ್ರಯ ಪಡೆದ ಕವಿಗಳಲ್ಲಿ ಕೋಡೂರು ವೆಂಕಟಾಚಲ ಕವಿ, ಬದ್ದೆವೀಟಿ ದತ್ತಯ್ಯ, ಇಡಗೂರು ರುದ್ರಕವಿ, ಕುಂದುಗುರ್ಕಿ ಚಂದ್ರ ಕವಿ ಪ್ರಮುಖರು.

ಕೋಡೂರು ವೆಂಕಟಾಚಲ ಕವಿ ಮುಳಬಾಗಿಲಿನ ಕೋಡೂರಿನವನು. ಇವನು ಖಂಡ ಕೃತಿ 'ಶಿವರಹಸ್ಯ'. ಇವನ ಕಾಲ ಸುಮಾರು ೧೭ನೇ ಶತಮಾನ (ಆಂಧ್ರ ಕವುಲ ಚರಿತ್ರ, ೩ನೇ ಭಾಗ ಲೇ.ವೀರೇಶಲಿಂಗಂ ಪಂತಲು) ಕೋಲಾರ ತಾಲ್ಲೂಕಿನ ಸುಗಟೂರಿನ ರಾಜ ಚಿಕ್ಕರಾಯ ಮಹೇಂದ್ರನ ಆಸ್ಥಾನದಲ್ಲಿದ್ದ ಮತ್ತೊಬ್ಬ ಕವಿ ಬದ್ದೆವೀಟಿ ದತ್ತಯ್ಯ ತೆಲುಗಿನಲ್ಲಿ 'ಗಣಿತ ದೀಪಿಕ' ಎಂಬ ಶಾಸ್ತ್ರ ಗ್ರಂಥ ರಚಿಸಿದ್ದಾನೆ. ಗೌರಿಬಿದನೂರು ತಾಲ್ಲೂಕು ಇಡುಗೂರಿನವನಾದ ರುದ್ರಕವಿಯ ತಂದೆ ತುಮಕೂರ ಜಿಲ್ಲೆಯ ಬೇವಿನಹಳ್ಳಿಯವನು. ತಾಯಿ ಇಡಗೂರಿನವಳು. ಈತ ತೆಲುಗಿನ ಜೊತೆಗೆ ಕನ್ನಡದಲ್ಲಿ 'ಶಿವನಾಟಕ' ಎಂಬ ಯಕ್ಷನಾಟಕವನ್ನು ಸುಮಾರು ೧೮೪೧-೪೨ರ ಸುಮಾರಿಗೆ ಬರೆದನೆಂದು ಊಹಿಸಲಾಗಿದೆ. (ಇಡುಗೂರು ರುದ್ರಕವಿ ಮತ್ತು ಶ್ರೀ ಭೀಮೇಶ್ವರ ಕ್ಷೇತ್ರಗಳು: ಎಂ.ಜಿ.ನಂಜುಂಡಾರಾಧ್ಯ ೧೯೬೪) ೧೮೫೦ರ ಸುಮಾರಿನಲ್ಲಿ ಇಡಗೂರು ಭೀಮೇಶ್ವರ ಕೃಪಾಪೋಷಿತ ನಾಟಕ ಸಂಘವನ್ನು ಇವನು ಸ್ಥಾಪಿಸಿದ. ಇದೇ ಕವಿಯ 'ಆಂಧ್ರ ಯಕ್ಷಗಾನ ಮಾರ್ಕಂಡೇಯ ಚರಿತಂ' (೧೮೧೫) ಎಂಬ ಯಕ್ಷಗಾನ ನಾಟಕವನ್ನು ಪರುಷ ಬೆಳ್ಳಾವೆಯ ಸಾಹುಕಾರ ಮುರಡಪ್ಪಶೆಟ್ಟರ ಕಾರಣದಿಂದಾಗಿ ಕನ್ನಡದಲ್ಲೂ ಮಾರ್ಕಂಡೇಯ ಚರಿತ್ರೆಯು ೧೭೫೨-೫೩ರಲ್ಲಿ ಮೂಡಿಬಂದು ಅನೇಕ ಪ್ರದರ್ಶನಗಳನ್ನು ಕಂಡಿತು. ಶಿವನಾಟಕದ ಕೀರ್ತಿಯಿಂದಾಗಿ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಮೆಚ್ಚುಗೆ ಸೂಚಿಸಿ ರುದ್ರಕವಿಗೆ ರಾಜಾಶ್ರಯ ನೀಡಿದ್ದಲ್ಲದೆ 'ಕರ್ಣಾಟಕಾಂಧ್ರೋಭಯ ಭಾಷಾ ಕವಿತಾ ವಿಶಾರದ' ಎಂಬ ಬಿರುದನ್ನು ನೀಡಿದರು. ಅಷ್ಟೇ ಅಲ್ಲದೆ ರುದ್ರಕವಿ ಮುರುಡಪ್ಪ ಶತಕ, ಹೊನ್ನೇಗೌಡ ವಂಶಾವಳಿ ದ್ವಿಪದಿ, ಮುಮ್ಮಡಿ ಕೃಷ್ಣರಾಜ ಒಡೆಯರು ಬಿರುದಾವಳಿ, ಪಾಲ್ಕುರಿಕೆ ಸೋಮನಾಥನ 'ಅಕ್ಷರಾಂಕನ ಗದ್ಯ' ಟೀಕೆ ಪದ್ಯಗಳ್ನು ರಚಿಸಿದ್ದಾಗಿ ತಿಳಿದು ಬರುತ್ತದೆ ಕನ್ನಡದಲ್ಲಿ ಪ್ರಖ್ಯಾತವಾದ 'ಕೋಳೂರಿನ ಕೊಡಗೂಸು' ಕಥೆಯನ್ನು ತೆಲುಗುವಿನಲ್ಲಿ ಪದ್ಯರೂಪದಲ್ಲಿ ರಚಿಸಿದ ಮತ್ತೊಬ್ಬ ಕವಿ ಕೋಲಾರ ತಾಲೂಕು ಸುಗಟೂರಿನ ಪಿನ್ನಬೈಲಾಚಾರ್ಯ. ಮೇಲಿನ ಎಲ್ಲ ಅಂಶಗಳು ಕೋಲಾರ ಜಿಲ್ಲೆಯ ಕನ್ನಡ-ತೆಲುಗು ದ್ವಿಭಾಷಿಕ ನೆಲೆಯಾಗಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಹೀಗಾಗಿ ಕೋಲಾರ ಜಿಲ್ಲೆಯು ಅಂದಿನಿಂದ ಇಂದಿನವರೆಗೆ ಕನ್ನಡ-ತೆಲುಗುಗಳ ಅವಿನಾಭಾವ ಸಂಬಂಧ ಹೊಂದಿತ್ತೆಂಬುದು ನಿರ್ವಿವಾದ ಸಂಗತಿಯಾಗಿದೆ.

## ೪.೪. ಕೋಲಾರ ಜಿಲ್ಲೆಯ ದ್ವಿಭಾಷಿಕರು ಹಾಗೂ ದ್ವಿಭಾಷಾ ಪರಿಸರ

ಜಿಲ್ಲಾ ಕೇಂದ್ರವೂ ಸೇರಿದಂತೆ ಕೋಲಾರ ಜಿಲ್ಲೆ ೧೧ ತಾಲ್ಲೂಕುಗಳನ್ನು ಒಳಗೊಂಡಿದೆ. ಕೋಲಾರ, ಶಿಡ್ಲಘಟ್ಟ, ಚಿಂತಾಮಣಿ, ಚಿಕ್ಕಬಳ್ಳಾಪುರ, ಗುಡಿಬಂಡೆ, ಗೌರಿಬಿದನೂರು, ಶ್ರೀನಿವಾಸಪೂರ, ಮುಳಬಾಗಿಲು, ಬಂಗಾರಪೇಟೆ, ಮಾಲೂರು ಹಾಗೂ ಬಾಗೇಪಲ್ಲಿ, ಕೋಲಾರ, ಶಿಡ್ಲಘಟ್ಟ, ಚಿಕ್ಕಬಳ್ಳಾಪುರಗಳನ್ನು ಬಿಟ್ಟರೆ ಮಿಕ್ಕೆಲ್ಲಾ ತಾಲ್ಲೂಕುಗಳು ಆಂಧ್ರಪ್ರದೇಶ ಹಾಗೂ ತಮಿಳುನಾಡಿಗೆ ಹೊಂದಿಕೊಂಡಿವೆ. ಬಂಗಾರಪೇಟೆ ಹಾಗೂ ಮಾಲೂರು ತಾಲ್ಲೂಕಿನ ಕೆಲಭಾಗ ತಮಿಳುನಾಡಿನ ಗಡಿಗೆ ಹೊಂದಿಕೊಂಡಿರುವುದನ್ನು

ಬಿಟ್ಟರೆ ಮಿಕ್ಕ ಎಲ್ಲ ಗಡಿ ತಾಲ್ಲೂಕುಗಳು ಆಂಧ್ರಪ್ರದೇಶಕ್ಕೆ ಹೊಂದಿಕೊಂಡಿರುವ ಊರುಗಳಾಗಿವೆ. ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯುವ ಮಾವು, ಅವರೆಕಾಯಿ, ಕಡಲೆಕಾಯಿ(ಶೇಂಗ) ಬೆಳೆಯುವ ಋತುಮಾನಗಳಲ್ಲಿ ಆಂಧ್ರ ಹಾಗೂ ಗಡಿ ಜಿಲ್ಲೆಗಳವರೇ ವ್ಯಾಪಾರಕ್ಕಾಗಿ ಹೆಚ್ಚಿನ ಸಂಖ್ಯೆಯಲ್ಲಿ ಎಡತಾಗುತ್ತಾರೆ. ಚಿಂತಾಮಣಿ ದಿನಸಿ, ದವಸ-ಧಾನ್ಯಗಳ ಪ್ರಮುಖ ತಾಣವಾಗಿದ್ದು ಇಲ್ಲಿಗೆ ಬಂದು ಹೋಗುವ ಜನರಸಂಖ್ಯೆ ಹೆಚ್ಚಾಗಿದೆ. ಅಷ್ಟೇ ಅಲ್ಲದೆ ವಾನರಾಶಿ, ತಲೆಕಾಯಲಕೊಂಡ, ಈರ್ಲಬಸಪ್ಪ ಇಗ್ಗಪ್ಪ, ವಿದುರಾಶ್ವತ್ಥದ ನಾರಾಯಣ ಜಾತ್ರೆ, ಅಲಕಾಪುರ ಚನ್ನಸೋಮೇಶ್ವರ, ನಂದಿಯ ಭೋಗನಂದೀಶ್ವರ, ನೇತ್ರಾವತಿಯ ಸುಬ್ರಹ್ಮಣ್ಯ, ಕೋನಕುಂಟೆ ವೆಂಕಟರಮಣ, ಶಿಂಗರೇಪಲ್ಲಿ ಖಾದ್ರಿ ಲಕ್ಷ್ಮೀನರಸಿಂಹ, ಬುರುಡುಗುಂಟೆ ಗಂಗಮ್ಮ, ದೇವರ ಗುಡಿಪಲ್ಲಿ ಗಡಿದಿಂ ವೆಂಕಟರವಣಾ, ಚೇಳೂರು ಕೋದಂಡರಾಮೇಶ್ವರ, ಮಿಟ್ಟೇಮರಿ ಗರುಡಾದ್ರಿ ಲಕ್ಷ್ಮೀನರಸಿಂಹ, ಮೊದ್ಲೂರು ಕಂಪನಹಳ್ಳಿ ಬ್ಯಾಟರಾಯಸ್ವಾಮಿ, ತೊರ್ನಹಳ್ಳಿ ಸಪ್ಲಮ್ಮ, ಆವನಿ ರಾಮಲಿಂಗೇಶ್ವರ, ಮುಳಬಾಗಿಲು ಸೋಮೇಶ್ವರ, ಯಲ್ದೂರಿನ ಕೋದಂಡರಾಮ, ಹೋಳೂರಿನ ಲಕ್ಷ್ಮೀವೆಂಕಟರಮಣ, ಕೊಳಗುರ್ಕಿ ಗಂಗಮ್ಮ ದೇವರುಗಳ ಜಾತ್ರೆಯ ಜೊತೆಗೆ ದನ, ಕುರಿಗಳ ಜಾತ್ರೆಯೂ ಸೇರುತ್ತದೆ. ಇಲ್ಲಿನ ಕೊಡು-ಕೊಳ್ಳುವ ಸಂದರ್ಭದಲ್ಲಿ ಬಹುತೇಕ ತೆಲುಗು ಕನ್ನಡದ ಭಾಷಾ ಸಂಪರ್ಕ ಏರ್ಪಡುತ್ತದೆ. ಜಿಲ್ಲೆಯಲ್ಲಿ ಜರುಗುವ ಕುರುಬರ ಬೈರಕೂರು ದ್ಯಾವ್ರ, ಸುಗಟೂರು, ಕೋಲಾರ, ಮುಳಬಾಗಿಲು ನಂಗಲಿ, ಜಂಗಮಗುರ್ಜೇನಹಳ್ಳಿ ಹಾಗೂ ಕೀಲುಕೋಟೆ, ಮಾಲೂರು, ಮಾಸ್ತಿ, ಸೀತಿ ಮುಂತಾದೆಡೆ ಜರುಗುವ ವಕ್ಕಲಿಗರ ಬಂಡಿದ್ಯಾವ್ರ, ಬೆರಳುಕೊಡುವ ದ್ಯಾವ್ರ ಸಂದರ್ಭಗಳಲ್ಲಿ ಆಂಧ್ರದಲ್ಲಿ ನೆಲೆಗೊಂಡ ಅನೇಕರು ತಮ್ಮ ಮೂಲದೈವಗಳಿಗೆ ಹರಕೆ/ಪೂಜೆ ಸಲ್ಲಿಸುವುದನ್ನು ಈ ಸಂದರ್ಭಗಳಲ್ಲಿ ಸಾವಿರಾರು ಮಂದಿ ಭಾಗವಹಿಸುತ್ತಾರೆ. ಇಲ್ಲಿ ತೆಲುಗು ಕನ್ನಡ ಭಾಷಾ ಸಂಪರ್ಕದಿಂದಾಗಿ, ನುಡಿಜಗಿತ/ನುಡಿಬೆರಕೆ ಹೆಚ್ಚಾಗಿ ಬಂದಿವೆ.

ಕೋಲಾರ ಜಿಲ್ಲೆಯ ಭಾಷಾ ಪರಿಸ್ಥಿತಿಯನ್ನು ಗಮನಿಸಿದಾಗ ಇಡೀ ಕರ್ನಾಟಕದಲ್ಲೇ ಅತಿಹೆಚ್ಚಿನ ತೆಲುಗು ಭಾಷಿಕರಿರುವುದು ಕಂಡುಬರುತ್ತದೆ. ಭಾಷಿಕರ ಸರಾರಿಯನ್ನು ತೆಗೆದುಕೊಂಡು ತೆಲುಗು ಭಾಷಿಕರ ಸಂಖ್ಯೆ ಶೇ.೪೬.೮೮ರಷ್ಟಿರುವುದು ಕಾಣಬರುತ್ತದೆ. ೧೯೯೧ರ ಭಾರತ ಜನಗಣತಿಯ ಅಂಕಿ-ಅಂಶಗಳನ್ನು ಗಮನಿಸಿದಾಗ ಈ ಅಂಶ ವೇದ್ಯವಾಗುತ್ತದೆ. ಕರ್ನಾಟಕ ಸರ್ಕಾರದ ಆಡಳಿತ ಭಾಷೆಯ ನೀತಿಯಿಂದಾಗಿ ಜಿಲ್ಲೆಯಾದ್ಯಾಂತ ಸರ್ಕಾರಿ ಪ್ರಾಥಮಿಕ ಶಾಲೆಗಳಿಂದ ಹಿಡಿದು ಶಿಕ್ಷಣದವರೆಗೆ ಕನ್ನಡ ಮಾಧ್ಯಮದಲ್ಲಿ ವಿದ್ಯಾರ್ಥಿಗಳು ಉತ್ತರಿಸಲು ಅವಕಾಶ ಮಾಡಿಕೊಟ್ಟಿರುವುದು ಈ ತೆಲುಗು ಭಾಷಿಕರು ಕನ್ನಡ ಕಲಿಯುವ ಅನಿವಾರ್ಯತೆಯನ್ನು ಮಾಡಿದೆ. ಜಿಲ್ಲೆಯಲ್ಲಿ ಸಿನಿಮಾ ಮಾಧ್ಯಮ ಜನರನ್ನು ಹೆಚ್ಚಿನ ರೀತಿಯಲ್ಲಿ ತೆಲುಗು ಭಾಷೆಯ ಸಂಗೋಪನೆಯನ್ನುಂಟು ಮಾಡಲು ಕಾರಣವಾಗಿದೆ. ಇದೇ ಸಂದರ್ಭದಲ್ಲಿ ಜನರ ಸಂಗೀತಾಸಕ್ತಿಯೂ ಕೂಡ ಕುತೂಹಲ ಉಂಟುಮಾಡಿದ್ದು, ಆಸಕ್ತರು ಹೆಚ್ಚಾಗಿ ತೆಲುಗು ಸಿ.ಡಿ. ಅಥವಾ

ಡಿ.ವಿ.ಡಿ. ಮನೆಗೆ ತರುವ ಸಂದರ್ಭದಲ್ಲಿ ತೆಲುಗಿನ ಸಿನಿಮಾ ಹಾಡುಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿರುವುದು ಕಂಡುಬರುತ್ತದೆ. ೧೯೯೧ರ ಜನಗಣತಿಯ ಅಂಕಿ-ಅಂಶಗಳ ಪಟ್ಟಿಯನ್ನು ಇಲ್ಲಿ ಕೊಡಲಾಗಿದೆ.

| ಕನ್ನಡ | ತೆಲುಗು | ಉರ್ದು | ತಮಿಳು | ಮರಾಠಿ | ಹಿಂದಿ |
|---|---|---|---|---|---|
| ೩೨% | ೪೬.೮೪% | ೧೧% | ೭% | ೦.೭೮% | ೦.೬೫% |

(೧೯೯೧ರ ಜನಗಣತಿಯ ಪ್ರಕಾರ ಕೋಲಾರ ಜಿಲ್ಲೆಯಲ್ಲಿದ್ದ ಪ್ರಮುಖ ಭಾಷಿಕರ ಶೇಕಡಾವಾರು ಪಟ್ಟಿ)

**ಕೋಲಾರ ಜಿಲ್ಲೆಯ ಪ್ರಮುಖ ಭಾಷಿಕರ (ಶೇಕಡಾವಾರು) ನಕ್ಷೆ**




ಆಧಾರ : ಭಾರತ ಜನಗಣತಿ ಪಟ್ಟಿ ೧೯೯೧, ಭಾಗ ೪, ಬಿ ೧, ಟೇಬಲ್ ಸಿ.೭ನ್ನು ಆಧರಿಸಿ ಮೇಲ್ಕಂಡ ನಕ್ಷೆಯನ್ನು ತಯರಿಸಲಾಗಿದೆ.

ಕೋಲಾರ ಜಿಲ್ಲೆಯ ಜನಸಂಖ್ಯೆಯಲ್ಲಿ ಶೇಕಡ ೩೨%ರಷ್ಟಿರುವ ಕನ್ನಡ ಭಾಷಿಕರಿಗಿಂತ ಶೇಕಡ ೪೬.೮೪%ರಷ್ಟಿರುವ ತೆಲುಗು ಭಾಷಿಕರು ಕನ್ನಡ ಭಾಷೆಯ ಮೇಲೆ ಹೆಚ್ಚಿನ ಪ್ರಭಾವ ಬೀರಿರುವುದು ಮೇಲ್ನೋಟಕ್ಕೇ ಕಾಣುತ್ತದೆ. ಈ ಅಂಶ ಅನುಬಂಧದಲ್ಲಿ ನೀಡಿರುವ ತೆಲುಗು ಕನ್ನಡ ಪದಕೋಶದಿಂದ ಸ್ಪಷ್ಟವಾಗುತ್ತದೆ. ಜೊತೆಗೆ ಇದೇ ಅಧ್ಯಾಯದ ಮುಂದಿನ ಭಾಗಗಳಲ್ಲಿ ಸಾಮಾಜಿಕ ಭಿನ್ನಾಂಶಗಳಲ್ಲಿ ಒಂದಾದ ಜಾತಿ ಆಧಾರವಾಗಿಟ್ಟುಕೊಡು ನೋಡಿದಾಗಲೂ ಮೂರು ಜಾತಿಗಳನ್ನು ಬಿಟ್ಟರೆ ಮಿಕ್ಕೆಲ್ಲಾ ಜಾತಿಗಳು ಜಿಲ್ಲೆಯ ಸಾಮಾಜಿಕ ಸ್ತರವಿನ್ಯಾಸದಲ್ಲಿ ತೆಲುಗು ಭಾಷೆಯ ಪ್ರಭಾವವನ್ನು ಅಚ್ಚೊತ್ತಿವೆ. ಆದರೆ ಕರ್ನಾಟಕ ಸರ್ಕಾರದ ಆಡಳಿತ ನೀತಿಯಿಂದಾಗಿ ಬಹುಸಂಖ್ಯಾತ ತೆಲುಗರು ಕನ್ನಡ ಕಲಿತು ತನ್ಮೂಲಕ ತೆಲುಗು ಕನ್ನಡ ದ್ವಿಭಾಷಾ ನಿರ್ಮಾಣವಾಗುವಲ್ಲಿ ಕಾರಣವಾಗಿರುವುದು ಕಂಡುಬರುತ್ತದೆ. ಏಕೀಕೃತ ಕರ್ನಾಟಕಕ್ಕೆ ಸೇರಿ ಕನ್ನಡ ಆಡಳಿತ ಭಾಷೆಯಾದ ಮೇಲೆ ಹಾಗೂ ಗಡಿಭಾಗದಲ್ಲಿ ಹೆಚ್ಚಿನ ಕನ್ನಡ

ಶಾಲೆಗಳನ್ನು ತೆರೆದಿರುವ ಕಾರಣ ಜೊತೆಗೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಸರ್ಕಾರ ಶೇ.೫ ಕೃಪಾಂಕವನ್ನು ನೀಡಿರುವುದು ಇಲ್ಲಿನ ತೆಲುಗು ಭಾಷಿಕರಲ್ಲಿ ಕನ್ನಡ ಕಲಿಯುವ ಅದಮ್ಯ ಉತ್ಸಾಹ ತಲೆದೋರಿದೆ. ಇಂದಿನ ಸಂದರ್ಭದ ತೆಲುಗು ಭಾಷಿಕ ವಿದ್ಯಾರ್ಥಿಗಳು ಕನ್ನಡ ಕಲಿಯುವ ಆಸಕ್ತಿ ತೋರುತ್ತಿರುವುದು ಕೂಡ ಇಲ್ಲಿ ದ್ವಿಭಾಷಿಕತೆಗೆ ಕಾರಣವಾಗಿದೆ.

## ೪.೫. ಶಿಕ್ಷಣಾರ್ಥಿಗಳು ಹಾಗೂ ವಲಸಿಗರಿಂದಾದ ದ್ವಿಭಾಷಿಕತೆ

ಕಳೆದ ಶತಮಾನದ ೭೦-೮೦ರ ದಶಕದಲ್ಲಿ ಆಂಧ್ರಪ್ರದೇಶದಲ್ಲಿ ವೃತ್ತಿ ಶಿಕ್ಷಣ ಸಂಸ್ಥೆಗಳ ಕೊರತೆ ಬಹಳವಾಗಿದ್ದಿತು. ಆ ಸಂದರ್ಭದಲ್ಲಿ ಕೋಲಾರ ಜಿಲ್ಲೆಯಲ್ಲಿದ್ದ ಸರ್ಕಾರಿ ಟಿ.ಸಿ.ಎಚ್. ಕಾಲೇಜು (ಆಗ ಅಂತಹ ಸ್ಪರ್ಧೆ ಇಲ್ಲವಾದ್ದರಿಂದ ಹೊರಗಿನವರಿಗೂ ಸೀಟುಗಳನ್ನು ನೀಡಲಾಗುತ್ತಿತ್ತು), ಕೈಗಾರಿಕಾ ತರಬೇತಿ ಸಂಸ್ಥೆಗಳು (ಐ.ಟಿ.ಐ.), ಪಾಲಿಟೆಕ್ನಿಕ್ ಕಾಲೇಜು, ಖಾಸಗಿ ಸಂಸ್ಥೆಯಾದ ಪವನ್ ಕಾಲೇಜಿನ ಟಿ.ಸಿ.ಎಚ್., ಡಿ.ಫಾರ್ಮಸಿ, ಸಿಪಿ.ಎಡ್., ಐ.ಟಿ.ಐ.ಕೋರ್ಸುಗಳಿಗೆ ಆಂಧ್ರದಿಂದ ವಿದ್ಯಾರ್ಥಿಗಳ ದಂಡೇ ಬಂದಿತು. ಈ ವಿದ್ಯಾರ್ಥಿಗಳು ಇಲ್ಲಿಯೇ ತಮ್ಮ ವಾಸ್ತವ್ಯ ಹೂಡಿ ಸ್ಥಳೀಯ ಕನ್ನಡ ಭಾಷಿಕ ವಿದ್ಯಾರ್ಥಿಗಳ ಜೊತೆಗೂಡಿ ಕನ್ನಡವನ್ನು ಕಲಿಯಬೇಕಾದ ಸಂದರ್ಭಗಳು ಉಂಟಾಯಿತು. ಇವರಲ್ಲಿ ಕೆಲವರು ತಮ್ಮ ಸ್ವಂತ ಸ್ಥಳಗಳಿಗೆ ಹಿಂತಿರುಗಿದರೆ ಇನ್ನು ಕೆಲವರು ಇಲ್ಲಿಯೇ ಉಳಿದು ಇಲ್ಲೇ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದರು. ಜೊತೆಗೆ ಕೆ.ಜಿ.ಎಫ್‌ನ bemal ಕಾರ್ಖಾನೆಯಿಂದಾಗಿ ತೆಲುಗು ಭಾಷಿಕರು ಉದ್ಯೋಗದ ಕಾರಣಕ್ಕಾಗಿ ವಲಸೆ ಬಂದು ಇಲ್ಲಿಯೇ ನೆಲೆಸುವಂತಾಯಿತು. ವ್ಯಕ್ತಿ ಯಾವ ಸಾಮಾಜಿಕ ಪರಿಸರದಲ್ಲಿ ವಾಸಿಸುತ್ತಾನೋ ಆ ಪರಿಸರದ ಭಾಷೆಯನ್ನು ತನ್ನ ವ್ಯವಹಾರಿಕ ಭಾಷೆಯನ್ನಾಗಿ ಸ್ವೀಕರಿಸಬೇಕಾದ ಅನಿವಾರ್ಯತೆಯಿರುತ್ತದೆ. ಇಲ್ಲಿಗೆ ಶಿಕ್ಷಣ, ಉದ್ಯೋಗದ ಕಾರಣಕ್ಕಾಗಿ ವಲಸೆ ಬಂದವರು ತಮ್ಮ ಸ್ವಭಾಷೆಯನ್ನು ಕೆಲವೇ ಆವರಣಗಳಲ್ಲಿ ಮಾತ್ರ ಉಳಿಸಿಕೊಂಡು ಕನ್ನಡವನ್ನು ಹೆಚ್ಚಿನ ಸಂದರ್ಭಗಳಲ್ಲಿ ಸಂಪರ್ಕ ಭಾಷೆಯನ್ನಾಗಿ ಬಳಸಬಲ್ಲವರಾಗಿದ್ದಾರೆ.



## ೪.೬. ಜನಗಣತಿಯನ್ನು ಆಧರಿಸಿದ ಕನ್ನಡ-ತೆಲುಗು ದ್ವಿಭಾಷಿಕರ ಅಂಕಿ-ಅಂಶಗಳ ನೋಟ

ಕೋಲಾರ ಜಿಲ್ಲೆಯಲ್ಲಿ ಸಂಖ್ಯಾ ದೃಷ್ಟಿಯಿಂದ ತೆಲುಗು ಕನ್ನಡ, ಉರ್ದು, ತಮಿಳು, ಮರಾಠಿ, ಹಿಂದಿ ಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಜಿಲ್ಲೆಯಲ್ಲಿ ಪ್ರಸಿದ್ಧವಾದ beml ಕಾರ್ಖಾನೆ ಹಾಗೂ ಚಿನ್ನದಗಣಿ (ಬಿ.ಜಿ.ಎಂ.ಎಲ್.)ಇರುವ ಕಾರಣಕ್ಕಾಗಿ ಬೇರೆ ಭಾರತೀಯ ಭಾಷೆಗಳನ್ನಾಡುವವರು ಅಲ್ಪ ಪ್ರಮಾಣದಲ್ಲಿ ಇದ್ದಾರೆ. ಇಲ್ಲಿ ೧೯೧೧ ರಿಂದ ೧೯೯೧ರವರೆಗಿನ ಜನಗಣತಿ ಪ್ರಕಾರ ಕೋಲಾರ ಜಿಲ್ಲೆಯ ಒಟ್ಟು ಜನಸಂಖ್ಯೆ ಹಾಗೂ ಕನ್ನಡ ಮತ್ತು ತೆಲುಗನ್ನು ಮನೆಯ ಮಾತನ್ನಾಗಿ ಉಳ್ಳವರ ಕುರಿತಂತೆ ಪ್ರತಿಶತ ಪ್ರಮಾಣ ಮತ್ತು ಹಳ್ಳಿ ಹಾಗೂ ಪಟ್ಟಣದಲ್ಲಿ ವಾಸಿಸುತ್ತಿರುವವರ ಪ್ರತಿಶತ ಪ್ರಮಾಣಗಳು, ಪುರುಷರ ಹಾಗೂ ಮಹಿಳೆಯರ ಪ್ರತಿಶತ ಪ್ರಮಾಣಗಳನ್ನು ಮುಂದಿನ ಕೋಷ್ಟಕದಲ್ಲಿ ಕೊಡಲಾಗಿದೆ.

## ೧೯೧೧ರಿಂದ ೧೯೯೧ರವರೆಗಿನ ಕೋಲಾರ ಜಿಲ್ಲೆಯ ಜನಗಣತಿ ಆಧಾರಿತ ಕನ್ನಡ ತೆಲುಗು ಭಾಷಿಕರ ವಿವರಗಳು

| ಜನಗಣತಿ ವರ್ಷ | ಕೋಲಾರ ಜಿಲ್ಲೆಯ ಒಟ್ಟು ಜನಸಂಖ್ಯೆ | ಕನ್ನಡಿಗರು | ತೆಲುಗರು | ಹಳ್ಳಿಯ ಕನ್ನಡಿಗರು | ಹಳ್ಳಿಯ ತೆಲುಗರು | ನಗರದ ಕನ್ನಡಿಗರು | ನಗರದ ತೆಲುಗರು | ಗಂಡಸರ ಪ್ರಮಾಣ | ಹೆಂಗಸರ ಪ್ರಮಾಣ |
|---|---|---|---|---|---|---|---|---|---|
| ೧೯೧೧ | | ೨೪.೧೧ | ೫೬.೭೩ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| ೧೯೨೧ | | ೨೩.೯೯ | ೫೬.೪೫ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| ೧೯೩೧ | | ೨೩.೪೫ | ೫೭.೯೨ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| ೧೯೫೧ | ೧,೧೨೯,೮೭೫ | ೨೩೦೦೬೬<br>೨೦.೩೬ | ೫೭೮೪೬೦<br>೫೧.೨೮ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ಮಾಹಿತಿ ಇಲ್ಲ | ೧೧೫೯೭೦*<br>೧೦.೨೬<br>೨೯೬೧೨೩*<br>೨೬.೨೦ | ೧೧೪೯೦.೬*<br>೧೦.೯೮<br>೨೮೩೩೩೭**<br>೨೫.೦೭ |
| ೧೯೬೧ | ೧,೨೯೦,೧೪೪ | ೩೧೮,೮೩೩<br>೨೪.೭೨ | ೬೮೪೭೭೯<br>೫೩.೦೮ | ೨೮೩೧೭೫<br>೧೯.೬೨ | ೫೯೧೨೨೫<br>೪೫.೮೨ | ೩೫೬೫೮<br>೨.೭೬ | ೯೩೫೨೪<br>೭.೨೪ | ೧೬೨,೦೪೫*<br>೧೨.೫೬<br>೩೪೬,೮೫೦**<br>೨೬.೮೮ | ೧೫೬,೭೮೮*<br>೧೨.೧೫<br>೩೩೭,೯೨೦**<br>೨೬.೧೯ |
| ೧೯೭೧ | ೧,೫೧೬,೬೪೬ | ೩೬೮೩೭೨<br>೨೪.೨೯ | ೮೨೮೭೨೦<br>೫೪.೬೪ | ೮೮.೬ | ೮೮.೫ | ೧೧.೪ | ೧೧.೫ | ಮಾಹಿತಿ ಇಲ್ಲ | ಮಾಹಿತಿ ಇಲ್ಲ |
| ೧೯೯೧ | ೨,೨೧೬,೮೮೯ | ೭೧೪,೧೩೧<br>೩೨.೨೧ | ೧,೦೩೮,೪೩೬<br>೪೬.೮೪ | ೬೦೭,೮೧೪<br>೮೫.೧೧ | ೮೯೭,೦೨೩<br>೮೬.೩೮ | ೧೦೭,೩೧೭<br>೧೪.೮೯ | ೧೪೧,೧೪೩<br>೧೩.೭೨ | ೩೬೫೨೬೭*<br>೫೨೫೮೮೯*<br>೨೩.೭೨ | ೩೪೮೮೬೪*<br>೧೬.೪೭ ೧೫.೭೩<br>೫೧೨೫೮೭**<br>೨೩.೧೨ |

*ಕನ್ನಡಿಗರು

**ತೆಲುಗರು

ಆಧಾರ : ಭಾರತ ಸರ್ಕಾರದ ಜನಗಣತಿ ಹಾಗೂ Karnataka State District Profile-1991ಗಳನ್ನು ಆಧರಿಸಿ ಮೇಲಿನ ಕೊಷ್ಟಕವನ್ನು ತಯಾರಿಸಲಾಗಿದೆ.

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಕೆಲವು ಸಂಗತಿಗಳು ಗೋಚರವಾಗುತ್ತವೆ. ಅದೆಂದರೆ ಜಿಲ್ಲೆಯಲ್ಲಿ ತೆಲುಗು ಭಾಷಿಕರ ಹಾಗೂ ಕನ್ನಡಿಗರ ಸಂಖ್ಯೆಯೇ ಹೆಚ್ಚಿನ ಪ್ರಮಾಣದಲ್ಲಿದ್ದು, ತೆಲುಗು ಭಾಷಿಕರ ಸಂಖ್ಯೆಯು ಕನ್ನಡಿಗರಿಗಿಂತ ಹೆಚ್ಚಾಗಿ ಕಂಡುಬಂದಿದೆ. ಈ ಸಂಖ್ಯಾ ಪ್ರಮಾಣ ೧೯೧೧ ರಿಂದ ಗಮನಿಸಿದಾಗ ಬಹುಮಟ್ಟಿಗೆ ಒಂದೇ ರೀತಿಯಲ್ಲಿರುವುದು ಕಂಡುಬರುತ್ತದೆ. ಕನ್ನಡ ಹಾಗೂ ತೆಲುಗು ಭಾಷಿಕರಲ್ಲಿ ಬಹಳಷ್ಟು ಹಳ್ಳಿಯಲ್ಲಿ ವಾಸಿಸುವವರೇ ಆಗಿದ್ದು, ನಗರವಾಸಿಗಳ ಪ್ರಮಾಣ ತೀರಾ ಕಡಿಮೆ ಇದೆ. ಹಳ್ಳಿ ಮತ್ತು ಪಟ್ಟಣಗಳಲ್ಲಿ ಕನ್ನಡ ಹಾಗೂ ತೆಲುಗು ಭಾಷಿಕರ ಹಂಚಿಕೆ ಬಹುಮಟ್ಟಿಗೆ ಒಂದೇ ರೀತಿಯಾಗಿದೆ(ಕನ್ನಡ ೮೮.೬: ೧೧.೪, ೮೫.೧೧ : ೧೪.೮೯ ಹಾಗೂ ತೆಲುಗು ೮೮.೫ : ೧೧.೫, ೮೬.೩೮ : ೧೩.೬೨). ಕನ್ನಡ ಭಾಷಿಕರು ಹಾಗೂ ತೆಲುಗು ಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿ ಹಳ್ಳಿವಾಸಿಗಳೇ ಆಗಿರುವುದು ಹಾಗೂ ಅವರು ಬಹುತೇಕ ಕೃಷಿಕ ವರ್ಗದವರೇ ಆಗಿರುವುದರಿಂದ ಎರಡೂ ಭಾಷೆಗಳು ಸಮಾನಂತರವಾಗಿ ಹಂಚಿಕೆಯಾಗಿರುವುದು ಕಂಡುಬರುತ್ತದೆ. ಹಳ್ಳಿವಾಸಿಗಳಲ್ಲಿಯೂ ಕನ್ನಡ ಭಾಷಿಕರಿಗಿಂತ ತೆಲುಗು ಭಾಷಿಕರೇ ಹೆಚ್ಚಾಗಿರುವುದು ಎದ್ದು ಕಾಣತಕ್ಕ ಅಂಶವಾಗಿದೆ. ಇದರಿಂದ ಈ ಭಾಗದಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳ ಸಂಪರ್ಕ ಅತ್ಯಂತ ದೀರ್ಘಕಾಲದ್ದು, ಸಂಖ್ಯಾಬಾಹುಳ್ಯ ಉಳ್ಳದ್ದಾಗಿದೆಯೆಂದು ಊಹಿಸಬಹುದು. ೧೯೫೧ರ ಜನಗಣತಿಯಲ್ಲಿ ಒಟ್ಟು ಜನಸಖ್ಯೆ ೧,೧೨೯,೮೭೫ರಲ್ಲಿ ಶೇ.೨೦.೩೬ ಕನ್ನಡಿಗರೂ ಶೇ.೫೧.೨೮ ತೆಲುಗರೂ ಮಿಕ್ಕಂತೆ ಉಳಿದ ಭಾರತೀಯ ಭಾಷೆಗನ್ನಾಡುವವರಿದ್ದಾರೆ. ೧೯೬೧ ರಿಂದ ೧೯೯೧ರವರೆಗಿನ ಜನಗಣತಿಯಲ್ಲಿ ಕ್ರಮವಾಗಿ ಶೇ.೨೪.೭೨ ಕನ್ನಡಿಗರಿಗೆ, ಶೇ.೫೩.೦೮ ತೆಲುಗರೂ ಮತ್ತು ಶೇ.೩೨.೨೧ ಕನ್ನಡಿಗರಿಗೆ ಶೇ.೪೬.೮೪ ಕನ್ನಡಿಗರೂ ಇರುವುದು ತಿಳಿದುಬರುತ್ತದೆ. ಇದರಿಂದ ತಿಳುಯುವ ಅಂಶವೆಂದರೆ ಕನ್ನಡ ಭಾಷಿಕರ ಸಂಖ್ಯೆ ಕ್ರಮೇಣ ಹೆಚ್ಚುತ್ತಿದ್ದರೆ ತೆಲುಗು ಭಾಷಿಕರ ಸಂಖ್ಯೆ ಇಳಿಮುಖವಾಗುತ್ತಿರುವುದು ಗೋಚರಿಸುತ್ತದೆ. ಅಷ್ಟೇ ಅಲ್ಲದೆ ತೆಲುಗು ಭಾಷಿಕರು ಕನ್ನಡಕ್ಕೆ ಭಾಷಾ ಪಲ್ಲಟವಾಗುತ್ತಿರುವುದು ಕಂಡುಬರುತ್ತದೆ. ೧೯೭೧ ರಿಂದ ೧೯೯೧ರ ಅವಧಿಯೊಳಗೆ ಶೇ.೭.೮೦ರಷ್ಟು ತೆಲುಗು ಭಾಷಿಕರು ಕನ್ನಡಕ್ಕೆ ಪಲ್ಲಟವಾಗಿರುವುದು ಗೋಚರಿಸುತ್ತದೆ. ಇದಕ್ಕೆ ಕಾರಣವಾಗಿ ಶಿಕ್ಷಣ ಮತ್ತು ಆಡಳಿತದಲ್ಲಿ ಕನ್ನಡ ಭಾಷೆಯನ್ನು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವುದೇ ಆಗಿದೆ.

ಪುರುಷ ಹಾಗೂ ಮಹಿಳಾ ಭಾಷಿಕರ ಅಂಕಿ -ಅಂಶಗಳನ್ನು ಗಮನಿಸಿದಾಗ ೧೯೫೧ರಲ್ಲಿ ಶೇ.೧೦.೨೬ ಇದ್ದು, ಪುರುಷ ಕನ್ನಡ ಭಾಷಿಕರು ೧೯೬೧ರಲ್ಲಿ ಶೇ.೧೨.೫೬ಕ್ಕೆ ಏರಿಕೆಯಾಗಿರುವುದು ಕಂಡುಬಂದರೆ ೧೯೯೧ರ ವೇಳೆಗೆ ಈ ಪ್ರಮಾಣ ಶೇ.೧೬.೪೭ ಪ್ರಮಾಣಕ್ಕೆ ಏರಿಕೆ ಕಂಡಿದೆ. ಅದೇ ರೀತಿ ಪುರುಷ ತೆಲುಗು ಭಾಷಿಕರ ಸಂಖ್ಯೆ ೧೯೫೧ರಲ್ಲಿ ಶೇ.೨೬.೨೦ರಷ್ಟು ಇದ್ದದ್ದು ೧೯೯೧ರ ವೇಳೆ ಶೇ.೨೩.೭೨ರಷ್ಟು ಇಳಿಕೆಯಾಗಿದೆ. ಅದೇ ರೀತಿ ಮಹಿಳಾ ಕನ್ನಡ ಭಾಷಿಕರ ಸಂಖ್ಯೆ ೧೯೫೧ರಲ್ಲಿ ಶೇ.೧೦.೯೮ರಷ್ಟು ಇದ್ದದ್ದು ೧೯೬೧ರ ಹೊತ್ತಿಗೆ ಶೇ.೧೨.೧೫ರಷ್ಟಾಗಿದೆ. ೧೯೯೧ರ ಹೊತ್ತಿಗೆ ಶೇ.೧೫.೭೩ರಷ್ಟು ಏರಿಕೆ ಕಂಡಿದೆ.

ಮಹಿಳೆ ತೆಲುಗು ಭಾಷಿಕರ ಸಂಖ್ಯೆ ೧೯೫೧ರಲ್ಲಿ ಶೇ.೨೫.೦೭ರಷ್ಟು ಇದ್ದದ್ದು ೧೯೬೧ರ ವೇಳೆಗೆ ಶೇ.೨೬.೧೯ಕ್ಕೆ ಏರಿದೆ. ಅಂದರೆ ಶೇ.೧.೧೨ರಷ್ಟು ಏರಿಕೆ ಕಂಡಿದೆ. ಆದರೆ ೧೯೯೧ರ ವೇಳೆಗೆ ಈ ಮಹಿಳಾ ತೆಲುಗು ಭಾಷಿಕರ ಸಂಖ್ಯೆ ಶೇ.೨೩.೧೨ಕ್ಕೆ ಇಳಿಮುಖವಾಗಿರುವುದು ಗೋಚರಿಸುತ್ತದೆ. ೧೯೬೧ರ ವೇಳೆಗೆ ಈ ಮಹಿಳಾ ತೆಲುಗು ಭಾಷಿಕರಲ್ಲಿ ಏರಿಕೆಯಾಗಲು ಕಾರಣ ೧೯೫೬ರ ಭಾಷಾವಾರು ಪ್ರಾಂತ್ಯಗಳ ರಚನೆಯಾದ ದಿನಗಳ ಸಂದರ್ಭಗಳ ಪ್ರಭಾವದಿಂದಾಗಿ ಜನಗಣತಿಗೆ ಬಂದವರಿಗೆ ತಪ್ಪು ಮಾಹಿತಿ ನೀಡಿರಬಹುದೆಂದು ಊಹಿಸಲಾಗಿದೆ. ಹೀಗಾಗಿ ಅದು ಏರಿಕೆ ಕಂಡಿರಬಹುದೆಂಬ ಅಭಿಪ್ರಾಯ ಪಡಲಾಗಿದೆ.

ಮೇಲಿನ ಕೋಷ್ಟಕದಲ್ಲಿ ನೀಡಲಾದ ಅಂಕಿ-ಅಂಶಗಳ ವಿಶ್ಲೇಷಣೆಯಿಂದ ಕೋಲಾರ ಜಿಲ್ಲೆಯ ತೆಲುಗು ಭಾಷಿಕರು ೧೯೯೧ರ ಹೊತ್ತಿಗೆ ಕನ್ನಡ ಭಾಷೆಗೆ ಹೆಚ್ಚಿನ ಸಂಖ್ಯೆಯಲ್ಲಿ ಪಲ್ಲಟವಾಗುವುದರೊಂದಿಗೆ ತೆಲುಗು ಕನ್ನಡ ದ್ವಿಭಾಷಿಕರಾಗಿರುವವರ ಪ್ರಮಾಣ ಏರಿಕೆ ಕಂಡಿದೆ. ಆದರೆ ಕನ್ನಡ ಭಾಷಿಕರು ತದ್ವಿರುದ್ಧವಾಗಿ ತೆಲುಗನ್ನು ಕಲಿತು ದ್ವಿಭಾಷಿಕರಾಗಿರುವ ಪ್ರಮಾಣ ಬಹಳ ಕಡಿಮೆಯಾಗಿರುವುದು ಕಂಡುಬಂದಿದೆ. ಈ ಅಂಶಗಳು ತೆಲುಗು ಭಾಷಿಕರಿಗೆ ಕನ್ನಡ ಕಲಿಯುವ ಒತ್ತಾಯ ಇರುವಷ್ಟು ಕನ್ನಡ ಭಾಷಿಕರಿಗೆ ತೆಲುಗನ್ನು ಕಲಿಯುವ ಒತ್ತಾಯಗಳು ಕಡಿಮೆ ಇರುವುದು ಗೋಚರಿಸುತ್ತದೆ. ಲಿಂಗಾಧಾರಿತವಾಗಿ ಗಮನಿಸಿದಾಗ ಕನ್ನಡ ಮತ್ತು ತೆಲುಗು ಭಾಷಿಕ ಪುರುಷ-ಮಹಿಳೆ ಇಬ್ಬರಲ್ಲೂ ಮಹಿಳೆಯರೇ ಕಡಿಮೆ ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ.

## ೪.೭. ಕನ್ನಡ ತೆಲುಗು ಭಾಷೆಗಳನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಿರುವ ಅನ್ಯಭಾಷಿಕರು

ಕನ್ನಡ ಹಾಗೂ ತೆಲುಗು ಭಾಷಿಕರನ್ನು ಬಿಟ್ಟರೆ ಮನೆಯ ಆವರಣದಲ್ಲಿ ಮನೆ ಮಾತನ್ನಾಗಿ ಬೇರೆ ಬೇರೆ ಭಾರತೀಯ ಭಾಷೆಗಳನ್ನಾಡುವವರು ಕೋಲಾರ ಜಿಲ್ಲೆಯಲ್ಲಿದ್ದಾರೆ. ಇವರ ತಮ್ಮ ಭಾಷೆಯ ಜೊತೆಗೆ ಕನ್ನಡ ಅಥವಾ ತೆಲುಗನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಿರುವುದು ಜಿಲ್ಲೆಯಲ್ಲಿ ಕಂಡುಬಂದಿದೆ. ಉರ್ದು ಭಾಷಿಕ ಮುಸಲ್ಮಾನರು ಜಿಲ್ಲೆಯಲ್ಲಿ ಎರಡನೇ ಭಾಷೆಯನ್ನಾಗಿ ಹೆಚ್ಚಾಗಿ ತೆಲುಗನ್ನು ಬಳಸುತ್ತಾರೆ. ಪುರುಷರಿಗಿಂತ ಮಹಿಳಾ ಉರ್ದು ಭಾಷಿಕರು ತೆಲುಗನ್ನು ಎರಡನೇ ಭಾಷೆಯನ್ನಾಗಿ ಬಳಸುತ್ತಾರೆ. ನರ್ಸಿಂಗ್ ತರಬೇತಿ ಹಾಗೂ ಇತರೆ ಶಿಕ್ಷಣ ಪಡೆಯಲು ಬರುವ ಕೇರಳದ ಮಲಯಾಳಿ ಭಾಷಿಕರು ಆಸ್ಪತ್ರೆ ಇನ್ನಿತರ ಆವರಣಗಳಲ್ಲಿ ತೆಲುಗನ್ನು ಹೆಚ್ಚಾಗಿ ಎರಡನೆಯ ಭಾಷೆಯಾಗಿ ಬಳಸುತ್ತಾರೆ. ಬಹುತೇಕ ಮಹಿಳೆಯರು ತೆಲುಗನ್ನು ಬಳಕೆ ಮಾಡುತಿದ್ದಾರೆ. ಪುರುಷ ವಿದ್ಯಾರ್ಥಿಗಳಲ್ಲಿ ಶಿಕ್ಷಣದಿಂದ ಕನ್ನಡ ಕಲಿತು ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ. ಕೋಲಾರದ ಚಿನ್ನದ ಗಣಿಗಳಲ್ಲಿ ಹಾಗೂ ಬಿ.ಇ.ಎಂ.ಎಲ್. ಕಾರ್ಖಾನೆಯಲ್ಲಿ ಕಾರ್ಮಿಕರಾಗಿರುವ ತಮಿಳು ಭಾಷಿಕರು ಬಹುತೇಕರು ಕನ್ನಡವನ್ನು ಎರಡನೇ ಭಾಷೆಯಾಗಿ ಕಲಿತು ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ.

ಈ ತಮಿಳು ಭಾಷಿಕರಿಗಿದ್ದ ತಮಿಳು ಮಾಧ್ಯಮದ ಶಾಲೆಗಳನ್ನು ಈ ಬಹುತೇಕ ಮುಚ್ಚಲಾಗಿದೆ. ವಲಸೆ ಬಂದ ಗಣಿಕಾರ್ಮಿಕರಿಗೆ ಮತ್ತು ಬಿ.ಇ.ಎಂ.ಎಲ್. ಉದ್ಯೋಗಿಗಳ ಮಕ್ಕಳಿಗೆ ತೆರೆಯಲಾಗಿದ್ದ ಕೆ.ಜಿ.ಎಫ್.ನ ಮೈಸೂರು ಮೈನ್ಸ್‌ನ ಏಕೈಕ ತೆಲುಗು ಶಾಲೆಯನ್ನು ಎರಡು ವರ್ಷಗಳ ಹಿಂದೆಯೇ ಮುಚ್ಚಲಾಗಿದೆ. ಇಲ್ಲಿರುವ ಎಲ್ಲ ತೆಲುಗು ಭಾಷಿಕರು ತೆಲುಗು ಸಾಂಸ್ಕೃತಿಕ ಸಂಘವೊಂದನ್ನು ರಚಿಸಿಕೊಂಡಿದ್ದು ತೆಲುಗು ಭಾಷೆಯನ್ನು ಸಂಗೋಪನೆ ಮಾಡುತ್ತಿರುವುದಲ್ಲದೆ ಕನ್ನಡವನ್ನು ಬಹುತೇಕ ಆವರಣಗಳಲ್ಲಿ ಎರಡನೇ ಭಾಷೆಯನ್ನಾಗಿ ಬಳಸುತ್ತಿದ್ದಾರೆ. ಬಹುತೇಕ ಗಿರವಿ, ಚಿನ್ನಾಭರಣ ಅಂಗಡಿಗಳನ್ನು ನಡೆಸುತ್ತಿರುವ ಜೈನಸಮುದಾಯ ಮಾರ್ವಾಡಿ ಹಿಂದಿಯನ್ನು ಬಳಸುತ್ತಿದ್ದು, ವ್ಯಾಪಾರ ವಹಿವಾಟು ಸಂದರ್ಭದಲ್ಲಿ ತೆಲುಗನ್ನು ಎರಡನೆಯ ಭಾಷೆಯನ್ನಾಗಿ ಬಳಸುತ್ತಿದೆ. ಮರಾಠಿ ಭಾಷಿಕರು ತಮ್ಮ ವ್ಯಾಪಾರ ವಹಿವಾಟು, ಕಛೇರಿ ಬ್ಯಾಂಕ್ ಮೊದಲಾದ ಆವರಣಗಳಲ್ಲಿ ಕನ್ನಡವನ್ನು ಹೆಚ್ಚಾಗಿ ಎರಡನೆಯ ಭಾಷೆಯಾಗಿ ಬಳಸುತ್ತಿದ್ದಾರೆ. ಜೊತೆಗೆ ತೆಲುಗನ್ನು ಕೂಡ ಬಹಳಷ್ಟು ಈ ಮರಾಠಿ ಭಾಷಿಕರು ಹಲವಾರು ಆವರಣಗಳಲ್ಲಿ ಬಳಸುತ್ತಿರುವುದು ಕಂಡುಬಂದಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಮಾಹಿತಿಯನ್ನು ಆಧರಿಸಿ ಕನ್ನಡ ತೆಲುಗು ಭಾಷೆಗಳನ್ನು ಎರಡನೆಯ ಭಾಷೆಯಾಗಿ ಬಳಸುವವರ ವಿವರಗಳನ್ನು ಇಲ್ಲಿ ನೀಡಲಾಗಿದೆ.

| ಭಾಷಿಕರು | ಪ್ರಥಮ ಭಾಷೆ | ದ್ವಿತೀಯ ಭಾಷೆ | | ಎರಡೂ ಭಾಷೆಗಳನ್ನು ದ್ವಿತೀಯ ಭಾಷೆಯೆಂದು ಹೇಳಿಕೊಳ್ಳುತ್ತಿರು ವವರು |
|---|---|---|---|---|
| | | ಕನ್ನಡ | ತೆಲುಗು | ಕನ್ನಡ/ತೆಲುಗು |
| ಮುಸಲ್ಮಾನ | ೧೦೦ | ೨೫ | ೫೫ | ೨೦ |
| ಜೈನರು | ೨೦ | ೦೬ | ೧೦ | ೦೪ |
| ತಮುಳರು | ೪೦ | ೨೦ | ೧೦ | ೧೦ |
| ಮರಾಠರು | ೨೦ | ೦೬ | ೦೬ | ೦೮ |
| ಮಲಯಾಳಿಗರು | ೨೦ | ೦೮ | ೧೦ | ೦೨ |
| ಒಟ್ಟು | ೨೦೦ | ೬೫ | ೯೧ | ೪೪ |

**ಮುಸಲ್ಮಾನರು :** ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೧೧.೨೭%ರಷ್ಟಿರುವ ಮುಸಲ್ಮಾನರು ಮೂರನೇ ಅತಿದೊಡ್ಡ ಸಮುದಾಯವಾಗಿದ್ದಾರೆ. ಕರ್ನಾಟಕದ ಬೇರೆ ಬೇರೆ ಕಡೆ ಕೊಂಕಣಿ, ಬ್ಯಾರಿ, ತಮಿಳು, ಮಾಪ್ಪೆ, ತೆಲುಗು ಮಾತನಾಡುವ ಮುಸ್ಲಿಮರಿದ್ದಾರೆ. ಆದರೆ ಕೋಲಾರ ಜಿಲ್ಲೆಯಲ್ಲಿರುವ ಮುಸಲ್ಮಾನರು ಕನ್ನಡಕ್ಕಿಂತ ತೆಲುಗನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಿದ್ದಾರೆ. ಕನ್ನಡವನ್ನು ತಮ್ಮದೇ ವಿಚಿತ್ರ ಸ್ವರೋಚ್ಚಾರಗಳಿಂದ ಬಳಸುವ ಇವರು ತೆಲುಗನ್ನು ಸ್ಪಷ್ಟವಾಗಿ ಆಡುತ್ತಾರೆ. ಜಿಲ್ಲೆಯ ವ್ಯಾಪಾರ ವಹಿವಾಟುಗಳಲ್ಲಿ ಪ್ರಮುಖವಾಗಿ ವ್ಯವಹರಿಸುವ ಇವರು ಕನ್ನಡವನ್ನೂ ಬಲ್ಲವರಾಗಿದ್ದಾರೆ. ಮುಳಬಾಗಿಲು,

ಶ್ರೀನಿವಾಸಪುರ, ಚಿಂತಾಮಣಿ, ಕೋಲಾರ, ಚಿಕ್ಕಬಳ್ಳಾಪುರಗಳಲ್ಲಿ ನೆಲೆಸಿರುವ ಮುಸ್ಲಿಮರು ಅತಿಹೆಚ್ಚಾಗಿ ತೆಲುಗನ್ನೇ ದ್ವಿತೀಯ ಭಾಷೆಯನ್ನಾಗಿ ಬಳಸುತ್ತಿರುವುದು ಕಂಡುಬಂದಿವೆ. ಆಟೋಗ್ಯಾರೇಜು, ಸರ್ವೀಸ್ ಸ್ಟೇಷನ್, ಕರಕುಶಲ ಕೈಗಾರಿಕೆಗಳಲ್ಲಿ ನಿರತವಾಗಿರುವ ಇವರು ತಮ್ಮ ಆವರಣಗಳಲ್ಲಿ ಉರ್ದು ಭಾಷೆಯನ್ನು ಬಳಸುತ್ತಾರೆ. ಬೇರೆ ಆವರಣಗಳಲ್ಲಿ ಕನ್ನಡ ಮತ್ತು ತೆಲುಗನ್ನು ಬಳಸುವುದು ಕಂಡುಬಂದಿದೆ. ಮಾತಿನಲ್ಲಿ ನುಡಿಮಿಶ್ರಣ-ನುಡಿಜಿಗಿತಗಳು ಹೆಚ್ಚಾಗಿ ಕಂಡುಬಂದಿವೆ. ಉರ್ದು ಶಾಲೆಗಳಲ್ಲಿ ಆರ್ಥಿಕವಾಗಿ ಕೆಳ ಮಟ್ಟದಲ್ಲಿರುವ ವಿದ್ಯಾರ್ಥಿಗಳು ಓದುತ್ತಿದ್ದು, ಉರ್ದು ಭಾಷೆಯ ಸಂಗೋಪನೆ ಕಾರ್ಯ ಈ ಮೂಲಕ ನಡೆದಿದೆ.

**ಜೈನರು :** ರಾಜಾಸ್ಥಾನ, ಗುಜರಾತ್ ಮತ್ತು ಉತ್ತರ ಭಾರತದ ಇತರೆ ಕಡೆಗಳಿಂದ ಬಹಳ ಹಿಂದೆಯೇ ವಲಸೆ ಬಂದಿರುವ ಇವರು ಕರ್ನಾಟಕದ ನಾನಾ ಭಾಗಗಳಲ್ಲಿ ನೆಲೆಸಿದ್ದಾರೆ. ಶ್ರವಣಬೆಳಗೊಳ, ಕಾರ್ಕಳ, ಮೂಡಬಿದ್ರೆ ಇವರ ಪ್ರಮುಖ ಯಾತ್ರಾಸ್ಥಳವಾಗಿದ್ದು, ಉತ್ತರ ಕರ್ನಾಟಕ ಭಾಗದಲ್ಲಿ ಕನ್ನಡವನ್ನು ಮಾತನಾಡುವ ಇವರ ಸಮುದಾಯವಿದೆ. ಲಕ್ಷ್ಮೇಶ್ವರ, ಮುಳಗುಂದ, ಬಂಕಾಪುರ, ಮುಂತಾದ ಕಡೆ ಇವರ ಬಸ್ತಿಗಳಿವೆ. ಕೋಲಾರ ಜಿಲ್ಲೆಯಲ್ಲಿ ಇವರು ಮಾರವಾಡಿ, ಹಿಂದಿ, ಮೇವಾಡ, ರಾಜಸ್ತಾನಿ ಭಾಷೆಗಳನ್ನು ಬಳಸುತ್ತಾರೆ. ಬಹುತೇಕ ಚಿನ್ನದ ಅಂಗಡಿಗಳು, ಗಿರವಿ ಅಂಗಡಿ, ಸ್ಟೀಲ್‌ಪಾತ್ರೆಗಳ ಅಂಗಡಿ, ಬಟ್ಟೆ ಅಂಗಡಿಗಳ ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಗಂಡಸರು ಹೆಚ್ಚಾಗಿ ದ್ವಿಭಾಷಿಕತೆ ಒಳಗಾಗಿರುವ ಸಂದರ್ಭಗಳು ಕಂಡುಬಂದಿದ್ದರೆ, ಹೆಂಗಸರಲ್ಲಿ ಈ ಪ್ರಮಾಣ ತುಂಬಾ ಕಡಿಮೆ ಇದೆ. ಹೀಗಾಗಿ ಬಹತೇಕ ಮಹಿಳೆಯರು ಏಕಭಾಷಿಕರಾಗಿದ್ದಾರೆ.

**ತಮಿಳರು :** ಜಿಲ್ಲೆಯಲ್ಲಿ ಚಿನ್ನದ ಗಣಿಗಾರಿಕೆ ಮತ್ತು ಬಿ.ಇ.ಎಂ.ಎಲ್. ಕಾರ್ಖಾನೆಯ ಕಾರಣಕ್ಕಾಗಿ ಪಕ್ಕದ ತಮಿಳುನಾಡಿನಿಂದ ಕಾರ್ಮಿಕರಾಗಿ ವಲಸೆ ಬಂದಿರುವ ತಮಿಳು ಭಾಷಿಕ ಸಮುದಾಯದವರು ೭.೮೯%ರಷ್ಟಿದ್ದು ಕೆ.ಜಿ.ಎಫ್, ಬಂಗಾರಪೇಟೆ, ಬೇತಮಂಗಲ, ಮಾಲೂರು ಭಾಗಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಕನ್ನಡ, ತೆಲುಗು ಭಾಷೆಗಳಲ್ಲಿ ಕೌಶಲ್ಯಗಳನ್ನು ಪಡೆದಿದ್ದಾರೆ. ತಮ್ಮ ಆವರಣಗಳಲ್ಲಿ ತಮಿಳನ್ನು ಹೆಚ್ಚಾಗಿ ಬಳಸಿದರೂ ಇತರೆ ಆವರಣಗಳಲ್ಲಿ ಕನ್ನಡವನ್ನು, ತೆಲುಗನ್ನು ಎರಡನೇ ಭಾಷೆಯ ಸ್ಥಾನದಲ್ಲಿ ಬಳಸುತ್ತಿರುವುದು ಕಂಡುಬಂದಿದೆ. ತೆಲುಗು, ತಮಿಳು ಭಾಷಿಕರಿಗೆ ತೆಲುಗು, ತಮಿಳು ಮಾಧ್ಯಮದ ಶಾಲೆಗಳನ್ನು ತೆರೆಯಲಾಗಿದ್ದರೂ ಬಹಳಷ್ಟು ತಮಿಳು ಶಾಲೆಗಳು ಮುಚ್ಚಿದ್ದು, ಆ ಸ್ಥಳಗಳಲ್ಲಿ ಕನ್ನಡ ಮಾಧ್ಯಮದ ಶಾಲೆಗಳು ಶುರುವಾಗಿವೆ. ಕೆ.ಜಿ.ಎಫ್.ನ ಮೈಸೂರು ಮೈನ್ಸ್ ಬಳಿ ತೆರೆಯಲಾಗಿದ್ದ ಏಕೈಕ ತೆಲುಗು ಮಾಧ್ಯಮದ ಶಾಲೆ ವಿದ್ಯಾರ್ಥಿಗಳ ಕೊರತೆಯಿಂದ ೨೦೦೪ರಲ್ಲಿ ಮುಚ್ಚಲಾಗಿದೆ. ಇಂಗ್ಲಿಶ್‌ನ್ನು ಶಿಕ್ಷಣದ ಮಾಧ್ಯಮವನ್ನಾಗಿ ಸ್ವೀಕರಿಸಿರುವ ತಮಿಳರು ಕನ್ನಡ ಮತ್ತು ತೆಲುಗನ್ನು ದ್ವಿತೀಯ ಭಾಷೆಯನ್ನಾಗಿ ಬಳಸುತ್ತಿರುವುದು ಕಂಡುಬಂದಿದೆ.

**ಮರಾಠರು :** ಕೋಲಾರ ಜಿಲ್ಲೆಯು ಮರಾಠರ ಪ್ರಸಿದ್ಧ ದೊರೆಯಾದ ಶಿವಾಜಿಯ ಕಾಲಕ್ಕೆ ಅವನ ಸಾಮ್ರಾಜ್ಯದ ಭಾಗವಾಗಿತ್ತು. ಆಡಳಿತ ಸುಸೂತ್ರವಾಗಿ ನಡೆಸಲು ಈ ಪ್ರಾಂತ್ಯದ ಮುಖ್ಯಸ್ಥರಾಗಿ ಷಹಾಜಿ ಮತ್ತು ಸಾಂಬಾಜಿ ನೇಮಕವಾದದ್ದು ಇಲ್ಲಿ ಮರಾಠಿ ಭಾಷಿಕರು ಕಾಣಿಸಿಕೊಳ್ಳಲು ಸಾಧ್ಯವಾಯಿತು. ಇಂದು ಜಿಲ್ಲೆಯಲ್ಲಿ ಮರಾಠಿ ಭಾಷಿಕರು ೦.೭೮%ರಷ್ಟಿದ್ದಾರೆ. ವ್ಯಾಪಾರೋದ್ಯಮದ ಜೊತೆಗೆ ಸರ್ಕಾರಿ ಕಛೇರಿ, ಬ್ಯಾಂಕು, ನ್ಯಾಯಾಂಗ ಇಲಾಖೆ, ಆಸ್ಪತ್ರೆ ಮುಂತಾದೆಡೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮರಾಠಿ ಭಾಷಿಕರು ತಮ್ಮ ಭಾಷೆಯನ್ನು ಮನೆಯ ಆವರಣದಲ್ಲಿ ಮಾತ್ರ ಬಳಸುತ್ತಾರೆ. ಇನ್ನಿತರ ಆವರಣಗಳಲ್ಲಿ ಕನ್ನಡ ಮತ್ತು ತೆಲುಗನ್ನು ದ್ವಿತೀಯ ಭಾಷೆಯನ್ನಾಗಿ ಬಳಕೆ ಮಾಡುತ್ತಿದ್ದಾರೆ. ಶಿಕ್ಷಣದಿಂದ ಕನ್ನಡ ದ ಎಲ್ಲಾ ಸಾಕ್ಷರತೆಯ ನೆಲೆಗಳಲ್ಲಿ ಕೌಶಲ್ಯವನ್ನು ಸಾಧಿಸಿರುವುದು ಕಂಡುಬಂದಿದೆ.

**ಮಲಯಾಳಿಗರು :** ಕೇರಳ ಕಡೆಯಿಂದ ನರ್ಸಿಂಗ್ ತರಬೇತಿ ಹಾಗೂ ಶಿಕ್ಷಣ ಅರಸಿಬಂದ ಇವರು ಜಿಲ್ಲೆಯಲ್ಲಿ ನೆಲೆಗೊಂಡಿದ್ದಾರೆ. ಕೋಲಾರ ಜಿಲ್ಲೆಯಲ್ಲಿ ಬಹುತೇಕ ಸರ್ಕಾರಿ, ಆಸ್ಪತ್ರೆಗಳು, ಖಾಸಗಿ ನರ್ಸಿಂಗ್ ಹೋಂಗಳಲ್ಲಿ ನರ್ಸಿಂಗ್ ತರಬೇತಿ ಪಡೆದ ಬಹಳಷ್ಟು ಮಂದಿ ಶುಶ್ರೂಷಕಿಯರಾಗಿ ಉದ್ಯೋಗ ನಿರ್ವಹಿಸುತ್ತಿದ್ದಾರೆ. ಮಿಕ್ಕಂತೆ ಕೈಗಾರಿಕೆ ಆಧಾರಿತ ವೃತ್ತಿಶಿಕ್ಷಣ ಕೋರ್ಸುಗಳು ಮತ್ತು ನರ್ಸಿಂಗ್ ಕಾಲೇಜುಗಳಲ್ಲಿ ಶಿಕ್ಷಣ ಪಡೆಯಲು ಇವರು ಹೆಚ್ಚಾಗಿ ವಲಸೆ ಬಂದಿದ್ದಾರೆ. ಶಿಕ್ಷಣಕ್ಕೆ ಒಳಗಾದ ಸಂದರ್ಭದಲ್ಲಿ ಸ್ಥಳೀಯ ಭಾಷಾ ಮಾಧ್ಯಮ ಬಿಟ್ಟು ಇಂಗ್ಲಿಶ್ ಮಾಧ್ಯಮದಲ್ಲಿ ಓದುತ್ತಿರುವುದು ಕಂಡುಬಂದಿದೆ. ಹೀಗಾಗಿ ಅವರು ನೆಲಸಿರುವ ಕಡೆ ಹಾಗೂ ಉದ್ಯೋಗದ ಸಂದರ್ಭದಲ್ಲಿ ಇಂಗ್ಲಿಶ್, ಕನ್ನಡ ಹಾಗೂ ತೆಲುಗನ್ನು ದ್ವಿತೀಯ ಭಾಷೆಯಾಗಿ ಬಳಸುವ ಸಂದರ್ಭ ಕಂಡುಬಂದಿದೆ. ಲಿಂಗಾಧಾರಿತವಾಗಿ ನೋಡಿದಾಗ ಆಸ್ಪತ್ರೆಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ನರ್ಸ್‌ಗಳು ತೆಲುಗು ಹಾಗೂ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬಳಸುತ್ತಿರುವುದು ಗೋಚರಿಸುತ್ತದೆ.

### ೪.೭.೧. ಕರ್ನಾಟಕದಲ್ಲಿ ಇತರ ಭಾಷಿಕರು ಹಾಗೂ ದ್ವಿಭಾಷಿಕ ಸನ್ನಿವೇಶ

ಭಾರತದ ಮುಂಚೂಣಿ ರಾಜ್ಯಗಳಲ್ಲಿ ಒಂದಾಗಿರುವ ಕರ್ನಾಟಕ ಹಲವಾರು ಕಾರಣಗಳಿಗಾಗಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಕಾಯ್ದುಗೊಂಡಿರುವ ರಾಜ್ಯ. ಕರ್ನಾಟಕದ ಈ ವೈಶಿಷ್ಟ್ಯತೆಗೆ ಇಲ್ಲಿನ ಪ್ರಾಕೃತಿಕ ನೆಲೆಗಳು, ಸ್ವಾತಂತ್ರ್ಯಾನಂತರದ ರಾಜಕೀಯ ಬೆಳವಣಿಗೆಗಳು, ಇಲ್ಲಿನ ಕನ್ನಡಿಗರ ಸಾಹಸಮಯ ಉದ್ಯಮಶೀಲತೆ ದೊಡ್ಡ ದೊಡ್ಡ ಕೈಗಾರಿಕೆಗಳು ಇಲ್ಲಿ ಬೇರೂರಲು ಕಾರಣವಾಗಿವೆ. ಜೊತೆಗೆ ಗಣಿಗಾರಿಕೆ ಕೂಡ ತನ್ನದೇ ಆದ ಕಾರ್ಯಜಾಲವನ್ನು ಹೊಂದಿದೆ. ಹೀಗಾಗಿ ಇಡೀ ಭಾರತದ ನಾನಾ ಭಾಗಗಳಿಂದ ವ್ಯಾಪಾರ, ಉದ್ಯೋಗ ಕಾರಣಗಳಿಗಾಗಿ ಬಹುಸಂಖ್ಯೆಯಲ್ಲಿ ಬೇರೆ ಬೇರೆ ಭಾಷಿಕರು ಕರ್ನಾಟಕದಲ್ಲಿ ನೆಲೆಸಿದ್ದಾರೆ. ಆ ಭಾಷಿಕರೆಲ್ಲ ಇಲ್ಲಿಯೇ ತಮ್ಮ ಅಸ್ತಿತ್ವವನ್ನು ಕಂಡುಕೊಂಡಿದ್ದಲ್ಲದೆ ಇಲ್ಲಿನ

ಜೀವನಾಡಿಯಲ್ಲಿ ಒಂದಾಗಿ ಹೋಗಿದ್ದಾರೆ. ಇವರಲ್ಲಿ ಮೊಘಲರು, ಬಿಜಾಪುರದ ಆದಿಲ್‌ಷಾಹಿಗಳಿಂದ ಹಿಡಿದು ಟಿಪ್ಪುಸುಲ್ತಾನ್ ಕಾಲದ ಆಳ್ವಿಕೆಯ ಸಂದರ್ಭಗಳು ಇಲ್ಲಿ ಉರ್ದು ಭಾಷಿಕರು ಸಾಕಷ್ಟು ಸಂಖ್ಯೆಯಲ್ಲಿ ತಮ್ಮ ನೆಲೆಗಳನ್ನು ಕಂಡುಕೊಳ್ಳಲು ಕಾರಣವಾಗಿದೆ. ಹಾಗೆಯೇ ಹೈದರಾಬಾದಿನ ನಿಜಾಮನ ಸಂಸ್ಥಾನಕ್ಕೆ ಸೇರಿದ್ದ ಸಂದರ್ಭ, ಮರಾಠರ ಆಳ್ವಿಕೆ, ತೆಲುಗು, ಮರಾಠಿ ಭಾಷಿಕರು ಇಲ್ಲಿ ನೆಲಸಲು ಕಾರಣರಾದರೆ ಸ್ವಾತಂತ್ರ್ಯದ ತರುವಾಯ ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ಪುನರ್ವಿಂಗಡಣೆಯಾಗಿ ಕರ್ನಾಟಕ ಏಕೀಕರಣಗೊಂಡು ತನ್ನ ಅಸ್ತಿತ್ವ ಕಂಡುಕೊಳ್ಳುವ ಸಂದರ್ಭದಲ್ಲಿ ಮತ್ತು ಅದಕ್ಕಿಂತ ಮುಂಚೆ ಔದ್ಯೋಗಿಕ ಕಾರಣಕ್ಕಾಗಿ ಇಲ್ಲಿಯೇ ನೆಲಸಿದ ಹಿಂದಿ, ತಮಿಳು, ಮಲಯಾಲಂ ಭಾಷಿಕರು ಜೊತೆಗೆ ಇಲ್ಲಿಯೇ ನೆಲೆಸಿ ಕನ್ನಡಿಗರ ಜೊತೆ ಸಹಬಾಳ್ವೆ ನಡೆಸಿಕೊಂಡು ಹೋಗುತ್ತಿರುವ ಕೊಂಕಣಿ, ಕೊಡವ, ತುಳು ಭಾಷಿಕರು ಕರ್ನಾಟಕದ ಮುಖ್ಯವಾಹಿನಿಯಲ್ಲಿ ಬೆರೆತು ಹೋಗಿದ್ದಾರೆ. ೨೦೦೧ರ ಜನಗಣತಿಯ ಪ್ರಕಾರ ಈ ಎಲ್ಲಾ ಭಾಷಿಕರೂ ಸೇರಿ ಕರ್ನಾಟಕದ ಜನಸಂಖ್ಯೆ ಒಟ್ಟು ೫,೨೭,೩೩,೯೫೮ ಆಗಿದೆ. ಎಲ್ಲಾ ಭಾಷಿಕರು ಇಲ್ಲಿನ ಕನ್ನಡಿಗರೊಂದಿಗೆ ವ್ಯವಹರಿಸಬೇಕಾದಾಗ ಹಾಗೆಯೇ ಕನ್ನಡಿಗರೂ ಈ ಅನ್ಯಭಾಷಿಕರೊಂದಿಗೆ ಮಾತನಾಡುವ ಸಂದರ್ಭಗಳು ನಿರ್ಮಾಣವಾಗಿ ಬಹುತೇಕರು ತಮ್ಮ ಭಾಷೆಯ ಜೊತೆಗೆ ಹಲವಾರು ಭಾಷೆಗಳನ್ನು ಕಲಿಯುವ ಸನ್ನಿವೇಶ ಉಂಟಾಗಿದೆ. ಹೀಗಾಗಿ ಬಹುತೇಕರು ದ್ವಿಭಾಷಿಕರೂ ಬಹುಭಾಷಿಕರೂ ಆಗಿ ಇಡೀ ಕರ್ನಾಟಕ ದ್ವಿಭಾಷಿಕ ಹಾಗೂ ಬಹುಭಾಷಿಕ ಪ್ರದೇಶವಾಗಿ ಕಂಡುಬಂದಿದೆ. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಹಂಚಿಕೆಯಾಗಿರುವ ಪ್ರಮುಖ ಭಾಷೆಗಳನ್ನಾಡುವ ಭಾಷಿಕರ ಶೇಕಡಾವಾರು ಪ್ರಮಾಣವನ್ನು ಇಲ್ಲಿ ದಾಖಲಿಸಲಾಗಿದೆ.

**ಕರ್ನಾಟಕದ ಪ್ರಮುಖ ಭಾಷೆಗಳ್ನಾಡುವವರ ಶೇಕಡಾವಾರು ಜನಸಂಖ್ಯೆ (೧೯೯೧ರ ಜನಗಣತಿಯನ್ನು ಆಧರಿಸಿ ತಯಾರಿಸಿದ ಪಟ್ಟಿ)**

| ಕನ್ನಡ | ಉರ್ದು | ತೆಲುಗು | ತಮಿಳು | ಮರಾಠಿ | ಹಿಂದಿ | ಮಲೆಯಾಳಂ | ಕೊಂಕಣಿ | ಕೊಡವ | ತುಳು |
|---|---|---|---|---|---|---|---|---|---|
| ೬೬.೨೨ | ೯.೯೬ | ೭.೩೯ | ೩.೮೪ | ೩.೬೫ | ೧.೯೭ | ೧.೬೮ | ೧.೫೭ | ೦.೨೧ | ೩.೦೭ |

೧೯೫೬ರ ಭಾಷಾವಾರು ಪ್ರಾಂತಗಳ ಪುನರ್ವಿಂಗಡಣೆ ಕಾರ್ಯ ಕೈಗೊಂಡಾಗ ಕನ್ನಡ ಮಾತನಾಡುವ ಪ್ರದೇಶಗಳನ್ನು ಒಟ್ಟುಗೂಡಿಸಲಾಯಿತು. ಈಗಿನ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ಹಾಗೂ ಗೋವಾ ರಾಜ್ಯಗಳಿಗೆ ಈ ಪ್ರದೇಶಗಳು ಸೇರಿಹೋಗಿದ್ದವು. ಈಗಿನ ಮುಂಬೈ ಕರ್ನಾಟಕ ಎಂದು ಕರೆಯುವ ಭಾಗಗಳು ಮುಂಬೈ ಪ್ರೆಸಿಡೆನ್ಸಿಗೂ, ಹೈದರಾಬಾದ್ ಕರ್ನಾಟಕದ ಭಾಗಗಳು ಹೈದರಾಬಾದ್ ನಿಜಾಮರ ಸಾಮ್ರಾಜ್ಯಕ್ಕೂ ಮಿಕ್ಕವು ಕೊಡಗು ಸಂಸ್ಥಾನ, ಮೈಸೂರು ಒಡೆಯರ ಆಳ್ವಿಕೆಗೆ ಹಾಗೂ ಮದ್ರಾಸು ಪ್ರೆಸಿಡೆನ್ಸಿಗೆ ಸೇರಿ ಹೋಗಿದ್ದವು. ಕೊಂಕಣಿ ಭಾಷಿಕ ಗೋವಾ ಪೋರ್ಚುಗೀಸರ ಅಧೀನಕ್ಕೆ ಒಳಪಟ್ಟಿತ್ತು. ೧೯೫೬ರ ತರುವಾಯ ಕರ್ನಾಟಕಕ್ಕೆ ಭೌಗೋಳಿಕ ಗಡಿಗಳ್ನು ಹಾಕಿದರೂ ಭಾಷಿಕ ಗಡಿಗಳ್ನು

ಹಾಕಲು ಸಾಧ್ಯವಿಲ್ಲವಾಯಿತು. ಇದರಿಂದ ಭಿನ್ನ ಭಾಷಿಕ ಸಮುದಾಯಗಳೊಂದಿಗೆ ಕನ್ನಡಿಗರೂ ಹಾಗೂ ಭಿನ್ನ ಭಾಷಿಕರು ಕನ್ನಡ ಭಾಷಿಕರೊಂದಿಗೂ ಸಂಪರ್ಕಿಸಬೇಕಾದ ಅನಿವಾರ್ಯತೆ ಉಂಟಾಗಿದೆ. ಅಖಂಡ ಕರ್ನಾಟಕ ರಾಜ್ಯದ ಗಡಿಗಳು ವಿಸ್ತಾರವಾಗಿದ್ದು, ಈ ಗಡಿಗಳುದ್ದಕ್ಕೂ ದ್ವಿಭಾಷಿಕ ಪರಿಸರ ನಿರ್ಮಾಣವಾಗಿದೆ. ಕರ್ನಾಟಕದ ವಾಯುವ್ಯ ದಿಕ್ಕಿನಲ್ಲಿ ಮರಾಠಿಯೂ, ಪೂರ್ವಕ್ಕೆ ತೆಲುಗು ಭಾಷೆಯೂ ಕರಾವಳಿಯಲ್ಲಿ ಕೊಂಕಣಿ, ತುಳು ಭಾಷೆಗಳು, ಕೊಡಗು ಭಾಗದಲ್ಲಿ ಕೊಡವ ಭಾಷೆ, ಕೇರಳದ ಗಡಿಯಲ್ಲಿ ಮಲಯಾಳಂ ಹಾಗೂ ಕೆ.ಜಿ.ಎಫ್., ಕೊಳ್ಳೆಗಾಲ, ಚಾಮರಾಜನಗರಗಳಿಗೆ ಹೊಂದಿಕೊಂಡ ಭಾಗಗಳಿಗೆ ತಮಿಳು ಭಾಷೆಗಳು ಕನ್ನಡದೊಂದಿಗೆ ಬೆರೆತ ಕಾರಣ ಈ ಎಲ್ಲಾ ಭಾಷೆಗಳು ಕನ್ನಡದೊಂದಿಗೆ ದ್ವಿಭಾಷಾ ಸಂದರ್ಭವನ್ನು ನಿರ್ಮಾಣ ಮಾಡಿವೆ. ಜೊತೆಗೆ ಉರ್ದು ಭಾಷಿಕರು ಕೋಲಾರ, ಬೆಂಗಳೂರು, ಬೀದರ್, ಬಿಜಾಪುರ, ರಾಯಚೂರು, ಗುಲಬರ್ಗಾ, ಮೈಸೂರು, ಧಾರವಾಡ ಹೀಗೆ ಹಂಚಿಹೋಗಿದ್ದಾರೆ.

ಮೇಲೆ ಹೇಳಿದ ಸಂದರ್ಭಗಳು ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿರುವ ಕಾರಣ ಕನ್ನಡ ಭಾಷಾ ರಚನೆಯಲ್ಲಿ ಭಿನ್ನತೆಗಳು ಕಾಣಿಸಿಕೊಡು ಪ್ರಾದೇಶಿಕವಾಗಿ ಉಪಭಾಷೆಗಳು ಕಾಣಿಸಿಕೊಂಡು ವ್ಯತ್ಯಸ್ತ ರೂಪ ಕಂಡುಬಂದಿವೆ.

## ೪.೮. ಮಾಧ್ಯಮಗಳಲ್ಲಿ ತೆಲುಗು ಕನ್ನಡ ಭಾಷಾ ಬಳಕೆ

ಆಧುನಿಕ ಸಂದರ್ಭದ ಬದುಕು ಬಹಳ ಸಂಕೀರ್ಣವಾದುದು. ಮಾನವನ ಜೀವನ ಶೈಲಿ ದಿನದಿಂದ ದಿನಕ್ಕೆ ಬದಲಾಗುತ್ತಲೇ ಸಾಗಿದೆ. ವ್ಯಕ್ತಿಯ ದಿನಿತ್ಯದ ಬದುಕು ಬಹಳಷ್ಟು ಬದಲಾವಣೆಗೆ ಒಳಗಾಗುವಲ್ಲಿ ಮಾಧ್ಯಮಗಳ ಪಾತ್ರ ಹಿರಿದಾದುದು. ವ್ಯಕ್ತಿಯ ಜೀವನಶೈಲಿ ಎಷ್ಟರಮಟ್ಟಿಗೆ ಪ್ರಭಾವಿತವಾಗಿದೆಯೆಂದರೆ ಮಾಧ್ಯಮವಿಲ್ಲದಿದ್ದರೆ ಮನುಷ್ಯನ ಬದುಕು ಸಾಗುವುದಿಲ್ಲವೇನೋ ಎಂಬಷ್ಟರ ಮಟ್ಟಿಗೆ. ಈ ರೀತಿ ವ್ಯಕ್ತಿಯ ಜೀವನ ಶೈಲಿಗಳಲ್ಲಿ ಒಂದೆನಿಸುವ ಭಾಷೆಯ ಮೇಲೆ ಸಿನಿಮಾ, ಪತ್ರಿಕೆಗಳು, ರೇಡಿಯೋ, ದೂರದರ್ಶನ ಹಾಗೂ ಆಡಿಯೋ ವೀಡಿಯೋಗಳಂಥವು ಮಹತ್ತರ ಪರಿಣಾಮ ಬೀರಿವೆ. ಭಾಷಿಕ ಸಮುದಾಯಗಳ ಭಾಷಾ ಸಂಗೋಪನೆಯಲ್ಲಂತೂ ಈ ಮಾಧ್ಯಮಗಳ ಪಾತ್ರ ಹಿರಿದಾದುದು.

### ಸಿನಿಮಾ

ಆಧುನಿಕ ಜೀವನ ಶೈಲಿಯನ್ನು ಸಿನಿಮಾ ಪ್ರಭಾವಿಸಿರುವಷ್ಟು ಬೇರ್ಯಾವುದೂ ಪ್ರಭಾವಿಸಿರಲಿಕ್ಕಿಲ್ಲ. ಸಿನಿಮಾ ದೃಶ್ಯ ಮಾಧ್ಯಮವಾಗಿರುವುದರಿಂದ ಅನಕ್ಷರಸ್ಥರಿಗಂತೂ ಹೇಳಿ ಮಾಡಿಸಿದ್ದು. ಕೋಲಾರ ಜಿಲ್ಲೆಯಲ್ಲಿ ಸಿನಿಮಾ ಮಂದಿರಗಳು ಸಾಕಷ್ಟಿದ್ದು, ಇಲ್ಲಿನ ಭಾಷೆ ಮತ್ತು ಸಂಸ್ಕೃತಿಯ ಮೇಲೆ ಸಿನಿಮಾ ಮಾಧ್ಯಮದ ಮೂಲಕ ಗಾಢವಾದ ಪ್ರಭಾವವನ್ನು ಬೀರಿವೆ. ಇಲ್ಲಿ ಪ್ರದರ್ಶನಗೊಳ್ಳುವ ಸಿನಿಮಾಗಳಲ್ಲಿ ಅತಿಹೆಚ್ಚು ತೆಲುಗು ಭಾಷೆಯವು. ಕ್ಷೇತ್ರ ಕಾರ್ಯ ಕೈಗೊಂಡ ಸಂದರ್ಭದಲ್ಲಿ ಜಿಲ್ಲೆಯಲ್ಲಿ ಅತಿಹೆಚ್ಚು

ತೆಲುಗು ಸಿನಿಮಾಗಳು ಪ್ರದರ್ಶಿತವಾಗಲು ಇರುವ ಕಾರಣಗಳನ್ನು ಪತ್ತೆ ಹಚ್ಚಲು ಹೊರಟಾಗ ಕಂಡ ಅಂಶಗಳ್ನು ಇಲ್ಲಿ ದಾಖಲಿಸಲಾಗಿದೆ. ಅವುಗಳಲ್ಲಿ ಮೊದಲನೆಯದು ಜಿಲ್ಲೆಯಲ್ಲಿ ೪೬.೮೪%ರಷ್ಟು ತೆಲುಗು ಭಾಷಿಕರಿರುವುದು. ಇವರೇ ಈ ತೆಲುಗು ಸಿನಿಮಾಗಳಿಗೆ ಹೆಚ್ಚಿನ ಪ್ರೇಕ್ಷಕರು. ಎರಡನೆಯದಾಗಿ ತೆಲುಗು ಸಿನಿಮಾಗಳ ವೈವಿಧ್ಯಮಯ ಕಥಾವಸ್ತು. ಹಾಗೆಯೇ ಆ ಸಿನಿಮಾಗಳ ಆಕರ್ಷಕ ಕಥಾನಿರೂಪಣೆ, ಹಾಸ್ಯಭರಿತ ಸಂಭಾಷಣೆ ಮೊದಲಾದ ಕಾರಣಗಳು ಕನ್ನಡ ಭಾಷಿಕರೂ ತೆಲುಗು ಸಿನಿಮಾಗಳತ್ತ ಆಕರ್ಷಿಸಲು ಪ್ರಮುಖ ಕಾರಣವಾಗಿದೆ. ಯಾವುದೇ ತೆಲುಗು ಸಿನಿಮಾವೊಂದು ಆಂಧ್ರದಲ್ಲಿ ಬಿಡುಗಡೆಯಾದ ದಿನವೇ ಜಿಲ್ಲೆಯಲ್ಲೂ ಪ್ರದರ್ಶಿತಗೊಳ್ಳುತ್ತದೆ. ಪ್ರಮುಖವಾಗಿ ಮುಳಬಾಗಿಲು, ಚಿಂತಾಮಣಿ, ಶ್ರೀನಿವಾಸಪುರ, ಚಿಕ್ಕಬಳ್ಳಾಪುರ, ಕೋಲಾರ, ಶಿಡ್ಲಘಟ್ಟಗಳಲ್ಲಿ ಈ ಪ್ರದರ್ಶನವಾಗುತ್ತವೆ. ಇವಲ್ಲದೆ ಜಿಲ್ಲೆಯ ಇತರ ತಾಲ್ಲೂಕುಗಳಾದ ಬಾಗೇಪಲ್ಲಿ, ಗುಡಿಬಂಡೆ, ಗೌರಿಬಿದನೂರು ತಾಲ್ಲೂಕುಗಳಲ್ಲಿ ಇದೇ ರೀತಿಯ ಸನ್ನಿವೇಶ ಕಂಡುಬಂದಿದೆ. ತೆಲುಗು ನಟರ ಹೆಸರಿನ ಅಭಿಮಾನಿ ಸಂಘಗಳು ಕೂಡ ಇದ್ದು, ಇವು ತೆಲುಗು ಭಾಷಾ ಸಂಗೋಪನೆಗೆ ನೆರವಾಗುತ್ತಿವೆ. ನವೆಂಬರಿನಲ್ಲಿ ಜರುಗುವ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಇದೇ ತೆಲುಗು ಭಾಷಿಕರು ಅದ್ದೂರಿ ಸಂಭ್ರಮಾಚರಣೆಗಳಿಂದ ಆಚರಿಸುತ್ತಾರೆ. ಇದು ಇಲ್ಲಿರುವ ತೆಲುಗು-ಕನ್ನಡ ಭಾಷಾ ಸಾಮರಸ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಹಾಗೂ ನವೆಂಬರ್ ಒಂದರಂದು ಕನ್ನಡ ಸಿನಿಮಾ ಕಡ್ಡಾಯವಾಗಿ ಪ್ರದರ್ಶನಗೊಳ್ಳುವಂತೆ ನೋಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅವರು ತೆಲುಗಿನಲ್ಲಿ ಹೇಳಿದ ಸಂಭಾಷಣೆ ಹೀಗಿದೆ. "ಏಮನ್ನಾ ಕಾನಿ. ಈ ಕಿತ ಕನ್ನಡ ಸಿನಿಮಾ ಏಪಿಯಲ್ಲ"(ಏನಾದ್ರೂ ಆಗಲಿ. ಈ ಬಾರಿ (ನವೆಂಬರಿಗೆ) ಕನ್ನಡ ಸಿನಿಮಾ ಹಾಕಿಸ್ಲೇಬೇಕು". ಆಯ್ದ ಸ್ಥಳಗಳಲ್ಲಿ ತೆಲುಗು-ಕನ್ನಡ ಹಾಗೂ ಇತರೆ ಭಾಷೆಯ ಸಿನಿಮಾಗಳು ಒಂದು ವರ್ಷದ ಅವಧಿಯಲ್ಲಿ ಪ್ರದರ್ಶನಗೊಳ್ಳುವ ಸಂಖ್ಯೆಯನ್ನು ಮುಂದಿನ ಕೋಷ್ಟಕದಲ್ಲಿ ಸರಾಸರಿ ಪ್ರತಿಶತದಂತೆ ನೀಡಲಾಗಿದೆ.

**ವರ್ಷವೊಂದರಲ್ಲಿ ತೆಲುಗು-ಕನ್ನಡ ಮತ್ತು ಇತರ ಭಾಷೆಯ ಸಿನಿಮಾಗಳು**

**ಪ್ರದರ್ಶನಗೊಳ್ಳುವ ಸಂಖ್ಯೆ (ಶೇಕಡಾವಾರು)**

| ಸ್ಥಳದ ಹೆಸರು | ತೆಲುಗು | ಕನ್ನಡ | ಇತರೆ |
|---|---|---|---|
| ಮುಳಬಾಗಿಲು | ೮೦.೦ | ೧೫.೦ | ೫.೦ |
| ಶ್ರೀನಿವಾಸಪುರ | ೭೮.೦ | ೨೦.೦ | ೨.೦ |
| ಕೋಲಾರ | ೬೦.೦ | ೨೫.೦ | ೧೫.೦ |
| ಬಂಗಾರಪೇಟೆ | ೪೫.೦ | ೩೦.೦ | ೨೫.೦ |
| ಚಿಕ್ಕಬಳ್ಳಾಪುರ | ೫೫.೦ | ೩೫.೦ | ೧೦.೦ |
| ಚಿಂತಾಮಣಿ | ೮೦.೦ | ೧೫.೦ | ೫.೦ |

## ವರ್ಷವೊಂದರಲ್ಲಿ ತೆಲುಗು-ಕನ್ನಡ ಮತ್ತು ಇತರ ಭಾಷೆಯ ಸಿನಿಮಾಗಳು ಪ್ರದರ್ಶನಗೊಳ್ಳುವ ಸಂಖ್ಯೆ (ಶೇಕಡಾವಾರು)



ಪ್ರಮುಖವಾಗಿ ಜಿಲ್ಲೆಯ ಆಯ್ದ ಆರು ಸ್ಥಳಗಳಲ್ಲಿನ ಸಿನಿಮಾ ಮಂದಿರಗಳಲ್ಲಿ ವರ್ಷಹೊಂದರಲ್ಲಿ ಪ್ರದರ್ಶನಗೊಳ್ಳುವ ತೆಲುಗು-ಕನ್ನಡ ಸಿನಿಮಾಗಳ ಶೇಕಡಾವಾರು ಸಂಖ್ಯೆಯನ್ನು ಗಮನಿಸಿದಾಗ ಮುಳಬಾಗಿಲು ಮತ್ತು ಚಿಂತಾಮಣಿ ತಾಲ್ಲೂಕುಗಳಲ್ಲಿ ತೆಲುಗು ಸಿನಿಮಾಗಳು ಪ್ರದರ್ಶನಗೊಳ್ಳುವ ಸರಾಸರಿ ಸಂಖ್ಯೆ ಶೇಕಡಾ ೮೦%ರಷ್ಟು, ಕನ್ನಡ ಸಿನಿಮಾಗಳು ಅತ್ಯಂತ ಕಡಿಮೆ ಅಂದರೆ ೧೫%ರಷ್ಟು. ಇದು ಜಿಲ್ಲೆಯಲ್ಲಿನ ತೆಲುಗು ಭಾಷೆಯ ಪ್ರಭಾವವು ಮಾಧ್ಯಮದ ಮೂಲಕ ಗಾಢವಾಗಿ ಬೀರಿರುವುದನ್ನು ತೋರಿಸುತ್ತದೆ. ತೆಲುಗು ಭಾಷಿಕರಲ್ಲದೆ ಕನ್ನಡ ಭಾಷಿಕರೂ ಕೂಡ ತೆಲುಗು ಸಿನಿಮಾ ನೋಡುವ ಸಂದರ್ಭ ಬಹಳಷ್ಟು ಕನ್ನಡಿಗರು ಕೂಡ ದ್ವಿಭಾಷಿಕರಾಗಿರುವುದನ್ನು ಕಾಣಬಹುದು. ಇದು ಅತಿ ಹೆಚ್ಚಾಗಿ ಗ್ರಹಿಕೆ ನೆಲೆಯಲ್ಲಿ. ಕನ್ನಡ ಭಾಷಿಕರು ಕೂಡ ತೆಲುಗು ಸಿನಿಮಾ ನೋಡುವ ಸಂದರ್ಭ ಬಹಳಷ್ಟು ಕನ್ನಡಿಗರು ದ್ವಿಭಾಷಿಕರಾಗಿರುವುದಕ್ಕೆ ಕಾರಣವಾಗಿದೆ. ಇದು ಅತಿಹೆಚ್ಚಾಗಿ ಗ್ರಹಿಕೆ ನೆಲೆಯಲ್ಲಿ ದ್ವಿಭಾಷಿಕರಿರುವುದನ್ನು ಸೂಚಿಸುತ್ತದೆ. ಶ್ರೀನಿವಾಸಪುರ ತಾಲ್ಲೂಕು ಸರಿಸುಮಾರು ೭೮%ರಷ್ಟು ಇದ್ದರೆ ಬಂಗಾರಪೇಟೆ ತಾಲ್ಲೂಕಿನಲ್ಲಿ ತೆಲುಗಿನ ಸಿನಿಮಾಗಳ ಪ್ರದರ್ಶನ ೫೦%ಕ್ಕಿಂತ ಕಡಿಮೆ ಇದೆ. ಇದಕ್ಕೆ ಕಾರಣ ಅಲ್ಲಿ ಕನ್ನಡ ಸಿನಿಮಾದ ಜೊತೆಗೆ ಇತರೆ ಭಾಷಾ ಚಿತ್ರಗಳು ಅಂದರೆ ತಮಿಳು ಹಾಗೂ ಹಿಂದಿ ಚಿತ್ರಗಳು ಹೆಚ್ಚಾಗಿ ಪ್ರದರ್ಶನಗೊಳ್ಳುವುದು. ಕೋಲಾರ ಹಾಗೂ ಚಿಕ್ಕಬಳ್ಳಾಪುರ ತಾಲ್ಲೂಕುಗಳಲ್ಲಿ ತೆಲುಗು ಸಿನಿಮಾಗಳ ಪ್ರದರ್ಶನ ಸಂಖ್ಯೆ ೫೦%ಕ್ಕಿಂತ ಸ್ವಲ್ಪ ಜಾಸ್ತಿ ಇರುವುದು ಕಂಡುಬಂದಿದ್ದು ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕನ್ನಡ ಸಿನಿಮಾಗಳೂ ತೆರೆಕಾಣುತ್ತವೆ. ಒಟ್ಟಾರೆ ಪರಿಸ್ಥಿತಿಗೆ ಕಾರಣ ತೆಲುಗು ಸಿನಿಮಾಗಳು ಗುಣಾತ್ಮಕವಾಗಿದ್ದು ಒಳ್ಳೆಯ ಕಥಾವಸ್ತು, ಫೋಟೋಗ್ರಫಿ ಇತ್ಯಾದಿಗಳಿಂದ ಕೂಡಿರುವುದು. ಹಾಗೆಯೆ ಕನ್ನಡ ಸಿನಿಮಾಗಳು ಕಳಪೆಯಾಗಿದ್ದಾಗಿರುವುದು ಎಂದು ಚಿತ್ರಮಂದಿರಗಳ ಮಾಲಿಕರು ಅಭಿಪ್ರಾಯಪಡುತ್ತಾರೆ.

## ದೂರದರ್ಶನ

ಸಿನಿಮಾಗಳನ್ನು ಬಿಟ್ಟಾರೆ ಅತಿಹೆಚ್ಚಿನ ವೀಕ್ಷಕರನ್ನು ಜಿಲ್ಲೆಯಲ್ಲಿ ತಲುಪಿರುವುದು ದೂರದರ್ಶನ ಮಾಧ್ಯಮ. ಇಲ್ಲೂ ಕೂಡ ತೆಲುಗು ಚಾನೆಲ್‌ಗಳು ತಮ್ಮ ನಿಚ್ಚಳ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಪ್ರಮುಖ ತೆಲುಗು ಖಾಸಗಿ ಟಿ.ವಿ. ಚಾನೆಲ್‌ಗಳಾದ ಜೆಮಿನಿ, ಈಟಿವಿ ತೆಲುಗು, ಮಾ ಟಿ.ವಿ. ತೇಜ ಹಾಗೂ ಸರ್ಕಾರಿ ಒಡೆತನದ ಸಪ್ತಗಿರಿ ಚಾನೆಲ್‌ಗಳು ಹೆಚ್ಚುಹೆಚ್ಚಾಗಿ ಇಲ್ಲಿನ ಭಾಷಿಕರನ್ನು ಆಕರ್ಷಿಸಿವೆ. ಈ ಚಾನೆಲ್‌ಗಳಲ್ಲಿನ ಹೆಚ್ಚಿನ ಕಾರ್ಯಕ್ರಮಗಳನ್ನು ಮನರಂಜನೆಗಾಗಿ ಈ ಭಾಷಿಕರು ವೀಕ್ಷಿಸುತ್ತಾರೆ. ಆದರೆ ಪ್ರಾದೇಶಿಕ ಸುದ್ದಿಗಾಗಿ ಖಾಸಗಿ ಕನ್ನಡ ಟಿ.ವಿ. ಚಾನೆಲ್‌ಗಳಾದ ಉದಯ, ಉಷೆ, ಈ.ಟಿ.ವಿ ಕನ್ನಡ, ಝೀ ಕನ್ನಡ ಹಾಗೂ ಸರ್ಕಾರ ಒಡೆತನದ ಚಂದನ ಚಾನೆಲ್‌ಗಳನ್ನು ಹೆಚ್ಚಾಗಿ ವಿಕ್ಷಿಸುವುದ ಕಂಡುಬಂದಿದೆ. ತನ್ಮೂಲಕ ಹೆಚ್ಚಿನ ಭಾಷಿಕರು ಕನ್ನಡ ತೆಲುಗು ದ್ವಿಭಾಷಿಕರಾಗಲು ಕಾರಣವಾಗಿದೆ.

## ರೇಡಿಯೋ, ಆಡಿಯೋ ಮತ್ತು ವೀಡಿಯೋಗಳು

ಗ್ರಾಮಾಂತರ ಪ್ರದೇಶಗಳಲ್ಲಿ ಖಾಸಗಿ ದೂರದರ್ಶನ ಚಾನೆಲ್‌ಗಳು ಹೆಚ್ಚಾಗಿ ಇರುವುದಿಲ್ಲವಾದ್ದರಿಂದ ಬಹಳಷ್ಟು ಮಂದಿ ರೇಡಿಯೋ ಮೂಲಕ ಮನರಂಜನಾ ಕಾರ್ಯಕ್ರಮಗಳನ್ನು ಕೇಳುತ್ತಾರೆ. ಗಡಿಭಾಗದ ಪ್ರದೇಶಗಳ ಬಹುತೇಕ ಮಂದಿ ತೆಲುಗಿನಲ್ಲಿ ಪ್ರಸಾರವಾಗುವ ಕಡಪ, ಚಿತ್ತೂರು ಆಕಾಶವಾಣಿಯ ಕಾರ್ಯಕ್ರಮಗಳನ್ನು ಕೇಳುತ್ತಾರೆ. ರಾಜ್ಯದ ಸುದ್ದಿಗಾಗಿ ಮಾತ್ರ ಬೆಂಗಳೂರು ಆಕಾಶವಾಣಿಯ ಮೂಲಕ ವಾರ್ತೆಗಳನ್ನು ಕನ್ನಡದಲ್ಲಿ ಕೇಳುತ್ತಾರೆ. ಇದು ಇಲ್ಲಿನ ಭಾಷಿಕರು ತಮ್ಮ ಅಗತ್ಯಗಳಿಗೆ ತಕ್ಕಂತೆ ಭಾಷಾ ಬಳಕೆಯನ್ನು ಮಾಡುತ್ತಿರುವುದು ಕಂಡುಬಂದಿದೆ. ಜೊತೆಗೆ ಕೃಷಿಸಂಬಂಧಿ ಕಾರ್ಯಕ್ರಮಗಳನ್ನು ಹೆಚ್ಚಾಗಿ ಬೆಂಗಳೂರು ಆಕಾಶವಾಣಿ ಮೂಲಕ ಕೇಳುತ್ತಾರೆ.

**ವರ್ಷವೊಂದರಲ್ಲಿ ಅಡಿಯೋ, ವಿಡಿಯೋ ಸಿ.ಡಿ.ಗಳನ್ನು**

**ಭಾಷಿಕರು ಕೊಳ್ಳುವ ಪ್ರಮಾಣ (ಶೇಕಡಾವಾರು)**

| ಸ್ಥಳದ ಹೆಸರು | ತೆಲುಗು | ಕನ್ನಡ | ಇತರೆ |
|---|---|---|---|
| ಮುಳಬಾಗಿಲು | ೬೦.೦ | ೩೦.೦ | ೧೦.೦ |
| ಶ್ರೀನಿವಾಸಪುರ | ೫೮.೦ | ೩೦.೦ | ೧೨.೦ |
| ಚಿಂತಾಮಣಿ | ೬೫.೦ | ೨೫.೦ | ೧೦.೦ |
| ಕೋಲಾರ | ೫೫.೦ | ೩೦.೦ | ೧೫.೦ |
| ಬಂಗಾರಪೇಟೆ | ೪೨.೦ | ೨೫.೦ | ೩೩.೦ |
| ಚಿಕ್ಕಬಳ್ಳಾಪುರ | ೪೫.೦ | ೩೫.೦ | ೨೦.೦ |

**ವರ್ಷವೊಂದರಲ್ಲಿ ಅಡಿಯೋ, ವಿಡಿಯೋ ಸಿ.ಡಿ.ಗಳನ್ನು**

**ಭಾಷಿಕರು ಕೊಳ್ಳುವ ಪ್ರಮಾಣ (ಶೇಕಡಾವಾರು)**

ಭಾಷಿಕರು ಕೊಳ್ಳುವಿಕೆಯ ಶೇಕಡಾವಾರು ಪ್ರಮಾಣ



ಮೇಲಿನದು ರೇಡಿಯೋದಿಂದ ಪ್ರಸಾರಗೊಳ್ಳುವ ಕಾರ್ಯಕ್ರಮಗಳನ್ನು ಕುರಿತದ್ದಾದರೆ ಹೆಚ್ಚಿನ ಜನ ಮನರಂಜನೆಗಾಗಿ ಹಬ್ಬ-ಹರಿದಿನಗಳೇ ಅಲ್ಲದೆ ತಮ್ಮ ಬಿಡುವಿನ ವೇಳೆಯನ್ನು ಕಳೆಯಲು ಆಡಿಯೋ-ವೀಡಿಯೋಗಳಿಗೆ ಮೊರೆಹೋಗುತ್ತಿದ್ದಾರೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಆಡಿಯೋ- ವೀಡಿಯೋ ಸಿ.ಡಿ.ಗಳನ್ನು ಮಾರಾಟ ಮಾಡುವ ಮಳಿಗೆಗಳಿಗೆ ಭೇಟಿ ನೀಡಿ ವಿವರಗಳನ್ನು ಸಂಗ್ರಹಿಸಲಾಯಿತು. ಬಹಳಷ್ಟು ಮಂದಿ ತೆಲುಗು ಸಿ.ಡಿ.ಗಳನ್ನೇ ಕೊಂಡುಕೊಳ್ಳುತ್ತಿರುವ ವಿಷಯ ಕುತೂಹಲಕಾರವಾಗಿತ್ತು. ಅದಕ್ಕೆ ಕಾರಣ ಮೊದಲನೆಯದಾಗಿ ತೆಲುಗು ಸಿನಿಮಾಗಳ ಸಿ.ಡಿ.ಗಳು ಯಾವುದೇ ಹೊಸ ಸಿನಿಮಾ ಬಿಡುಗಡೆಯಾಗುತ್ತಲೇ ಮಾರುಕಟ್ಟೆಗೆ ಬರುತ್ತವೆ. ಹಾಗಾಗಿ ಇಲ್ಲಿನ ಭಾಷಿಕರು ಹೆಚ್ಚಾಗಿ ಹೊಸತನಕ್ಕೆ ಅಗ್ರಸ್ಥಾನ ನೀಡಿ ಅವುಗಳನ್ನು ಕೊಳ್ಳುವುದರ ಮೂಲಕ ದ್ವಿಭಾಷಿಕತೆಗೆ ಕಾರಣರಾಗಿದ್ದಾರಲ್ಲದೆ ತೆಲುಗು ಭಾಷಾ ಸಂಗೋಪನೆಗೂ ಕಾರಣಕರ್ತರಾಗಿದ್ದಾರೆ. ಎರಡನೆಯಾಗಿ ಕನ್ನಡದಲ್ಲಿ ಬರುವ ಯಾವುದೇ ಹೊಸ ಸಿನಿಮಾಗಳ ಸಿ.ಡಿ.ಗಳು ಮಾರುಕಟ್ಟೆಯಲ್ಲಿ ಬೇಗನೆ ಲಭ್ಯವಾಗದೇ ಇರುವುದು. ಇದರಿಂದಾಗಿ ಕನ್ನಡ ಸಿ.ಡಿ.ಗಳ ಮಾರಾಟ ಇಳಿಮುಖವಾಗಿರುವುದು ಕೂಡ ಕನ್ನಡದ ಬೆಳವಣಿಗೆಯಲ್ಲಿ ಹಿಮ್ಮುಖವಾಗಿದೆಯೆಂದೇ ಹೇಳಬಹುದು. ಈ ಸಂದರ್ಭದಲ್ಲಿ ಸರ್ಕಾರ ರಿಮೇಕ್ ಹಾವಳಿಯನ್ನು ತಪ್ಪಿಸಿ ಸದಭಿರುಚಿಯ ಸ್ವಕಥನ ಚಿತ್ರಗಳಿಗೆ ಪ್ರೋತ್ಸಾಹ ನೀಡಿ ಕನ್ನಡ ಸಿನಿಮಾದ ಸಿ.ಡಿ.ಗಳು ಮಾರುಕಟ್ಟೆಯಲ್ಲಿ ಬೇಗನೆ ದೊರಕುವಂತೆ ಮಾಡಿದಲ್ಲಿ ಕನ್ನಡ ಭಾಷಾಭಿವೃದ್ಧಿಗೆ ಪೂರಕವಾಗಬಲ್ಲುದು.

### ಆಡಿಯೋ ಮತ್ತು ವೀಡಿಯೋ ಸಿ.ಡಿ.ಗಳನ್ನು ಭಾಷಿಕರು ಕೊಳ್ಳುವ ಪ್ರಮಾಣ ಶೇಕಡಾವಾರು

ಕೋಷ್ಟಕವನ್ನು ಗಮನಿಸಿದರೆ ಜಿಲ್ಲೆಯ ಗಡಿ ತಾಲ್ಲೂಕುಗಳಾದ ಮುಳಬಾಗಿಲು(ತೆಲುಗು ೬೦%), (ಕನ್ನಡ ೩೦%), ಶ್ರೀನಿವಾಸಪುರ(ತೆಲುಗು ೫೮%, ಕನ್ನಡ ೩೦%), ಚಿಂತಾಮಣಿ(ತೆಲುಗು ೬೫%, ಕನ್ನಡ ೨೫%)ಗಳಲ್ಲಿನ ಆಡಿಯೋ/ವೀಡಿಯೋ ಸಿ.ಡಿ.ಗಳ ಮಾರಾಟದ ಶೇಕಡಾವಾರು ಪ್ರಮಾಣವನ್ನು ಗಮನಿಸಿದರೆ ತೆಲುಗು ಭಾಷೆಯ ಆಡಿಯೊ/ವೀಡಿಯೋ ಸಿ.ಡಿ.ಗಳು ಗರಿಷ್ಠ ಪ್ರಮಾಣದಲ್ಲಿ ಮಾರಾಟವಾಗಿರುವುದು ಕಂಡುಬರುತ್ತದೆ. ಇತರ ಮೂರು ತಾಲ್ಲೂಕುಗಳಲ್ಲಿ ಈ ಪ್ರಮಾಣ ಕಡಿಮೆಯೆನಿಸಿದರೂ ಕನ್ನಡ ಸಿ.ಡಿ.ಗಳಿಗಿಂತ ಶೇಕಡಾವಾರು ಪ್ರಮಾಣ ಹೆಚ್ಚಾಗಿಯೇ ಇದೆ. ಬಂಗಾರಪೇಟೆ ತಾಲ್ಲೂಕಿನ ಒಂದು ಭಾಗವಾಗಿ ಬರುವ ಕೆ.ಜಿ.ಎಫ್.ನಲ್ಲಿ ತಮಿಳು ಭಾಷಿಕರ ಸಂಖ್ಯೆ ಜಾಸ್ತಿ ಇರುವ ಕಾರಣಕ್ಕಾಗಿ ಅಲ್ಲಿ ತೆಲುಗು ಮತ್ತು ಕನ್ನಡದ ಸಿ.ಡಿ.ಗಳ ಮಾರಾಟ ಇಳಿಮುಖಗೊಂಡಿರುವುದು ಕಂಡುಬರುತ್ತದೆ. ಮಿಕ್ಕಂತೆ ಕೋಲಾರ ಹಾಗೂ ಚಿಕ್ಕಬಳ್ಳಾಪುರಗಳಲ್ಲಿ ಈ ಪ್ರಮಾಣದಲ್ಲಿ ಅಂತಹ ವ್ಯತ್ಯಾಸವೇನೂ ಕಾಣಬರುವುದಿಲ್ಲ.

ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ತೆಲುಗು ಭಾಷಿಕರು ತಮ್ಮ ಮನೆಯ ಭಾಷೆಯನ್ನು ಸಂಗೋಪನೆ ಮಾಡುವುದು ಕಂಡುಬಂದರೆ ಕನ್ನಡ ಭಾಷಿಕರು ಗೃಹಿಕೆ ನೆಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕನ್ನಡ-ತೆಲುಗು ದ್ವಿಭಾಷಿಕರಾಗಿರುವುದು ಕಂಡುಬಂದಿದೆ.

# ಅಧ್ಯಾಯ ೫

# ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ರಾಚನಿಕ ಸ್ವರೂಪ

೧. ಒಟ್ಟು ದ್ವಿಭಾಷಿಕರು
  ಅ. ಕನ್ನಡ-ತೆಲುಗು
  ಆ. ತೆಲುಗು-ಕನ್ನಡ
೨. ಒಟ್ಟು ಭಾಷಿಕರು
  ಅ. ಕನ್ನಡ
  ಆ. ತೆಲುಗು
೩. ಪರಿಶಿಷ್ಟ ಜಾತಿಗಳ
೪. ಪರಿಶಿಷ್ಟ ಪಂಗಡಗಳು
೫. ಒಕ್ಕಲಿಗರು
೬. ಬಣಜಿಗರು
೭. ಕುರುಬರು
೮. ಇತರೆ ಜಾತಿಗಳು

೫

# ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ರಾಚನಿಕ ಸ್ವರೂಪ

ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳನ್ನು ಸಾಮಾಜಿಕ ಭಿನ್ನಾಂಶಗಳ ಮೂಲಕ ಅರಿಯುವ ಪ್ರಯತ್ನ ಮಾಡಲು ಹೊರಟಾಗ ಯಾವ್ಯಾವ ಜಾತಿ ವರ್ಗದಲ್ಲಿ ಕನ್ನಡ ಏಕಭಾಷಿಕರು ಮತ್ತು ತೆಲುಗು ಭಾಷಿಕರು ಕಂಡು ಬರುತ್ತಿದ್ದಾರೆ? ಅದರ ಪ್ರಮಾಣ ಎಷ್ಟು? ಯಾವ ಜಾತಿಗಳಲ್ಲಿ ದ್ವಿಭಾಷಿಕತೆಯು ಅನಿವಾರ್ಯವಾಗುತ್ತಿದೆ? ದ್ವಿಭಾಷಿಕತೆಯು ಆ ಜಾತಿಗಳಿಗೆ ಅನಿವಾರ್ಯವೇ? ಅಗತ್ಯವೇ? ಕಸುಬಿನಲ್ಲಿ ಪಲ್ಲಟಗೊಂಡ ಜಾತಿಗಳ್ಯಾವುವು? ಬೇರೊಂದು ವೃತ್ತಿ ಅಥವಾ ಕಸುಬಿಗೆ ಪಲ್ಲಟಗೊಳ್ಳುವ ಸಂದರ್ಭ ಬಂದಾಗ ಅದರ ಜೊತೆಯಲ್ಲಿ ಭಾಷಾ ಪಲ್ಲಟಗಳು ಉಂಟಾಗಿವೆಯೇ? ಉದ್ಯೋಗ ಕಾರಣಕ್ಕಾಗಿಯಾಗಲೀ ಅಥವಾ ವೈವಾಹಿಕ ಕಾರಣಕ್ಕಾಗಿಯಾಗಲಿ ವಲಸೆ ಬಂದವರಲ್ಲಿ ಭಾಷಾ ಪಲ್ಲಟದ ಜೊತೆಗೆ ಭಾಷಾ ಸಂಗೋಪನಾ ಕಾರ್ಯ ಎಷ್ಟರಮಟ್ಟಿಗೆ ನಡೆದಿದೆ? ಜಾತಿ ವರ್ಗಗಳಲ್ಲಿನ ದ್ವಿಭಾಷಿಕರ ನಡುವೆ ಭಿನ್ನತೆಗಳು ಕಂಡು ಬರುತ್ತಿವೆಯಾ? ಇದೇ ದ್ವಿಭಾಷಿಕರಲ್ಲಿ ಲಿಂಗಾಧಾರಿತ ಭಿನ್ನತೆಗಳು ಕಾಣಿಸಿಕೊಂಡಿವೆಯಾ? ಒಂದು ವೇಳೆ ಹಾಗೆ ಕಾಣಿಸಿಕೊಂಡ ಪಕ್ಷದಲ್ಲಿ ಅದಕ್ಕೆ ಕಾರಣಗಳೇನು? ಭಾಷಿಕ ಪಲ್ಲಟಗೊಂಡ ಸಂದರ್ಭದಲ್ಲಿ ತಮ್ಮ ಮೂಲಭಾಷೆ ಅಥವಾ ಸ್ವಭಾಷೆಗಳನ್ನು ಉಳಿಸಿಕೊಳ್ಳುತ್ತಿದ್ದಾರೆಯೇ? ಹಾಗೆ ಉಳಿಸಿಕೊಳ್ಳುತ್ತಿದ್ದರೆ ಅದಕ್ಕೆ ಕಾರಣವಾಗುತ್ತಿರುವ ಅಂಶಗಳಾವುವು? ಜಾತಿವಾರು ಸಂದರ್ಭದಲ್ಲಿ ತಲೆಮಾರುಗಳ ಅಂತರದಲ್ಲಿ ಜರುಗುತ್ತಿರುವ ಬದಲಾವಣೆಗೆ ಕಾರಣಗಳ್ಯಾವುವು? ಹಳ್ಳಿ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಭಾಷಿಕರಲ್ಲಿ ಭಾಷಾ ಭಿನ್ನತೆ ಕಂಡು ಬರುತ್ತಿದೆಯೇ? ಭಿನ್ನತೆ ಕಂಡು ಬಂದಲ್ಲಿ ಅದು ಯಾವ ರೀತಿಯದು? ವಿಭಕ್ತ ಹಾಗೂ ಅವಿಭಕ್ತ ಕುಟುಂಬಗಳಲ್ಲಿನ ಕಾರಣಗಳಿಂದಾಗಿ ಭಾಷೆಯೊಳಗೂ ಬದಲಾವಣೆ ಅಥವಾ ವ್ಯತ್ಯಾಸ ಕಂಡು ಬರುತ್ತಿವೆಯೇ? ಭಾಷಿಕರ ವಯೋಮಾನದ ಕಾರಣವಾಗಿ ದ್ವಿಭಾಷಿಕತೆಯಲ್ಲಿ ವ್ಯತ್ಯಾಸವಾಗುತ್ತಿದೆಯೇ? ಹೀಗೆ ಹಲವು ಹತ್ತು ಪ್ರಶ್ನೆಗಳಿಗೆ ಸಂಶೋಧನೆ ಕೈಗೊಂಡಾಗ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಆಧಾರದ ಮೇಲೆ ಉತ್ತರಗಳನ್ನು ಪಡೆಯಲು ಯತ್ನಿಸಲಾಗಿದೆ. ಜಾತಿವಾರು ವಿಂಗಡಣೆ ಮಾಡಿಕೊಂಡು ಸಂಶೋಧನೆ ಕೈಗೊಂಡ ಸಂದರ್ಭದಲ್ಲಿ ಪೂರಕವಾಗಿ ಕರ್ನಾಟಕ ರಾಜ್ಯ ಗೆಜೆಟಿಯರ್ ಹಾಗೂ ಕರ್ನಾಟಕ ರಾಜ್ಯ ಜನಸಮುದಾಯ ಸಂಪುಟವನ್ನಾಧರಿಸಿ ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತ ದ್ವಿಭಾಷಿಕರು ಹಾಗೂ

ಏಕಭಾಷಿಕರ ಬಗೆಗೆ ಮಾಹಿತಿಯನ್ನು ಆಧರಿಸಿ ಅಂಕಿ-ಅಂಶಗಳ ಸಮೇತ ಕೋಲಾರ ಜಿಲ್ಲೆಯ ಸಾಮಾಜಿಕ ಸಂದರ್ಭದ ದ್ವಿಭಾಷಿಕತೆಯ ಸಂರಚನಾ ಸ್ವರೂಪವನ್ನು ಇಲ್ಲಿ ನಿರೂಪಿಸುವ ಯತ್ನ ಮಾಡಿದೆ. ಕ್ಷೇತ್ರಕಾರ್ಯ ಕೈಗೊಂಡ ಅಂಕಿ-ಅಂಶಗಳ್ನು ಆಧರಿಸಿದ ಕೋಷ್ಟಕ ಈ ಕೆಳಗಿನಂತಿದೆ.

| | |
|---|---|
| ಒಟ್ಟು ದ್ವಿಭಾಷಿಕರು (ಶೇಕಡವಾರು) | ೮೩.೨% |
| ಪುರುಷ ದ್ವಿಭಾಷಿಕರು | ೮೭.೪% |
| ಮಹಿಳಾ ದ್ವಿಭಾಷಿಕರು | ೬೯.೩% |
| ಒಟ್ಟು ಏಕಭಾಷಿಕರು (ಶೇಕಡಾವಾರು) | ೧೬.೮% |
| ಪುರುಷ ಏಕಭಾಷಿಕರು | ೨೮.೬% |
| ಮಹಿಳಾ ಏಕಭಾಷಿಕರು | ೩೨.೩% |

| ಎಲ್ಲಾ ಭಾಷಿಕರು ಶೇಕಡಾವಾರು | ಒಟ್ಟು | ಪುರುಷ | ಮಹಿಳೆ |
|---|---|---|---|
| ಕನ್ನಡ-ತೆಲುಗು ದ್ವಿಭಾಷಿಕರು | ೧೬.೫% | ೧೭.೬% | ೧೮.೩% |
| ತೆಲುಗು-ಕನ್ನಡ ದ್ವಿಭಾಷಿಕರು | ೬೬.೭% | ೬೯.೮% | ೫೧.೦% |
| ಕನ್ನಡ ಏಕಭಾಷಿಕರು | ೬.೮% | ೧೧.೨% | ೧೨.೧% |
| ತೆಲುಗು ಏಕಭಾಷಿಕರು | ೧೦.೦% | ೧೭.೪% | ೨೦.೨% |









ಕೋಲಾರ ಜಿಲ್ಲೆಯ ದ್ವಿಭಾಷಿಕ ಸ್ವರೂಪವನ್ನು ಅರಿಯುವ ನಿಟ್ಟಿನಲ್ಲಿ ಸಾಮಾಜಿಕ ಭಿನ್ನಾಂಶಗಳನ್ನು ಆಧಾರವಾಗಿಟ್ಟುಕೊಂಡು ಪರಿಶೀಲಿಸಿದಾಗ ಜಿಲ್ಲೆಯ ಒಟ್ಟು ದ್ವಿಭಾಷಿಕರ ಪ್ರಮಾಣದಲ್ಲಿ ಮಹಿಳೆಯರು ಹಾಗೂ ಪುರುಷರನ್ನು ತೌಲನಿಕವಾಗಿ ಅವಲೋಕಿಸಿದಾಗ ಪುರುಷರು ಮಹಿಳೆಯರಿಗಿಂತ ಹೆಚ್ಚಾಗಿ ದ್ವಿಭಾಷಿಕರಾಗಿರುವುದು ಕಂಡು ಬಂದಿದೆ. ಆದರೆ ಇದಕ್ಕೆ ವಿರುದ್ಧವಾದ ಫಲಿತಾಂಶ ಏಕ ಭಾಷಿಕರ ಪ್ರಮಾಣದಲ್ಲಿ ಕಂಡು ಬಂದಿದ್ದು, ಮಹಿಳೆಯರು ಪುರುಷರಿಗಿಂತ ಹೆಚ್ಚಾಗಿ ಏಕಭಾಷಿಕರಾಗಿರುವುದು ಕಂಡು ಬಂದಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ದತ್ತಾಂಶಗಳಿಂದ ತೂಗಿ ನೋಡಿದಾಗ ಕನ್ನಡ ಭಾಷಿಕರು ಅಂದರೆ ಕನ್ನಡಿಗರು ತೆಲುಗನ್ನ ಕಲಿತು ದ್ವಿಭಾಷಿಕರಾಗಿರುವುದಕ್ಕಿಂತ ಹೆಚ್ಚಾಗಿ ತೆಲುಗು ಭಾಷೆಯನ್ನಾಡುವವರು ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡವನ್ನು ಕಲಿತು ಕನ್ನಡಿಗರಾಗುತ್ತಿರುವ ಪ್ರಕ್ರಿಯೆ ಹೆಚ್ಚು ಹೆಚ್ಚಾಗಿ ಕಂಡುಬಂದಿದೆ. ಹೀಗಾಗಿ ಲಿಂಗಭೇದವು ಭಿನ್ನತೆಗೆ ಕಾರಣವಾಗಿರುವುದನ್ನು ಗಮನಿಸಲಾಗಿದೆ. ಅದೇ ರೀತಿಯ ಅಂಶಗಳು ಏಕಭಾಷಿಕರ ಸಂದರ್ಭದಲ್ಲೂ ಕಂಡು ಬಂದಿದೆ. ಯಾವ ಕಾರಣಕ್ಕಾಗಿ ಈ ರೀತಿಯ ಭಿನ್ನತೆಗಳುಂಟಾಗಿವೆ ಇವನ್ನು ಗುರ್ತಿಸಲು ಬೇಕಾಗಿರುವ ಮಾನದಂಡಗಳಾವುವು? ಇವೇ ಮುಂತಾದವನ್ನು ತಿಳಿಯಲು ಸಾಮಾಜಿಕ

ಭಿನ್ನಾಂಶಗಳಾದ ಜಾತಿ ಮತ್ತು ಲಿಂಗವನ್ನು ಆಧಾರವಾಗಿಟ್ಟುಕೊಂಡು ಪರಿಶೀಲಿಸಿದಾಗ ದ್ವಿಭಾಷೆಯ ಸ್ವರೂಪದಲ್ಲಿ ವೈವಿಧ್ಯಮಯ ಭಿನ್ನಾಂಶಗಳಿರುವುದು ಪತ್ತೆಯಾಗಿದೆ.

ಕೋಲಾರ ಜಿಲ್ಲೆಯ ಜನಸಮುದಾಯವನ್ನು ಅವಲೋಕಿಸಿದಾಗ ಇಲ್ಲಿ ಪರಿಶಿಷ್ಟ ಜಾತಿ, ವಕ್ಕಲಿಗ, ಬಣಜಿಗ, ಕುರುಬ, ಮುಸ್ಲಿಂ ಜನಾಂಗಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಕೆಳಗಿನ ಕೋಷ್ಟಕವು ಅಂಶವನ್ನು ದೃಢೀಕರಿಸುತ್ತದೆ.

**ಕೋಲಾರ ಜಿಲ್ಲೆಯ ಜಾತಿವಾರು ಕೋಷ್ಟಕ**




**The Encyclopaedic District Gazetteer of India-1997**
**ಅನ್ನು ಆಧರಿಸಿ ಸಿದ್ಧಪಡಿಸಿದ ಕೋಷ್ಟಕ**

**ಪರಿಶಿಷ್ಟ ಜಾತಿ :** ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಲ್ಲಿ ಸಂವಿಧಾನದ ಆರ್ಟಿಕಲ್ ೧೬ (೪ ಎ) ಪ್ರಕಾರ ಪರಿಶಿಷ್ಟ ಜಾತಿಗೆ ಸೇರಿದ ಹೊಲೆಯರ ಒಳಪಂಗಡಗಳಾದ ಮಗ್ಗದ ಹೊಲೆಯರು, ಚಿಂತಲು ಹೊಲೆಯರು, ಸಾವು ಹೊಲೆಯರು, ಮಾದಿಗ ಜನಾಂಗ, ಬೋವಿ (ವಡ್ಡರು) ಜನಾಂಗ, ನಾಯಕ (ಬೇಡ), ಜನಾಂಗಗಳ ಭಾಷಿಕರ ಏಕಭಾಷಿಕ ದ್ವಿಭಾಷಿಕ ಸಂದರ್ಭವನ್ನು ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪರಿಶಿಷ್ಟ ಜಾತಿಗಳು ಜಿಲ್ಲೆಯಲ್ಲಿ ಒಟ್ಟಾರೆ ೨೧%ರಷ್ಟಿವೆ. ಸಂವಿಧಾನದಲ್ಲಿ ಪರಿಶಿಷ್ಟ ಜಾತಿಗಳಿಗೆ ಶೇ.೧೮ ರಷ್ಟು ಮೀಸಲಾತಿ ನೀಡಲಾಗಿದೆ. ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಗಳು ಶೇ.೨೧ ರಷ್ಟಿವೆ.

**ಹೊಲೆಯರು :** ಹೊಲದ ಕೆಲಸಗಾರರನ್ನು ಆಳುಗಳನ್ನು ಕಾಲಾಂತರದಲ್ಲಿ 'ಹೊಲೆಯರು' ಎಂಬುದಾಗಿ ಕರೆಯಲಾಯಿತೆಂದು ಕೆಲವರ ಅಭಿಪ್ರಾಯ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂಲದ ಹೊಲೆಯ ಹಾಗೂ

ಸಾಲದ ಹೊಲೆಯ ಎಂದು ಕಮಲಾಕ್ಷ (೧೯೯೪) ಗುರುತಿಸುತ್ತಿದ್ದಾರೆ. (ಹೆಚ್.ಡಿ.ಪ್ರಶಾಂತ್, ೨೦೦೦ :೧೩೦) ಕೆಂಬಟ್ಟಿ ಹೊಲೆಯರು ಕೊಡಗು ಜಿಲ್ಲೆಯಲ್ಲೂ, ಛಲವಾದಿ, ಮುಕರಿ ಹಾಗೂ ದಾಸರಿ ಹೊಲೆಯರು ರಾಯಚೂರು, ಗುಲಬರ್ಗಾ ಜಿಲ್ಲೆಗಳಲ್ಲೂ ಇದ್ದಾರೆ. ಆದರೆ ಕೋಲಾರ ಜಿಲ್ಲೆಯ ಹೊಲೆಯರನ್ನು 'ಮಗ್ಗದ ಹೊಲೆಯರು', 'ಚಿಂತಲು ಹೊಲೆಯರು', 'ಸಾವು ಹೊಲೆಯರು' ಎಂದು ಕರೆಯಲಾಗುತ್ತದೆ. 'ಮಗ್ಗದ ಹೊಲೆಯರು' ಮನೆಮಾತನ್ನಾಗಿ ಕನ್ನಡ ಭಾಷೆಯನ್ನು ಬಳಸುತ್ತಿರುವುದು, ಚಿಂತಲು ಹಾಗೂ ಸಾವು ಹೊಲೆಯರು ತೆಲುಗನ್ನು ಮನೆಯ ಮಾತನ್ನಾಗಿ ಬಳಸುತ್ತಿರುವುದು ಜಿಲ್ಲೆಯ ವೈಶಿಷ್ಟ್ಯ. ಆದರೆ ಚಿಂತಲು ಹೊಲೆಯಲು ಹಾಗೂ ಸಾವು ಹೊಲೆಯರ ಹೊಸ ಪೀಳಿಗೆಯು ಶಾಲಾ ಕಾಲೇಜು, ಕಛೇರಿ, ಕೋರ್ಟು, ಬ್ಯಾಂಕು ಮುಂತಾದ ವ್ಯಾವಹಾರಿಕ ಕ್ಷೇತ್ರಗಳ ಆವರಣಗಳಲ್ಲಿ ಕನ್ನಡವನ್ನು ಬಳಸುತ್ತಿರುವುದು ಕಂಡು ಬಂದಿದೆ.

ತಮಟೆ ಬಾರಿಸುವುದು, ತೋಟಿ ಕೆಲಸ ಮಾಡುವುದು ಇವೇ ಮೊದಲಾದ ಸಾಂಪ್ರದಾಯಿಕ ವೃತ್ತಿಗಳನ್ನು ನಿರ್ವಹಿಸುತ್ತಿದ್ದ ಹೊಲೆಯರು ಇತ್ತೀಚೆಗೆ ಕೃಷಿಕಾರ್ಮಿಕರಾಗಿ, ವ್ಯವಸಾಯ, ಸರ್ಕಾರಿ ಉದ್ಯೋಗಗಳಿಗೆ ಪಲ್ಲಟವಾಗಿದ್ದಾರೆ. ಅಷ್ಟೇ ಅಲ್ಲದೆ ಪತ್ರಿಕೋದ್ಯಮ, ಜನಪದ ಸಂಗೀತಕ್ಷೇತ್ರಗಳಲ್ಲಿ ಕನ್ನಡವನ್ನು ಈ ಜನಾಂಗದ ಕೆಲವರು ಬೆಳೆದು ನಿಂತು ಬಳಸುತ್ತಿರುವುದು ಕನ್ನಡ ಭಾಷಾ ಅಭಿವೃದ್ಧಿಗೆ ಕಾರಣವಾಗಿದೆ. ಇತ್ತೀಚಿನ ದಿನಗಳಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಹಾಗೂ ರಾಜ್ಯದ ಉನ್ನತ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಳ್ಳುತ್ತಿದ್ದಾರೆ.

**ಬೋವಿ :** ಬೋವಿ, ವಡ್ಡ ಎಂಬ ಹೆಸರೂ ಈ ಜನಾಂಗಕ್ಕೆ ಇದೆ. ಬಾವಿ ಎನ್ನುವುದರ ವಿಕಲ್ಪರೂಪ ಬೋವಿ ಇರಬೇಕು. ಬಾವಿ ತೋಡುವವರು ಎಂಬು ಕಾರಣಕ್ಕೆ ಈ ಪದ ಬಂದಿರಬಹುದು. ಮಣ್ಣು ಅಗೆಯುವುದು, ಕಲ್ಲು ಒಡೆಯುವುದು, ಕೆರೆ, ಬಾವಿ ತೋಡುವುದು ಮೊದಲಾದ ಸಾಂಪ್ರದಾಯಿಕ ವೃತ್ತಿಯನ್ನವಲಂಬಿಸಿದ್ದ ಇವರು ಬೇರೆ ಬೇರೆ ಉದ್ಯೋಗಗಳಿಗೆ ಪಲ್ಲಟವಾಗಿರುವುದು ಕಂಡುಬಂದಿದೆ. ವೃತ್ತಿಯನ್ನು ಆಧರಿಸಿ ಮಣ್ಣು ವಡ್ಡರು, ಕಲ್ಲು ವಡ್ಡರು, ಉಪ್ಪು ವಡ್ಡರು ಮುಂತಾದ ಒಳಪಂಗಡಗಳಿವೆ. ಜಿಲ್ಲೆಯ ಪುರಸಭೆ, ನಗರ ಸಭೆಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಈ ಜನಾಂಗದವರು ಊರ ನೈರ್ಮಲ್ಯವನ್ನು ಕಾಪಾಡುವ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು. ಬ್ಯಾಂಕ್, ಶಾಲಾ ಕಾಲೇಜುಗಳಲ್ಲಿನ ನೌಕರಿಗಳಿಗೆ ಪಲ್ಲಟವಾಗಿರುವುದು ಕಂಡು ಬರುತ್ತದೆ. ಹೆಚ್ಚೇನೂ ಸಾಕ್ಷರತೆ ಸಾಧಿಸದ ಇವರು ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ ತೆಲುಗು ಮನೆಯ ಮಾತಾದರೂ ಕನ್ನಡವನ್ನು ಹೆಚ್ಚಾಗಿ ಬಳಸುವುದು ಕಂಡು ಬಂದಿದೆ.

**ಮಾಷ್ಟೀಕ :** ಪರಿಶಿಷ್ಟರಲ್ಲಿನ ಒಂದು ಉಪಜಾತಿ, ಮಾಷ್ಟೀಕರಲ್ಲಿ ಹೊಲೆಯ ಮಾಷ್ಟೀಕ ಮತ್ತು ಮಾದಿಗ ಮಾಷ್ಟೀಕರೆಂಬ ಒಳ ಪ್ರಭೇದಗಳಿವೆ. ತಮ್ಮನ್ನು 'ಮಾದಿಗ ಹೊಲೆಯರ' ಮಕ್ಕಳೆಂದು ಸಾಂಪ್ರದಾಯಿಕವಾಗಿ

ಕರೆದುಕೊಳ್ಳುವ ಇವರು ಕೋಲಾರವಷ್ಟೇ ಅಲ್ಲದೆ ಗುಲಬರ್ಗಾ, ರಾಯಚೂರು, ಬೀದರ, ಬಳ್ಳಾರಿ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. 'ಮಹಾರೀಕ್' ಎಂಬ ಹೊಗಳಿಕೆಯ ಪದ ಕಾಲಕ್ರಮೇಣ 'ಮಾಚ್ಛೀಕ್' ಎಂದಾಗಿದೆ. ಈ ಹಿಂದೆ ರಾಜಾಶ್ರಯಗಳಲ್ಲಿ ಮಾವುತ, ಕುಸ್ತಿ ಪೈಲ್ವಾನ, ಸರ್ಕಸ್ಸಿನ ಕಲಾವಿದರಾಗಿದ್ದ ಇವರು ಒಂದು ಕಾಲಕ್ಕೆ ಅಲೆಮಾರಿ ಜನಾಂಗ. ತೆಲುಗು ತಮಿಳನ್ನು ಮಾತನಾಡುವ ಇವರು ಕನ್ನಡವನ್ನು ವ್ಯವಹಾರಿಕ ನೆಲೆಯಲ್ಲಿ ಬಳಸುವ ಕೌಶಲ್ಯವನ್ನು ಪಡೆದಿದ್ದಾರೆ. ಅಲ್ಲದೆ 'ತಾಂಬ್ರಾ' ಎಂಬ ತಮ್ಮದೇ ಲಿಪಿರಹಿತ ರಹಸ್ಯ ಭಾಷೆ ಬಳಸುವುದಾಗಿ ತಿಳಿದು ಬಂದಿದೆ.

**ಸಿಂದ್ ಮಾದಿಗ :** ಜಿಲ್ಲೆಯ ಚಿಂತಾಮಣಿ, ಮಾಲೂರು, ಕೋಲಾರ ತಾಲೂಕುಗಳಲ್ಲಿ ನೆಲೆ ನಿಂತಿರುವ ಸಿಂದ್ ಅಥವಾ ಚಿಂದ್ ಮಾದಿಗರು ಮೂಲತಃ ಆಂಧ್ರ ಪ್ರದೇಶದ ತೆಲಂಗಾಣದಿಂದ ವಲಸೆ ಬಂದವರಾಗಿದ್ದಾರೆ. ಮಾದಿಗರ ಒಂದು ಉಪಪಂಗಡವಾದ ಇವರ ಆಡುಭಾಷೆ ಅಥವಾ ಮನೆಯ ಭಾಷೆ ತೆಲುಗು. ಈ ಹಿಂದೆ ಚಿಂದ್ ಭಾಗವತರೆಂಬ ಹೆಸರಲ್ಲಿ ನಾಟಕಾಭಿನಯ ಕುಲಕಸುಬಾಗಿತ್ತೆಂದು ತಿಳಿದು ಬರುತ್ತದೆ. ಇತ್ತೀಚೆಗೆ ಕೃಷಿಕಾರ್ಮಿಕರಾಗಿ, ಗಾರೆ ಕೆಲಸ ವೃತ್ತಿಗಳನ್ನು ಅವಲಂಬಿಸಿರುವುದು ಕಂಡು ಬಂದಿದೆ. ಕನ್ನಡವನ್ನು ವ್ಯವಹಾರಿಕ ಆವರಣಗಳಲ್ಲಿ ಬಳಸುವುದರಲ್ಲಿ ಕೌಶಲ್ಯ ಸಾಧಿಸಿದ್ದಾರೆ.

| | ಒಟ್ಟು ಭಾಷಿಕರು | ಪುರುಷ | ಮಹಿಳೆ |
|---|---|---|---|
| ಕನ್ನಡ ಏಕಭಾಷಿಕರು | ೪.೨% | ೨.೦% | ೨.೫% |
| ತೆಲುಗು ಏಕಭಾಷಿಕರು | ೨೦.೩% | ೧೬.೦% | ೨೨.೨% |
| ಕನ್ನಡ ತೆಲುಗು ದ್ವಿಭಾಷಿಕರು | ೧೮.೫% | ೨೩.೯% | ೧೮.೦% |
| ತೆಲುಗು ಕನ್ನಡ ದ್ವಿಭಾಷಿಕರು | ೭೦.೫% | ೭೮.೭% | ೬೫.೪% |

ಅಂಕಿ-ಅಂಶಗಳನ್ನು ಗಮನಿಸಿದಾಗ ಕೆಲವು ಭಿನ್ನ ರೀತಿಯ ಅಂಶಗಳಿರುವುದು ಕಂಡು ಬಂದಿದೆ. ಕನ್ನಡ ಏಕಭಾಷಿಕರು ಮಗ್ಗದ ಹೊಲೆಯರಲ್ಲಿ ಮಾತ್ರ ಕಂಡು ಬರುತ್ತಿದ್ದು ಸಂಖ್ಯೆಯಲ್ಲಿ ಬಹಳಷ್ಟು ಕಡಿಮೆಯಿರುವುದು ಕಂಡು ಬರುವ ಸಂಗತಿಯಾಗಿದೆ. ಆದರೆ ಚಿಂತಲು ಹೊಲೆಯರು, ಸಾವು ಹೊಲೆಯರಲ್ಲಿ ಹೆಚ್ಚಿನ ಭಾಷಿಕರ ಮನೆಯ ಮಾತು ತೆಲುಗುಭಾಷೆಯಾಗಿದೆ. ತೆಲುಗು ಏಕಭಾಷಿಕರ ಪ್ರಮಾಣ ಕನ್ನಡ ಏಕ ಭಾಷಿಕರಿಗಿಂತ ಹೆಚ್ಚಿದೆ. ಕನ್ನಡ ಏಕಭಾಷಿಕರ ಪ್ರಮಾಣ ೪.೨%ರಷ್ಟು ಇದ್ದರೆ ತೆಲುಗು ಪ್ರಮಾಣ ೨೦.೩%ರಷ್ಟಿದೆ. ಇದಕ್ಕೆ ಕಾರಣ ಕೋಲಾರ ಪ್ರದೇಶ ಹಿಂದೆ ಈಗಿನ ಆಂಧ್ರದ ಚಿತ್ತೂರು ಜಿಲ್ಲೆಗೆ ಸೇರಿತ್ತು. ಹೀಗಾಗಿ ಈಗಲೂ ಸ್ಥಳೀಯವಾಗಿ ತೆಲುಗು ಭಾಷೆಯ ದಟ್ಟ ಪ್ರಭಾವವಿದೆ. ಇಲ್ಲಿನ ತೆಲುಗು-ಕನ್ನಡ ಬಹುತೇಕ ಭಾಷಿಕರು ಹುಟ್ಟಿನಿಂದಲೇ ತೆಲುಗು ಕನ್ನಡ ಭಾಷೆಯನ್ನು ಕಲಿತವರಾಗಿದ್ದು, ಇಲ್ಲಿ 'ಸಹಜ ದ್ವಿಭಾಷಿಕತೆ'ಯ ಅಂಶ ಕಂಡುಬಂದಿವೆ. ಕನ್ನಡ-ತೆಲುಗು ದ್ವಿಭಾಷಿಕರ ಪ್ರಮಾಣ ೧೮.೫%

## ಪರಿಶಿಷ್ಟ ಜಾತಿಗಳ ಭಾಷಿಕರ ಕೋಷ್ಟಕ



ಇದ್ದರೆ ತೆಲುಗು-ಕನ್ನಡ ಭಾಷಿಕರ ಪ್ರಮಾಣ ೭೦.೫೫% ರಷ್ಟು ಇದೆ ಎನ್ನುವುದು ಜಿಲ್ಲೆಯಲ್ಲಿ ತೆಲುಗಿನ ಪ್ರಭಾವ ದಟ್ಟವಾಗಿದೆ ಎಂಬುದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕ ಸರ್ಕಾರ ಆಡಳಿತದಲ್ಲಿ ಕನ್ನಡ ಜಾರಿಗೊಳಿಸಿವುದು, ಕನ್ನಡವನ್ನು ಕಲಿಕೆಯ ಸಂದರ್ಭದಲ್ಲಿ ಜಾರಿಗೊಳಿಸುವುದರಿಂದ ಹೆಚ್ಚಿನ ಸಂಖ್ಯೆಯ ತೆಲುಗು ಜನರು ಕನ್ನಡ ಕಲಿಯುವತ್ತ ಆಸಕ್ತಿ ತೋರಿದ್ದಾರೆ. ಬೋವಿ ಜನಾಂಗದವರು ಮನೆಯ ಮಾತನ್ನಾಗಿ ತೆಲುಗನ್ನೇ ಹೆಚ್ಚಾಗಿ ಬಳಸುತ್ತಿದ್ದು, ಕನ್ನಡವನ್ನು ಹೊರ ಆವರಣಗಳಲ್ಲಿ ಬಳಸುತ್ತಿರುವುದು ಕಂಡು ಬಂದಿದೆ. ಇವರಲ್ಲನೇಕರು ನಗರಸಭೆ, ಪುರಸಭೆಗಳಲ್ಲಿ ಕಾರ್ಯನಿರ್ವಹಿಸುವ ಸಂದರ್ಭಗಳಲ್ಲಿ ಮೇಲಾಧಿಕಾರಿಗಳ ಬಳಿ ಮಾತನಾಡುವಾಗ, ಕಛೇರಿಯ ಆವರಣಗಳಲ್ಲಿ ಕನ್ನಡವನ್ನು ಬಳಸುವುದು ಕಾಣಬರುತ್ತಿದೆ. ತಮ್ಮ ಮಕ್ಕಳನ್ನು ಶಾಲೆಗಳಿಗೆ ಸೇರಿಸಿದ್ದು, ಮಕ್ಕಳು ಕಲಿಕೆಯ ಮೂಲಕ ಕನ್ನಡ ಸಾಕ್ಷರತೆಗೆ ಒಳಗಾಗುತ್ತಿದ್ದಾರೆ. ಇವರಲ್ಲಿ ಅನೇಕರು ಬ್ಯಾಂಕ್, ರೆವಿನ್ಯೂ ಇಲಾಖೆ, ಸಮಾಜ ಕಲ್ಯಾಣ ಇಲಾಖೆಗಳಲ್ಲಿ ಉದ್ಯೋಗಸ್ಥರಾಗಿದ್ದಾರೆ. ಇಲ್ಲೆಲ್ಲಾ ಕನ್ನಡ ಬಳಕೆ ಹೆಚ್ಚಾಗಿದೆ. ತೆಲುಗು ಕನ್ನಡ ದ್ವಿಭಾಷಿಕರು ಶೇ.೭೦.೫ರಷ್ಟು ಕಂಡು ಬಂದಿದ್ದು ಶಿಕ್ಷಣ ಸಂದರ್ಭದಲ್ಲಿ ವ್ಯಾಪಾರ ವಹಿವಾಟು, ಕೂಲಿಕಾರ್ಮಿಕರಾಗಿ ಕೆಲಸ ಮಾಡುವ ಸಂದರ್ಭದಲ್ಲಿ ಕನ್ನಡ ಭಾಷೆಯತ್ತ ಪಲ್ಲಟಗೊಳ್ಳುತ್ತಿರುವುದು ಗೋಚರಿಸುತ್ತಿದೆ. ಬಹುತೇಕ ಮಹಿಳೆಯರು ತೆಲುಗು ಏಕಭಾಷಿಕರಾಗಿದ್ದರೂ ಶೇ.೨೨.೨% ಮಕ್ಕಳ ಕನ್ನಡ ಸಾಕ್ಷರತೆಯ ಕಾರಣಕ್ಕಾಗಿ ಅವರೊಡನೆ ಕನ್ನಡದಲ್ಲಿ ಮೌಖಿಕ ನೆಲೆಯಲ್ಲಿ ಸಂಭಾಷಿಸುವುದು ಕಂಡು ಬಂದಿದೆ. ಆದರೆ ಬಹಳಷ್ಟು ಜನ ಕಟ್ಟಡ ಕಾರ್ಮಿಕರಾಗಿ, ಕೃಷಿಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದು ಅನಕ್ಷರಸ್ಥರಾಗಿ ಉಳಿದಿರುವ ಕಾರಣ ಮೌಖಿಕ ನೆಲೆಯಲ್ಲಿ ಕನ್ನಡವನ್ನು ಕಲಿತು ಬಳಸುತ್ತಿರುವುದು ಕಂಡು ಬಂದಿದೆ.

**ಪರಿಶಿಷ್ಟ ಪಂಗಡಗಳು**

ಬೆಟ್ಟವಾಸಿಗಳು, ಅರಣ್ಯವಾಸಿಗಳು ಸಾಮಾನ್ಯವಾಗಿ ಬುಡಕಟ್ಟು ವರ್ಗದವರಾಗಿದ್ದು, ಇಂತಹ ಬುಡಕಟ್ಟುಗಳನ್ನು ಪರಿಶಿಷ್ಟ ಪಂಗಡದವರೆಂದು ಪರಿಗಣಿಸಲಾಗಿದೆ. ಸಂವಿಧಾನದತ್ತವಾಗಿ ಇವರಿಗೆ ೩ ರಷ್ಟು ಮೀಸಲಾತಿ ಇದೆ. ಸಾಮಾಜಿಕ ಅಸಮತೋಲನ ನಿವಾರಿಸಲು ಈ ಮೀಸಲಾತಿ ನೆರವಿಗೆ ಬಂದಿದ್ದು, ಇದರಿಂದ ಸಾಮಾಜಿಕವಾಗಿ ತಳವರ್ಗದ ಜಾತಿ ಬುಡಕಟ್ಟುಗಳು ಮೇಲ್ಮುಖವಾಗಿ ಏರಲು ಕಾರಣವಾಗಿದೆ. ಜಿಲ್ಲೆಯಲ್ಲಿ ಪರಿಶಿಷ್ಟವರ್ಗಗಳ ೫%ರಷ್ಟಿವೆ.

**ಬೇಡ (ನಾಯಕ) :** ನಾಯಕ, ತಳವಾರ, ಬೆಂಡ, ಬೇಡ, ವಾಲ್ಮೀಕಿ, ಬ್ಯಾಡರು, ನಾಯಕವಾಡಿ, ರಾಮೋಸಿ, ಬೇಡಾರ, ನ್ಯಾಕ ಮತ್ತು ಬೋಯರೆಂದು ಕರೆಯಲಾಗುವ ಬೇಡರು ಮೂಲತಃ ಅರಣ್ಯವಾಸಿಗಳು ಬೇಟೆ ಅವರ ಪ್ರಮುಖ ಜೀವನೋಪಾಯದ ಕಸುಬಾಗಿತ್ತು. ಆದ್ದರಿಂದ ಇವರನ್ನು 'ಬೇಡ'ರೆಂದು ಕರೆಯಲಾಗುತ್ತದೆ. ವಾಲ್ಮೀಕಿ ತಮ್ಮ ಪೂರ್ವಜರೆಂದು ಗುರುತಿಸಿಕೊಳ್ಳುವುದರಿಂದ ತಾವು ವಾಲ್ಮೀಕಿ ಜಾತಿಯವರೆಂದು

ಹೇಳಿಕೊಳ್ಳುವುದುಂಟು. ಉತ್ತರ ಕರ್ನಾಟಕದಲ್ಲಿ ಇವರು ಕನ್ನಡ ಭಾಷೆ ಲಿಪಿಯನ್ನು ಹೆಚ್ಚಾಗಿ ಬಳಸಿದರೆ ಕೋಲಾರ ಜಿಲ್ಲೆಯಲ್ಲಿ ಇದಕ್ಕೆ ತದ್ವಿರುದ್ಧವಾದ ವಿದ್ಯಮಾನ ಕಂಡು ಬಂದಿವೆ. ಇಲ್ಲಿನ ನಾಯಕ ಅಥವಾ ಬೇಡ ಜನಾಂಗದವರು ಜಿಲ್ಲೆಯ ಬಾಗೇಪಲ್ಲಿ, ಶಿಡ್ಲಘಟ್ಟ, ಚಿಂತಾಮಣಿ, ಗೌರಿಬಿದನೂರು, ಗುಡಿಬಂಡೆ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಕಂಡುಬಂದರೂ ಕೋಲಾರ, ಮುಳಬಾಗಿಲು, ಮಾಲೂರು, ಶ್ರೀನಿವಾಸಪುರ ಮುಂತಾದ ಕಡೆಗಳಲ್ಲಿ ಹರಡಿಹೋಗಿದ್ದಾರೆ. ಸರ್ಕಾರಿ ಉದ್ಯೋಗಗಳಿಗೆ ವೃತ್ತಿಪಲ್ಲಟವಾಗಿರುವುದು ಕಂಡು ಬರುತ್ತದೆ. ವ್ಯವಸಾಯ, ಕೃಷಿಕಾರ್ಮಿಕರಾಗಿ, ಕಾರ್ಖಾನೆಗಳಲ್ಲಿ ಈ ವರ್ಗದ ಜನರು ಹೆಚ್ಚಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ.

ಬಹುತೇಕ ಮನೆಯ ಅವರಣದ ಆಡುಭಾಷೆ ತೆಲುಗಾಗಿದ್ದು, ಕನ್ನಡವನ್ನು ಬಳಸುವಲ್ಲಿ ಭಾಷಾಕೌಶಲ್ಯವನ್ನು ಮೈಗೂಡಿಸಿಕೊಂಡಿದ್ದಾರೆ.

**ಮೇದ :** ಮೇದಾರ, ಮ್ಯಾದರು, ಮೇದ ಮುಂತಾಗಿ ಕರೆಯಲಾಗುವ ಮೇದರು ಕೋಲಾರ, ಗುಲ್ಬರ್ಗಾ, ಧಾರವಾಡ ಕೊಪ್ಪಳ, ಬಳ್ಳಾರಿ ಹಾವೇರಿ, ಮುಂತಾದ ಕಡೆಗಳಲ್ಲಿ ಕಾಣಸಿಗುತ್ತಾರೆ. ತಮಿನೇನಿ, ಕನಿಕರುವು, ಸೀರ್ಪು, ಪೊಲ್ಲೆಪಲ್ಲಿ, ಮಂಡಿಮಿ, ತಾಳೆ, ಕಂಚಮ, ಊಟಕೋಟ, ಮೊದಲಾದ ಒಳಪಂಗಡಗಳಿರುವುದು ಕಂಡು ಬಂದಿದೆ. ಅಲೆಮಾರಿ ಜನಾಂಗವಾದ ಮೇದಾರರು ಮೂಲತಃ ಆಂಧ್ರವಾಸಿಗಳಾಗಿದ್ದು ವಲಸೆ ಬಂದವರಾಗಿದ್ದಾರೆ. ಜಿಲ್ಲೆಯ ಮೇದರು ತೆಲುಗು ಮನೆಯ ಮಾತನ್ನಾಗಿ ಬಳಸಿದರೂ ಕನ್ನಡ ಬಲ್ಲವರಾಗಿದ್ದಾರೆ. ಇವರ ಕುಲಕಸುಬಾದ ಬಿದಿರು ಮತ್ತು ಬೆತ್ತಗಳಿಂದ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವ ಕಾರ್ಯದಲ್ಲಿ ನಿರತವಾಗಿರುವ ಇವರು ಜಿಲ್ಲೆಯ ಪ್ರಸಿದ್ಧ ರೇಷ್ಮೆ ಕೈಗಾರಿಕೆಗೆ ಬೇಕಾಗುವ 'ಚಂದ್ರಂಕಿ'(ಚಂದ್ರಿಕೆ)ಗಳನ್ನು ತಯಾರಿಸುವುದರಲ್ಲಿ ಸಿದ್ಧಹಸ್ತರು. ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವ ಇವರು ಇತ್ತೀಚೆಗೆ ಸಣ್ಣಪುಟ್ಟ ಸರ್ಕಾರಿ ಉದ್ಯೋಗ ಹಾಗೂ ಸರ್ಕಾರೇತರ ಉದ್ಯೋಗಗಳತ್ತ ಪಲ್ಲಟವಾಗಿರುವುದ ಕಂಡು ಬರುತ್ತದೆ.

| | ಒಟ್ಟು ಭಾಷಿಕರು | ಪುರುಷರು | ಮಹಿಳೆಯರು |
|---|---|---|---|
| ಕನ್ನಡ ಏಕಭಾಷಿಕರು | ೫.೨% | ೫.೪% | ೪.೬% |
| ತೆಲುಗು ಏಕಭಾಷಿಕರು | ೧೮.೮% | ೧೭.೬% | ೧೬.೨% |
| ಕನ್ನಡ-ತೆಲುಗು ದ್ವಿಭಾಷಿಕರು | ೧೬.೯% | ೧೪.೧% | ೮.೭% |
| ತೆಲುಗು-ಕನ್ನಡ ದ್ವಿಭಾಷಿಕರು | ೨೦.೩% | ೨೭.೭% | ೨೦.೦% |

ಇಲ್ಲಿನ ಅಂಕಿ-ಅಂಶಗಳ ಆಧಾರದ ಮೇಲೆ ಕನ್ನಡ ಏಕಭಾಷಿಕರು ಸಂದರ್ಭವನ್ನು ಗಮನಿಸಿದಾಗ ಹೊಸ ತಲೆಮಾರಿನ ವಿಭಕ್ತ ಕುಟುಂಬಗಳು ಕನ್ನಡ ಏಕಭಾಷಿಕವಾಗಿರುವುದು ಕಂಡು ಬರುತ್ತದೆ. ನಾಯಕ


ಪರಿಶಿಷ್ಟ ಪಂಗಡಗಳ ಭಾಷಿಕರ ಕೋಷ್ಟಕ
80
70
60
50
40
30
20
10
0
5.7
5.4
4.6
18.8
12.6
16.7
16.9
14.1
8.2
70.3
72.2
70
ಕನ್ನಡ ಏಕಭಾಷಿಕರು
ತೆಲುಗು ಏಕಭಾಷಿಕರು
ಕನ್ನಡ ತೆಲುಗು ದ್ವಿಭಾಷಿಕರು
ತೆಲುಗು ಕನ್ನಡ ದ್ವಿಭಾಷಿಕರು
ಒಟ್ಟು ಭಾಷಿಕರು
ಪುರುಷರು
ಮಹಿಳೆಯರು

ಜನಾಂಗದವರಲ್ಲಿ ಈ ರೀತಿ ಕಂಡು ಬರುತ್ತಿದ್ದು ಹೊಸ ಪೀಳಿಗೆಯ ತಲೆಮಾರಿನವರು ವೈದ್ಯಕೀಯ, ಇಂಜಿನಿಯರಿಂಗ್ ಶಿಕ್ಷಣ ಪಡೆದ ಕುಟುಂಬಗಳಲ್ಲಿನ ಸದಸ್ಯರು ತಮ್ಮ ಮೂಲ ತೆಲುಗನ್ನು ಮರೆತಿದ್ದು ಕನ್ನಡ ಏಕಭಾಷಿಕರಾಗಿರುವುದು ಗೋಚರಿಸುತ್ತದೆ. ಉನ್ನತ ಶಿಕ್ಷಣ ಪಡೆದಿರುವ ಇವರು ಕನ್ನಡದ ಜೊತೆಗೆ ಇಂಗ್ಲಿಷ್‌ನ್ನು ಮೌಖಿಕ ಹಾಗೂ ಸಾಕ್ಷರತೆಯ ನೆಲೆಗಳಲ್ಲಿ ಬಳಸುತ್ತಿರುವುದು ಕಂಡು ಬಂದಿದೆ. ಕನ್ನಡ ಏಕಭಾಷಿಕರು ಶೇ.೫.೭ರಷ್ಟು ಕಂಡು ಬಂದರೆ ತೆಲುಗು ಏಕಭಾಷಿಕರು ೧೮.೮%ರಷ್ಟು ಇರುವುದು ಕಂಡು ಬಂದಿದೆ. ಇದಕ್ಕೆ ಕಾರಣಗಳ್ನು ಹುಡುಕಿದಾಗ ಇವರಲ್ಲಿ ಬಹಳಷ್ಟು ಮಹಿಳೆಯರು (೧೬.೭%) ತಮ್ಮ ಪರಿಸರದಿಂದ ಹೊರಗೆ ಬಾರದೆ ಕೇವಲ ಕುಟುಂಬ ಆವರಣದಲ್ಲೇ ಉಳಿದಿರುವುದು. ಇವರಲ್ಲಿ ಕೆಲವರು ಮಾತ್ರ ಗ್ರಹಿಕೆಯ ನೆಲೆಯಲ್ಲಿಯೇ ಕನ್ನಡವನ್ನು ಬಲ್ಲವರಾಗಿದ್ದಾರೆ. ಕನ್ನಡ-ತೆಲುಗು ದ್ವಿಭಾಷಿಕರಿಗಿಂತ ತೆಲುಗು-ಕನ್ನಡ ದ್ವಿಭಾಷಿಕರು ೭೦.೩%ರಷ್ಟಿದ್ದಾರೆ. ಇವರಲ್ಲಿ ಬಹಳಷ್ಟು ಪುರುಷರು (೭೨.೨%) ದ್ವಿಭಾಷಿಕರಾಗಿರುವುದು ಕಾಣುತ್ತದೆ. ಹೊರಗಿನ ಸಂಪರ್ಕ ಹೆಂಗಸರಿಗಿಂತ ಈ ಸಮುದಾಯಗಳ ಗಂಡಸರಿಗೆ ಇರುವುದರಿಂದಲೂ ಕನ್ನಡವನ್ನು ವ್ಯವಹಾರಿಕ ಕಾರಣಗಳಿಗಾಗಿ ಕಲಿಯಬೇಕಾದ ಒತ್ತಡ ಅನಿವಾರ್ಯತೆಗಳು ಸೃಷ್ಟಿಯಾಗಿರುವುದರಿಂದಲೂ ಇವರು ದ್ವಿಭಾಷಿಕರಾಗಲು ಕಾರಣವಾಗಿದೆ. ಲಿಂಗಭಿನ್ನತೆಯನ್ನು ಆಧಾರವಾಗಿಟ್ಟುಕೊಂಡು ನೋಡಿದರೆ ಪುರುಷರಿಗೂ ಮಹಿಳೆಯರಿಗೂ ೨.೨ ಮಾತ್ರ ವ್ಯತ್ಯಾಸವಿರುವುದು ಕಾಣುತ್ತದೆ.

ಈ ಸಮುದಾಯದವರಲ್ಲಿ ದ್ವಿಭಾಷಿಕರಾಗುವ ಪ್ರಮಾಣ ಹೆಚ್ಚುತ್ತಿರುವುದು ಯಾವ ಕಾರಣಕ್ಕಾಗಿ ಎಂಬ ಅಂಶವನ್ನು ಪರಿಶೀಲಿಸಿದಾಗ ಉದ್ಯೋಗದ ನೇಮಕಾತಿಯಲ್ಲಿ ೫% ಕನ್ನಡ ಮಾಧ್ಯಮದವರಿಗೆ ಮೀಸಲಾತಿ ನೀಡಿರುವುದರಿಂದ ಈ ಸಮುದಾಯದ ತೆಲುಗು ಭಾಷಿಕರು ಕನ್ನಡ ಕಲಿಯುವ ಪ್ರೇರಣೆ ನೀಡಿದೆ. ಹೀಗಾಗಿ ಸಾಮಾಜಿಕವಾಗಿ ಮೇಲ್ಮುಖವಾಗಿ ಚಲಿಸಲು ಸರ್ಕಾರಿ ಆದೇಶ ಕೂಡ ಕಾರಣವಾಗಿದೆಯೆಂಬ ಅಂಶ ಸುಸ್ಪಷ್ಟ. ಸಾಮಾಜಿಕ ಹಾಗೂ ಆರ್ಥಿಕ ನೆಲೆಯಲ್ಲಿ ಭದ್ರತೆ ಪಡೆಯಲು ಈ ಸಮುದಾಯಗಳು ಕನ್ನಡ ಮತ್ತು ಇಂಗ್ಲೀಷನ್ನು ಸಾಕ್ಷರತೆಯ ನೆಲೆಯಲ್ಲಿ ಹೆಚ್ಚಾಗಿ ಬಳಸುತ್ತಿರುವುದು ಕಂಡು ಬಂದಿವೆ. ಬಹಳಷ್ಟು ತೆಲುಗು ಕನ್ನಡ ದ್ವಿಭಾಷಾ ಮಹಿಳೆಯರಲ್ಲಿ ಭಾಷಾ ಸಂಗೋಪನೆ ನಡೆದಿರುವುದು ಕಾಣುತ್ತದೆ. ಬೇಟೆ ಸಾಂಪ್ರದಾಯಿಕ ವೃತ್ತಿಯಾಗಿಸಿಕೊಂಡಿದ್ದ ನಾಯಕರಾಗಲಿ, ಬುಟ್ಟಿ ಬೆತ್ತ ಹೆಣೆಯುವ ಕಾಯಕದಲ್ಲಿ ತೊಡಗಿರುವ ಮೇದರಾಗಲಿ ತಮ್ಮ ಮೂಲ ಭಾಷೆಯನ್ನು ಮರೆತು ಕನ್ನಡ ಭಾಷಾ ನೆಲೆಗಳಿಗೆ ಪಲ್ಲಟವಾಗುತ್ತಿರುವುದು ಕಾಣಬರುತ್ತದೆ. ಈ ಭಾಷಾ ಪಲ್ಲಟದ ಕಾರಣವಾಗಿ ಬಹಳಷ್ಟು ಮಂದಿ ಸರ್ಕಾರದಲ್ಲಿ ಉದ್ಯೋಗ ಗಿಟ್ಟಿಸುವಲ್ಲ ಸಫಲರಾಗಿದ್ದಾರೆ.

**ಒಕ್ಕಲಿಗ :** ಜಿಲ್ಲೆಯ ಜನಸಂಖ್ಯೆಯಲ್ಲಿ ೨೧%ರಷ್ಟಿರುವ ಒಕ್ಕಲಿಗರ ಸಾಂಪ್ರದಾಯಿಕ ಕಸಬು ವ್ಯವಸಾಯವಾಗಿದೆ. ಜಿಲ್ಲೆಯ ಒಕ್ಕಲಿಗರಲ್ಲಿ ಮೊರಸು ಒಕ್ಕಲಿಗ, ಮುಸುಕು ಒಕ್ಕಲಿಗ, ರೆಡ್ಡಿ ಒಕ್ಕಲಿಗ,

ದಾಸ ಒಕ್ಕಲಿಗ ಅಥವಾ ಪೂಜಾರಿ ಒಕ್ಕಲಿಗ, ಸಾದ, ಕುಂಚಟಿಗ ಒಕ್ಕಲಿಗ ಮೊದಲಾದ ಒಳಪಂಗಡಗಳು ಕಂಡು ಬರುತ್ತವೆ. ಮೊರಸು ಒಕ್ಕಲಿಗರು ಮೂಲತಃ ಕರ್ನಾಟಕದವರೇ ಆಗಿದ್ದು, ರೆಡ್ಡಿ ಒಕ್ಕಲಿಗರು ಮಾತ್ರ ಆಂಧ್ರದಿಂದ ವಲಸೆ ಬಂದವರಾಗಿದ್ದಾರೆ. ವ್ಯವಸಾಯವಷ್ಟೇ ಅಲ್ಲದೆ ಜಿಲ್ಲೆಯ ರಾಜಕೀಯ ಕ್ಷೇತ್ರದಲ್ಲಿ ಪ್ರಭಾವಿಗಳಾಗಿದ್ದಾರೆ. ಶೈಕ್ಷಣಿಕ, ಆರ್ಥಿಕ ಕ್ಷೇತ್ರದಲ್ಲಿ ಬಲಾಢ್ಯವಾಗಿರುವ ಇವರು ಸಾಮಾಜಿಕವಾಗಿ ಹೆಚ್ಚು ಮುಂದುವರಿದವರೆಂದು ಜಸ್ಟೀಸ್ ವೆಂಕಟಸ್ವಾಮಿ ಆಯೋಗ, ಜಸ್ಟೀಸ್ ಓ. ಚಿನ್ನಪ್ಪರೆಡ್ಡಿ ಹಿಂದುಳಿದ ವರ್ಗಗಳ ಆಯೋಗಗಳು ತಮ್ಮ ವರದಿಯಲ್ಲಿ ತಿಳಿಸಿವೆ. ಈ ಸಮುದಾಯದ ಜನರು ಆಧುನಿಕ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದ, ಪ್ರಾದೇಶಿಕ ರಾಜಕೀಯ ನಾಯಕರು ಬಹಳಷ್ಟಿದ್ದಾರೆ. ಶಿಕ್ಷಣ, ವೈದ್ಯಕೀಯ ಹಾಗೂ ಇತರ ಆಧುನಿಕ ಸಾಮಾಜಿಕ ಸಮಸ್ಯೆಗಳ ಬಗ್ಗೆ ಆಸಕ್ತಿ ತಳೆದವರಾಗಿದ್ದಾರೆ.

ಜಿಲ್ಲೆಯ ಮುಸುಕು, ಒಕ್ಕಲಿಗರಲ್ಲಿ (ಗೌಡ) ಹಾಗೂ ರೆಡ್ಡಿ ಒಕ್ಕಲಿಗರ ಆಡುಭಾಷೆಯಲ್ಲಿ ಕುತೂಹಲಕರ ಅಂಶ ಕಂಡು ಬಂದಿದೆ. ಮುಸುಕು ಒಕ್ಕಲಿಗರು ಮನೆಯ ಆವರಣದಲ್ಲಿ ಕನ್ನಡವನ್ನು ಬಳಕೆ ಮಾಡಿದರೆ ರೆಡ್ಡಿ ಒಕ್ಕಲಿಗರು ತೆಲುಗನ್ನು ಮನೆಮಾತಾಗಿ ಉಳ್ಳವರಾಗಿದ್ದಾರೆ. ಆದರೆ ವ್ಯಾವಹಾರಿಕ ಆವರಣಗಳಲ್ಲಿ ರೆಡ್ಡಿ ಒಕ್ಕಲಿಗರು ಕನ್ನಡವನ್ನು ಬಳಸುತ್ತಿರುವುದು ಕಂಡು ಬಂದಿದೆ.

| | ಒಟ್ಟು ಭಾಷಿಕರು | ಪುರುಷರು | ಮಹಿಳೆ |
|---|---|---|---|
| ಕನ್ನಡ ಏಕಭಾಷಿಕರು | ೧೦.೩% | ೫.೭% | ೮.೦% |
| ತೆಲುಗು ಏಕಭಾಷಿಕರು | ೧೨.೫% | ೯.೦% | ೨೫% |
| ಕನ್ನಡ-ತೆಲುಗು ದ್ವಿಭಾಷಿಕರು | ೧೮.೩% | ೧೬.೦% | ೧೦% |
| ತೆಲುಗು-ಕನ್ನಡ ದ್ವಿಭಾಷಿಕರು | ೭೬.೮% | ೮೨% | ೭೦% |

ಜಿಲ್ಲೆಯ ಒಕ್ಕಲಿಗ ಸಮುದಾಯದ ಮುಸುಕು ಒಕ್ಕಲಿಗ (ಗೌಡ)ರು ಮನೆಮಾತಾಗಿ ಕನ್ನಡವನ್ನು ಬಳಸುವವರಾಗಿದ್ದು ಇವರಲ್ಲಿ ೧೦.೩%ರಷ್ಟು ಕನ್ನಡ ಏಕಭಾಷಿಕರಿದ್ದರೆ, ತೆಲುಗು ಮನೆಮಾತಾಗಿ ಉಳ್ಳ ರೆಡ್ಡಿ ಒಕ್ಕಲಿಗರಲ್ಲಿ ತೆಲುಗು ಏಕ ಭಾಷಿಕ ೧೨.೫ರಷ್ಟು ಇರುವುದು ಕಂಡು ಬಂದಿದೆ. ಈ ಅಂಶ ಕಂಡು ಬಂದಿರುವುದು ಬಹುತೇಕ ಅವಿಭಕ್ತ ಕುಟುಂಬಗಳಲ್ಲಿ. ಕನ್ನಡ ತೆಲುಗು ದ್ವಿಭಾಷಿಕರು ೧೮.೩%ರಷ್ಟು ಕಂಡು ಬಂದರೆ ತೆಲುಗು ಕನ್ನಡ ದ್ವಿಭಾಷಿಕರು ೭೬.೮%ರಷ್ಟಿರುವುದು ಕಂಡು ಬಂದಿದೆ. ಇದರಿಂದ ಕಂಡು ಬರುತ್ತಿರುವ ಅಂಶ ತೆಲುಗು ಭಾಷಿಕರು ಕನ್ನಡವನ್ನು ಪ್ರಾದೇಶಿಕ ದೃಷ್ಟಿಯಿಂದ ಕಲಿಯುವ ಅನಿವಾರ್ಯತೆಗೆ ಸಿಲುಕಿರುವುದು. ಲಿಂಗಾಧಾರಿತ ಭಿನ್ನತೆಗಳನ್ನು ಗಮನಿಸಿದಾಗ ಇಲ್ಲಿಯೂ ಸಹ ಮಹಿಳೆಯರು ಪುರುಷರಿಗಿಂತ ೧೨%ರಷ್ಟು ಕಡಿಮೆ ಕಂಡು ಬರುತ್ತದೆ. ಒಕ್ಕಲಿಗರ ಪ್ರಧಾನ ಉದ್ಯೋಗ ಕೃಷಿ. ಆದರೂ ಇತ್ತೀಚಿಗೆ ಇವರಲ್ಲಿ ಅನೇಕರು ಕೆ.ಎ.ಎಸ್., ಐ.ಎ.ಎಸ್. ಹುದ್ದೆಗಳಿಗೆ ಹೋಗಲು ಅನುವಾಗುವಂತೆ ಕನ್ನಡ

## ಒಕ್ಕಲಿಗ ಜನಾಂಗದ ಭಾಷಿಕರ ಕೋಷ್ಟಕ



ಇಂಗ್ಲೀಷ್‌ನ್ನು ಸಾಕ್ಷರ ನೆಲೆಗಳಲ್ಲಿ ಕಲಿಯುವುತ್ತಿರುವುದು ವರ್ಗದ ಜನರಿಗೆ ಸಾಮಾಜಿಕವಾಗಿ ಮೇಲ್ಮುಖವಾಗಿ ಚಲಿಸಲು ಪ್ರೇರಣೆ ಆಗಿದ್ದಿರಬಹುದಾಗಿ ಕಾಣುತ್ತದೆ.

ಪುರುಷರು ಸಹಜವಾಗೇ ಹೆಚ್ಚಿನ ಸಂಖ್ಯೆಯಲ್ಲಿ ದ್ವಿಭಾಷಿಕರಾಗಿದ್ದಾರೆ. ರಾಜಕಾರಣ, ರಿಯಲ್ ಎಸ್ಟೇಟ್, ಆಧುನಿಕ ರೀತಿಯ ಕೃಷಿ ಪದ್ಧತಿ, ಕೃಷಿಮೇಳಗಳ ಮುಂತಾದುವುಗಳ ಕಾರಣವಾಗಿ ತೆಲುಗು ಭಾಷೆ ಒಕ್ಕಲಿಗ ರೆಡ್ಡಿಗಳು ಕನ್ನಡವನ್ನು ಹೆಚ್ಚಿನ ರೀತಿಯಲ್ಲಿ ಕಲಿಯುವ ಪ್ರೇರಣೆಯಾಗುತ್ತದೆ. ಬಹಳಷ್ಟು ರೈತರು ರೇಷ್ಮೇ ಕೃಷಿ, ತರಕಾರಿ ಬೆಳೆಗಳಾದ ಟೊಮ್ಯಾಟೋ, ಮೆಣಸಿನಕಾಯಿ, ಮೂಲಂಗಿ, ಮುಂತಾದವುಗಳು ಮಾರುಕಟ್ಟೆಗಳಿಗೆ ಒಯ್ಯಬೇಕಾದಾಗ ಅಲ್ಲಿನ ಮಾರುಕಟ್ಟೆ ಅಧಿಕಾರಿಗಳ ಜೊತೆಗೆ ಗ್ರಾಹಕರ ಜೊತೆಗೆ ಮಾತನಾಡುವ ಸಂದರ್ಭದಲ್ಲಿ ಕನ್ನಡವನ್ನು ಮೌಖಿಕ ನೆಲೆಯಲ್ಲಿ ಬಳಸುತ್ತಿರುವುದು ಕಂಡು ಬಂದಿದೆ. ಜಿಲ್ಲೆಯ ಒಕ್ಕಲಿಗರ ದ್ವಿಭಾಷಿಕ ಸಂದರ್ಭವನ್ನು ಗಮನಿಸಿದಾಗ ಕನ್ನಡ ಒಕ್ಕಲಿಗರು ತೆಲುಗು ಕಲಿತು ದ್ವಿಭಾಷಿಕರಾಗಿರುವ ಪ್ರಮಾಣ ತೀರ ಕಡಿಮೆಯಾಗಿದ್ದು ಇದಕ್ಕೆ ತದ್ವಿರುದ್ಧವಾಗಿ ರೆಡ್ಡಿ ಒಕ್ಕಲಿಗರು ಕನ್ನಡ ಕಲಿತು ದ್ವಿಭಾಷಿಕರಾಗಿರುವ ಪ್ರಮಾಣ ಹೆಚ್ಚಾಗಿರುವುದು ಕಂಡು ಬಂದಿದೆ.

ಬಲಿಜ : ಬಣಜಿಗ, ಬಲಜಿಗ ಎಂದು ಕರೆಯಲಾಗುವ ಈ ಜನಾಂಗ ಕೋಲಾರ, ಮೈಸೂರು, ರಾಯಚೂರು, ತುಮಕೂರು, ಗುಲ್ಬರ್ಗ ಹಾಗೂ ಬೆಂಗಳೂರು, ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಇವರಲ್ಲಿ, ಸೆಟ್ಟಿ ಬಲಜಿಗ, ಗಾಜಲು (ಬಳೆ) ಬಲಜಿಗ, ಕಲಾಯಿ ಬಲಜಿಗ ಮುಂತಾದ ಪಂಗಡಗಳಿವೆ ಮುಲರನಾಡು,, ಪಸುಪನಾಡು, ವೇಲನಾಡು ಇವರಲ್ಲಿನ ಕೆಲವು ಒಳಪಂಗಡಗಳು. ಇವರ ಆಡುಮಾತು ಅಥವಾ ಮನೆಮಾತು ತೆಲುಗು. ಆದರೆ ಕನ್ನಡವನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ ಬಳೆ, ಅರಿಶಿಣ ಕುಂಕುಮ ವ್ಯಾಪಾರ ಇವರ ಪ್ರಮುಖ ಕಸುಬು ಹಳ್ಳಿಗಳಲ್ಲಿನ ಬಲಿಜಿಗರು ಹೆಚ್ಚಾಗಿ ಕೃಷಿಕರಾಗಿದ್ದಾರೆ. ಇತ್ತೀಚೆಗೆ ಬಹಳಷ್ಟು ಮಂದಿ ಸರಕಾರಿ ಸೇವೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ರಾಜಕೀಯವಾಗಿ, ಶೈಕ್ಷಣಿಕವಾಗಿಯೂ ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಿರುವ ಜನಾಂಗ ಇದಾಗಿದೆ.

| | ಒಟ್ಟು ಭಾಷೆಗಳು | ಪುರುಷರು | ಮಹಿಳೆಯರು |
|---|---|---|---|
| ಕನ್ನಡ ಏಕಭಾಷಿಕ | ೫.೫% | ೭.೦% | ೬.೫% |
| ತೆಲುಗು ಏಕಭಾಷಿಕ | ೬.೨% | ೮.೯% | ೯.೨% |
| ಕನ್ನಡ-ತೆಲುಗು ದ್ವಿಭಾಷಿಕ | ೮.೦% | ೧೦.೦% | ೨% |
| ತೆಲುಗು-ಕನ್ನಡ ದ್ವಿಭಾಷಿಕ | ೨೫% | ೭೦% | ೫೫% |

ಜಿಲ್ಲೆಯಲ್ಲಿ ಬಣಜಿಗರು ಒಟ್ಟು ೯%ರಷ್ಟಿದ್ದಾರೆ. ಕನ್ನಡ ಏಕಭಾಷಿಕರು ಶೇ.೫.೫ರಷ್ಟಿದ್ದು. ಪುರುಷರು ೭.೦%ರಷ್ಟು ಮಹಿಳೆಯರು ೬.೫%ರಷ್ಟಿರುವುದು ಕಂಡು ಬಂದಿದೆ. ಕನ್ನಡ ಏಕಭಾಷಿಕವಾಗಿರುವವರು

## ಬಲಿಜ ಜನಾಂಗದ ಭಾಷಿಕರ ಕೋಷ್ಟಕ



ಬಹುತೇಕ ಹಳ್ಳಿಗಳಿಂದ ವಲಸೆ ಬಂದು ಪಟ್ಟಣವಾಸಿಗಳಾಗಿರುವ ವಿಭಕ್ತ ಕುಟುಂಬಗಳವರು ತೆಲುಗು ಏಕಭಾಷಿಕರು ೬.೭%ರಷ್ಟಿರುವುದು ಕಂಡು ಬಂದಿದ್ದು ಪುರುಷರಿಗಿಂತ (೮.೯%) ಮಹಿಳೆಯರೇ (೯.೭%) ತೆಲುಗು ಏಕಭಾಷಿಕರಾಗಿರುತ್ತಾರೆ. ಕನ್ನಡ ತೆಲುಗು ಭಾಷಿಕರಿಗಿಂತ (೮.೦%) ತೆಲುಗು ಕನ್ನಡ ದ್ವಿಭಾಷಿಕರು ೭೫%ರಷ್ಟಿರುವುದು ಈ ಜನಾಂಗವು ಕನ್ನಡದತ್ತ ಭಾಷಾಪಲ್ಲಟವಾಗುತ್ತಿರುವುದನ್ನು ತೋರಿಸುತ್ತದೆ. ಇವರ ಮಕ್ಕಳನ್ನು ಕನ್ನಡ ಮತ್ತು ಇಂಗ್ಲೀಷ್ ಸಾಕ್ಷರತೆ ನೆಲೆಗಳತ್ತ ಹೆಚ್ಚು ಹೆಚ್ಚಾಗಿ ಅಭ್ಯಾಸ ಮಾಡಲು ಪ್ರೇರೇಪಿಸುವುದರ ಹಿಂದೆ 'ಅನ್ನ-ಬದುಕಿನ' ಕಾರಣಗಳಿರುವುದು ಕಂಡುಬಂದಿದೆ. ಹೆಚ್ಚಿನ ಭಾಷಿಕರು ತಮ್ಮ ವ್ಯಕ್ತಿಪ್ರತಿಷ್ಠೆ ಕಾರಣಕ್ಕಾಗಿ ತಾವು ಬೇರೆಯವರಿಗಿಂತ ಭಿನ್ನರೀತಿಯವರೆಂದು ತೋರಿಸಲೂ ಕೂಡ ಈ ರೀತಿಯ ನಡವಳಿಕೆ ಕಂಡು ಬರಲು ಕಾರಣವಾಗಿದೆ. ಆಂಧ್ರಪ್ರದೇಶದ ಮದನಪಲ್ಲಿಯಲ್ಲಿ ದಾವಣಗೆರೆ ಕಡೆಯಿಂದ ಬಂದ ಬಣಜಿಗ ಕೋಮಿನ ಹೆಣ್ಣುಮಗಳು ಜವಳಿ ಅಂಗಡಿ ನಡೆಸುತ್ತಿದ್ದು ಕನ್ನಡದಲ್ಲೇ ಮಾತನಾಡುವುದರ ಮೂಲಕ ವೈಯಕ್ತಿಕ ನೆಲೆಯಲ್ಲಿ ಟಿ.ವಿಯಲ್ಲಿ ಕನ್ನಡವಾರ್ತೆ ಸಿನಿಮಾ ಹಾಡುಗಳು, ದೇವರನಾಮಗಳನ್ನು ಕೇಳುವುದರ ಮೂಲಕ ಭಾಷಾಸಂಗೋಪನೆ ಮಾಡಿರುವುದು ಕಂಡು ಬಂದಿದೆ. ಮಗ ತಾನು ತಾಯಿಂದ ಕನ್ನಡ ಅರೆಬರೆ ಅಂದರೆ ಅಸ್ಪಷ್ಟವಾಗಿ ಕಲಿತಿರುವುದು ಕಂಡು ಬಂದಿದೆ.

**ಕುರುಬ :** ಹಾಲುಮತಸ್ಥರು ಎಂದೇ ಗುರ್ತಿಸಲ್ಪಡುವ ಕುರುಬರು ಕರ್ನಾಟಕದ ಅತಿದೊಡ್ಡ ಕುರಿಗಾಹಿಗಳ ಸಮುದಾಯಕ್ಕೆ ಸೇರಿದವರು. ಕುರಿಸಾಕಣೆ ಹಾಗೂ ಕಂಬಳಿ ನೇಯ್ಗೆಯನ್ನು ಮುಖ್ಯ ಕಸುಬಾಗಿ ಹೊಂದಿದ್ದ ಕುರುಬರು ಕಾಲಕ್ರಮೇಣ ಕೃಷಿಕರಾಗಿಯೂ ಬದುಕಿ, ಈಚಿನ ದಿನಗಳಲ್ಲಿ ಬೇರೆ ಬೇರೆ ನೌಕರಿ, ವೃತ್ತಿಗಳನ್ನು ಅವಲಂಬಿಸಿದ್ದಾರೆ. ಇವರಲ್ಲಿ ಹಳೆ ಕುರುಬ, ಹೊಸ ಕುರುಬರೆಂಬ, ಒಳಪಂಗಡಗಳಿವೆ. ಇದಲ್ಲದೆ ಗೊಂಡ, ರಾಜಗೊಂಡ(ಬೀದರ್, ಗುಲಬರ್ಗಾ), ಧನಗಾರ(ಮಹಾರಾಷ್ಟ್ರ) ಪಾಲ್‌ಕ್ಷತ್ರಿಯ (ಕಾಶ್ಮೀರ), ಕುರುಂಬ(ತಮಿಳುನಾಡು), ಕುರುಬವಾಳ್ಳು(ಆಂಧ್ರ) ಕಾಡುಕುರುಬ, ಜೇನುಗುರುಬ(ಬುಡಕಟ್ಟು), ಹಂಡೆ ಕುರುಬ ಇತ್ಯಾದಿ ಭೇದಗಳಿವೆ. ಕುರುಬರು ಕೋಲಾರ ಜಿಲ್ಲೆಯ ಮುಳಬಾಗಿಲು, ಮಾಲೂರು, ಬಂಗಾರಪೇಟೆ, ಚಿಕ್ಕಬಳ್ಳಾಪುರಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯನ್ನು ಬಳಸುತ್ತಿದ್ದಾರೆ. ಅಷ್ಟೇ ಅಲ್ಲದೇ ತೆಲುಗು ಭಾಷೆಯನ್ನು ಮಾತನಾಡುವ ಹಾಗೂ ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿ ಕೌಶಲ್ಯ ಸಾಧಿಸಿದ್ದಾರೆ. ಹೆಚ್ಚಿನ ಸಂಖ್ಯೆಯ ಕುರುಬರು ದ್ವಿಭಾಷಿಕರಾಗಿದ್ದಾರೆ. ಇವರಲ್ಲಿ ತುಂಬಾ ಶ್ರೀಮಂತವಾದ ಜಾನಪದ ಪರಂಪರೆಯಿದೆ. ಗಂಡಸರು ಜಾನಪದ ಹಾಡುಗಳನ್ನು ಹಾಡುತ್ತಾರೆ. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಇತ್ತೀಚೆಗೆ ಒಂದು ಪ್ರಭಾವಶಾಲಿ ಗುಂಪಾಗಿ ಬೆಳೆಯುತ್ತಿದ್ದಾರೆ.

| | ಒಟ್ಟು ಭಾಷಿಕರು | ಪುರುಷರು | ಮಹಿಳೆಯರು |
|---|---|---|---|
| ಕನ್ನಡ ಏಕಭಾಷಿಕರು | ೨೫.೦೦% | ೨೦.೦೦% | ೩೮% |
| ತೆಲುಗು ಏಕಭಾಷಿಕರು | ೧೫.೦೦% | ೧೦% | ೧೬% |
| ಕನ್ನಡ-ತೆಲುಗು ದ್ವಿಭಾಷಿಕರು | ೮೦.೨೨% | ೮೬.೬೨% | ೭೦.೬% |
| ತೆಲುಗು-ಕನ್ನಡ ದ್ವಿಭಾಷಿಕರು | ೨೦.೧% | ೧೬.೨% | ೧೫% |

ಕ್ಷೇತ್ರ ಕಾರ್ಯದಲ್ಲಿ ದೊರೆತ ಅಂಕಿ-ಅಂಶಗಳನ್ನು ಆಧರಿಸಿ ನೋಡಿದಾಗ ಕನ್ನಡ ಏಕ ಭಾಷಿಕರು ೨೫%ರಷ್ಟಿದ್ದರೆ ತೆಲುಗು ಭಾಷಿಕರು ಶೇ.೧೫ರಷ್ಟು ಇರುವುದು ಕಂಡು ಬರುತ್ತದೆ. ಇಲ್ಲಿಯೂ ಕೂಡ ಏಕಭಾಷಿಕತೆಯನ್ನು ಸಂಗೋಪನೆ ಮಾಡುವಲ್ಲಿ ಮಹಿಳೆಯರೇ ಹೆಚ್ಚಾಗಿ ಕಾಣುತ್ತಾರೆ. ಕುರುಬ ಜನಾಂಗದವರ ಮನೆ ಮಾತು ಹೆಚ್ಚಾಗಿ ಕನ್ನಡ ಆಗಿರುವುದರಿಂದ ಬೇರೆಲ್ಲ ಜನಾಂಗದವರಿಗಿಂತ ಇವರಲ್ಲಿ ಕನ್ನಡ ತೆಲುಗು ದ್ವಿಭಾಷಿಕರು ಹೆಚ್ಚಾಗಿದ್ದು, ೮೦.೨೨%ರಷ್ಟು ಇರುವುದು ಕಂಡು ಬರುತ್ತದೆ. ಜಿಲ್ಲೆಯ ಬಹುತೇಕ ಜಾತಿಗಳು ತೆಲುಗು ಮೂಲದಿಂದ ಕನ್ನಡಕ್ಕೆ ಪಲ್ಲಟವಾಗಿರುವುದು ಕಂಡು ಬಂದರೆ ಕುರುಬರು ಮಾತ್ರ ಕನ್ನಡ ನೆಲೆಯಿಂದ ತೆಲುಗಿನ ನೆಲೆಯಲ್ಲಿ ವ್ಯಾವಹಾರಿಕ ಕಾರಣಗಳಿಗಾಗಿ ಮೌಖಿಕ ನೆಲೆಯಲ್ಲಿ ಮಾತ್ರ ದ್ವಿಭಾಷಿಕರಾಗಿರುವುದು ಕಂಡುಬಂದಿದೆ. ಗಡಿ ತಾಲ್ಲೂಕುಗಳಾದ ಮುಳಬಾಗಿಲು, ಶ್ರೀನಿವಾಸಪುರ, ಬಂಗಾರಪೇಟೆ ಮುಂತಾದ ತಾಲೂಕುಗಳಲ್ಲಿ ವಾಸವಾಗಿರುವ ಕುರುಬರಲ್ಲಿ ಶೇ.೧೫ರಷ್ಟು ಏಕಭಾಷಿಕರಾಗಿದ್ದು ಲಿಂಗಾಧಾರಿತ ನೆಲೆಯಲ್ಲಿ ಗಮನಿಸಿದಾಗ ಪುರುಷರಿಗಿಂತ (ಶೇ.೧೦) ಮಹಿಳೆಯರು (ಶೇ.೧೬) ಹೆಚ್ಚಾಗಿ ಏಕಭಾಷಿಕರಾಗಿರುವುದು ಕಂಡು ಬಂದಿದೆ. ಇವರು ತಮ್ಮ ಮಕ್ಕಳ ವಿದ್ಯಾಭ್ಯಾಸದ ಸಂದರ್ಭದಲ್ಲಿ ಕನ್ನಡ ಸಾಕ್ಷರತೆಗೆ ಪಲ್ಲಟವಾಗುತ್ತಿರುವ ಸಂದರ್ಭಗಳಿದ್ದರೆ ಕನ್ನಡ ಭಾಷಿಕರು ಮೌಖಿಕ ನೆಲೆಯಲ್ಲಿ ವ್ಯಾಪಾರ ವಹಿವಾಟುಗಳ ಅಂದರೆ ಕಸುಬಿನ ಕಾರಣಕ್ಕಾಗಿ ತೆಲುಗನ್ನು ಪುರುಷರು ಹೆಚ್ಚಾಗಿ ರೂಢಿಸಿಗೊಂಡಿರುವುದು ಕಂಡು ಬಂದಿದೆ.

ಮಹಿಳೆಯರು ಸುತ್ತಮುತ್ತಲಿನ ವ್ಯವಹಾರಿಕ ಸಂದರ್ಭದಲ್ಲಿ ಮಾರುಕಟ್ಟೆಯಲ್ಲಿ ತರಕಾರಿ ಕೊಳ್ಳುವಾಗ, ಕೆಳವರ್ಗದ ಕೃಷಿಕಾರ್ಮಿಕರು, ಮನೆಗೆಲಸದವರೊಡನೆ ಸಂಪರ್ಕಿಸುವಾಗ ತೆಲುಗನ್ನು ಕಲಿಯುವ ಸಂದರ್ಭಗಳು ಹೆಚ್ಚಿದ್ದು ೭೦.೬%ರಷ್ಟು ಕನ್ನಡ-ತೆಲುಗು ದ್ವಿಭಾಷಿಕರಾಗಿರುವುದು ಕಂಡು ಬರುತ್ತದೆ. ಹಾಗೆಯೇ ವೈವಾಹಿಕ ಕಾರಣದಿಂದಾಗಿ ವಲಸೆ ಬಂದಿರುವ ಮಹಿಳೆಯರು ಕನ್ನಡವನ್ನು ಮೌಖಿಕವಾಗಿಯೇ ಅಲ್ಲದೆ ಸಾಕ್ಷರತೆಯ ನೆಲೆಯಲ್ಲೂ ಕನ್ನಡವನ್ನು ಕಲಿತಿರುವುದು ಕಾಣುತ್ತದೆ. ಇವರು ತಮ್ಮ ಮಕ್ಕಳಿಗೆ ಕನ್ನಡ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಕಲಿಸುವುದರ ಮೂಲಕ ಕನ್ನಡ ಇಂಗ್ಲೀಷಗಳು ಕರ್ನಾಟಕ ಸರ್ಕಾರದ ಸಂದರ್ಭದಲ್ಲಿ ಬದುಕಿಗಾಗಿ ಅಗತ್ಯವಾದ ಭಾಷೆಗಳಾಗಿ ಇರುವುದು ಕಂಡು ಬಂದಿವೆ. ಮೊದಲೇ ಹೇಳಿದಂತೆ 'ಸಹಜ

## ಕುರುಬ ಜನಾಂಗದ ಭಾಷಿಕರ ಕೋಷ್ಟಕ



ದ್ವಿಭಾಷಿಕತೆ'ಯ ಜಿಲ್ಲೆಯಲ್ಲಿ ಕಂಡುಬಂದಿರುವುದರಿಂದ ವ್ಯಾವಹಾರಿಕವಾಗಿ ಮೌಖಿಕ ಸಾಕ್ಷರತೆ ನೆಲೆಯಲ್ಲಿ ತೆಲುಗು ಭಾಷಿಕರು ಕನ್ನಡವನ್ನು, ಕನ್ನಡ ಭಾಷಿಕರು ಮೌಖಿಕ ನೆಲೆಯಲ್ಲಿ ತೆಲುಗನ್ನು ಕಲಿತಿರುವುದು ಕಂಡು ಬಂದಿದೆ.

## ಇತರ ಜಾತಿಗಳು

ಕೋಲಾರ ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಜನಸಂಖ್ಯೆಯಿರುವ ಕೆಲವು ಜಾತಿಗಳ ಕುರಿತಾದ ವಿವರಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಅಗಸ :** ಮದುವೆ ಹಾಗೂ ದೇವರ ಗುಡಿ, ಮೆರವಣಿಗೆಗಳಲ್ಲಿ ನಡೆಮಡಿ ಹಾಕುವುದರಿಂದ ಹಿಡಿದು ಬಳ್ಳಿ ಮಡಿಮಾಡುವಿಕೆ, ಆಧುನಿಕ ಸಂದರ್ಭದ ಡ್ರೈಕ್ಲೀನ್ ಮತ್ತು ಲಾಂಡ್ರಿಗಳ್ನು ನಡೆಸುವುದು, ಇವೇ ಮೊದಲಾದ ಕೆಲಸಗಳ್ನು ಮಾಡುತ್ತಾರೆ. ಇವರಲ್ಲಿ ಮಡಿವಾಳ, ದಂಡಿನ ಮಡಿವಾಳ, ವೀರಘಂಟೆ, ಲಿಂಗಾಯಿತ ಅಗಸ ಎಂಬ ಉಪಪಂಗಡಗಳಿವೆ. ದೋಬಿ, ಸಾಕಲು (ತೆಲುಗು) ಎಂಬುದು ಅಗಸ ಪದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತಿರುವ ಪದಗಳು. ತೆಲುಗು ಇವರ ಮನೆಮಾತಾಗಿದ್ದು, ಮನೆಯ ಹೊರಗಿನ ಭಾಷಿಕ ಆವರಣಗಳಲ್ಲಿ ಕನ್ನಡವನ್ನು ಭಾಷೆ ಮತ್ತು ಲಿಪಿಯಾಗಿ ಬಳಸುತ್ತಾರೆ.

**ಈಡಿಗ :** ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಹೆಚ್ಚಾಗಿ ವಾಸವಾಗಿರುವ ಈಡಿಗರು ಜಿಲ್ಲೆಯ ಇತರ ಭಾಗಗಳಲ್ಲಿ ವಿರಳವಾಗಿ ಕಂಡು ಬರುತ್ತಾರೆ. ಈಚಲು ಮರ ಹಾಗೂ ತೆಂಗಿನ ಮರಗಳಿಂದ ಸೇಂದಿಯನ್ನು ಇಳಿಸಿ ಮಾರಾಟ ಮಾಡುವುದು ಇವರ ಸಾಂಪ್ರದಾಯಿಕ ಉದ್ಯೋಗ. ಆದರೆ ಇಂದಿನ ಆಧುನಿಕ ಸಂದರ್ಭಕ್ಕೂ ಅವರು ಹೊಂದಿಕೊಂಡು ಸರ್ಕಾರಿ ನೌಕರಿ, ರಾಜಕಾರಣದ ಜೊತೆಗೆ ವ್ಯವಸಾಯವನ್ನು ಮಾಡುತ್ತಿರುತ್ತಾರೆ. ಇವರು ಮನೆಯ ಭಾಷೆಯಾಗಿ ತೆಲುಗನ್ನು ಬಳಸುತ್ತಾರೆ. ಕನ್ನಡವನ್ನು ಕೂಡ ಬಳಸಬಲ್ಲ ಕೌಶಲ್ಯವಿರುವುದು ಕಂಡು ಬಂದಿದೆ.

**ಕುಂಬಾರ :** ಮೊದಲಿಗೆ ದೈನಂದಿನ ಬಳಕೆ ಸಾಮಾಗ್ರಿಗಳಾಗಿ ಮಣ್ಣಿನ ಪಾತ್ರೆ ತಯಾರಿಸುತ್ತಿದ್ದ ಕುಂಬಾರ ಸಮುದಾಯ ನಂತರ ಕೃಷಿ, ಕೂಲಿ, ಸರ್ಕಾರಿ ನೌಕರಿ ಮೊದಲಾದ ದುಡಿಮೆಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯ ಆಂಧ್ರದ ಗಡಿಭಾಗದ ಕೆಲವು ಕುಂಬಾರರ ಮನೆಯ ಭಾಷೆ ತೆಲುಗಾದರೂ ಸಾಮಾನ್ಯವಾಗಿ ಎಲ್ಲರೂ ಕನ್ನಡ ಬಲ್ಲವರು. ಇವರಲ್ಲಿ ಗುಂಡಭಕ್ತ, ವೀರಶೈವ ಕುಂಬಾರ ಹಾಗೂ 'ಕುಂಬಾರಸೆಟ್ಟಿ' ಎಂದು ಕರೆದುಕೊಳ್ಳುತ್ತಾರೆ. ಇತ್ತೀಚೆಗೆ ಇವರಲ್ಲಿ ಕೆಲವು ಸರಕಾರಿ ಹಾಗೂ ಖಾಸಗಿ ಉದ್ಯೋಗಿಗಳಿದ್ದಾರೆ. ಮತ್ತೆ ಕೆಲವರು ಇಟ್ಟಿಗೆ ಕಾರ್ಖಾನೆ, ಹೆಂಚಿನ ಕಾರ್ಖಾನೆಗಳನ್ನು ನಡೆಸುತ್ತಿದ್ದು, ಸಾಮಾಜಿಕವಾಗಿ ಉತ್ತಮ ಸ್ಥಾನಗಳ್ನು ಹೊಂದಿದ್ದಾರೆ.

ದ್ವಿಭಾಷಿಕತೆ'ಯ ಜಿಲ್ಲೆಯಲ್ಲಿ ಕಂಡುಬಂದಿರುವುದರಿಂದ ವ್ಯಾವಹಾರಿಕವಾಗಿ ಮೌಖಿಕ ಸಾಕ್ಷರತೆ ನೆಲೆಯಲ್ಲಿ ತೆಲುಗು ಭಾಷಿಕರು ಕನ್ನಡವನ್ನು, ಕನ್ನಡ ಭಾಷಿಕರು ಮೌಖಿಕ ನೆಲೆಯಲ್ಲಿ ತೆಲುಗನ್ನು ಕಲಿತಿರುವುದು ಕಂಡು ಬಂದಿದೆ.

## ಇತರ ಜಾತಿಗಳು

ಕೋಲಾರ ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಜನಸಂಖ್ಯೆಯಿರುವ ಕೆಲವು ಜಾತಿಗಳ ಕುರಿತಾದ ವಿವರಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಅಗಸ :** ಮದುವೆ ಹಾಗೂ ದೇವರ ಗುಡಿ, ಮೆರವಣಿಗೆಗಳಲ್ಲಿ ನಡೆಮಡಿ ಹಾಕುವುದರಿಂದ ಹಿಡಿದು ಬಳ್ಳಿ ಮಡಿಮಾಡುವಿಕೆ, ಆಧುನಿಕ ಸಂದರ್ಭದ ಡ್ರೈಕ್ಲೀನ್ ಮತ್ತು ಲಾಂಡ್ರಿಗಳನ್ನು ನಡೆಸುವುದು, ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಾರೆ. ಇವರಲ್ಲಿ ಮಡಿವಾಳ, ದಂಡಿನ ಮಡಿವಾಳ, ವೀರಘಂಟೆ, ಲಿಂಗಾಯಿತ ಅಗಸ ಎಂಬ ಉಪಪಂಗಡಗಳಿವೆ. ದೋಬಿ, ಸಾಕಲು (ತೆಲುಗು) ಎಂಬುದು ಅಗಸ ಪದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತಿರುವ ಪದಗಳು. ತೆಲುಗು ಇವರ ಮನೆಮಾತಾಗಿದ್ದು, ಮನೆಯ ಹೊರಗಿನ ಭಾಷಿಕ ಆವರಣಗಳಲ್ಲಿ ಕನ್ನಡವನ್ನು ಭಾಷೆ ಮತ್ತು ಲಿಪಿಯಾಗಿ ಬಳಸುತ್ತಾರೆ.

**ಈಡಿಗ :** ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಹೆಚ್ಚಾಗಿ ವಾಸವಾಗಿರುವ ಈಡಿಗರು ಜಿಲ್ಲೆಯ ಇತರ ಭಾಗಗಳಲ್ಲಿ ವಿರಳವಾಗಿ ಕಂಡು ಬರುತ್ತಾರೆ. ಈಚಲು ಮರ ಹಾಗೂ ತೆಂಗಿನ ಮರಗಳಿಂದ ಸೇಂದಿಯನ್ನು ಇಳಿಸಿ ಮಾರಾಟ ಮಾಡುವುದು ಇವರ ಸಾಂಪ್ರದಾಯಿಕ ಉದ್ಯೋಗ. ಆದರೆ ಇಂದಿನ ಆಧುನಿಕ ಸಂದರ್ಭಕ್ಕೂ ಅವರು ಹೊಂದಿಕೊಂಡು ಸರ್ಕಾರಿ ನೌಕರಿ, ರಾಜಕಾರಣದ ಜೊತೆಗೆ ವ್ಯವಸಾಯವನ್ನು ಮಾಡುತ್ತಿರುತ್ತಾರೆ. ಇವರು ಮನೆಯ ಭಾಷೆಯಾಗಿ ತೆಲುಗನ್ನು ಬಳಸುತ್ತಾರೆ. ಕನ್ನಡವನ್ನು ಕೂಡ ಬಳಸಬಲ್ಲ ಕೌಶಲ್ಯವಿರುವುದು ಕಂಡು ಬಂದಿದೆ.

**ಕುಂಬಾರ :** ಮೊದಲಿಗೆ ದೈನಂದಿನ ಬಳಕೆ ಸಾಮಾಗ್ರಿಗಳಾಗಿ ಮಣ್ಣಿನ ಪಾತ್ರೆ ತಯಾರಿಸುತ್ತಿದ್ದ ಕುಂಬಾರ ಸಮುದಾಯ ನಂತರ ಕೃಷಿ, ಕೂಲಿ, ಸರ್ಕಾರಿ ನೌಕರಿ ಮೊದಲಾದ ದುಡಿಮೆಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯ ಆಂಧ್ರದ ಗಡಿಭಾಗದ ಕೆಲವು ಕುಂಬಾರರ ಮನೆಯ ಭಾಷೆ ತೆಲುಗಾದರೂ ಸಾಮಾನ್ಯವಾಗಿ ಎಲ್ಲರೂ ಕನ್ನಡ ಬಲ್ಲವರು. ಇವರಲ್ಲಿ ಗುಂಡಭಕ್ತ, ವೀರಶೈವ ಕುಂಬಾರ ಹಾಗೂ 'ಕುಂಬಾರಸೆಟ್ಟಿ' ಎಂದು ಕರೆದುಕೊಳ್ಳುತ್ತಾರೆ. ಇತ್ತೀಚೆಗೆ ಇವರಲ್ಲಿ ಕೆಲವು ಸರಕಾರಿ ಹಾಗೂ ಖಾಸಗಿ ಉದ್ಯೋಗಿಗಳಿದ್ದಾರೆ. ಮತ್ತೆ ಕೆಲವರು ಇಟ್ಟಿಗೆ ಕಾರ್ಖಾನೆ, ಹೆಂಚಿನ ಕಾರ್ಖಾನೆಗಳನ್ನು ನಡೆಸುತ್ತಿದ್ದು, ಸಾಮಾಜಿಕವಾಗಿ ಉತ್ತಮ ಸ್ಥಾನಗಳನ್ನು ಹೊಂದಿದ್ದಾರೆ.

**ಗಾಣಿಗ :** ಗಾಂಡ್ಲವಾಳ್ಳು, ಗಾಣಿಗ, ಎಣ್ಣೆಗಾಣಿಗ ಮುಂತಾಗಿ ಕರೆಯಲಾಗುವ ಗಾಣಿಗಸಮುದಾಯದ ಸಾಂಪ್ರದಾಯಿಕ ಉದ್ಯೋಗ ಗಾಣ ಆಡಿಸಿ ಎಣ್ಣೆ ಬೀಜಗಳಿಂದ ಎಣ್ಣೆ ತೆಗೆಯುವುದಾಗಿದೆ. ಈಚೆಗೆ ಕೃಷಿ, ಸರ್ಕಾರಿ ನೌಕರಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯ ಗಾಣಿಗರ ಮನೆಮಾತು ತೆಲುಗು ಆದರೆ ಒಳ್ಳೆಯ ಕನ್ನಡವನ್ನು ಮಾತನಾಡಬಲ್ಲರು. ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತಿರುವ ಗಾಣಿಗ ಸಮುದಾಯ ರಾಜಕಾರಣದಲ್ಲೂ ತಮ್ಮನ್ನು ತೊಡಗಿಸಿಕೊಡಿದ್ದಾರೆ.

**ಗೊಲ್ಲ :** ಯದುಕುಲ, ಯಾದವ, ಅಡವಿಗೊಲ್ಲ(ಕಾಡುಗೊಲ್ಲರು), ಗೋಪಾಲಕ ಇತ್ಯಾದಿ ಹೆಸರುಗಳಿಂದ ಗೊಲ್ಲರನ್ನು ಕರೆಯುತ್ತಾರೆ. ಪಶುಪಾಲನೆ ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದು, ಕಾಲಕ್ರಮೇಣ ವ್ಯವಸಾಯ, ಸರ್ಕಾರಿ-ಖಾಸಗಿ ನೌಕರಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಗಣೆ ಮಾಡುವ, ಕಾವ್ಯಗಳನ್ನು ಹಾಡುವ, ಕೋಲಾಟ ಆಡುವ ಕಲಾವಿದರು ಇವರಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಜಿಲ್ಲೆಯ ಗೊಲ್ಲರ ಮನೆಯ ಮಾತು ತೆಲುಗಾಗಿದೆ. ಆದರೂ ಕನ್ನಡ ಭಾಷೆ ಮತ್ತು ಲಿಪಿಯನ್ನು ಚೆನ್ನಾಗಿ ಬಳಸುವವರು ಇದ್ದಾರೆ.

**ಬೆಸ್ತ :** ಗಂಗಾಮತಸ್ಥರೆಂದು ಕರೆದುಕೊಳ್ಳುತ್ತಿರುವ ಬೆಸ್ತರಲ್ಲಿ ಬುಂಡೆ ಬೆಸ್ತ, ಮಾರಿ ಬೆಸ್ತ, ತೊರೆಯ ಬೆಸ್ತ ಎಂಬುದಾಗಿ ಉಪಜಾತಿಗಳಿವೆ. ಮೀನುಗಾರಿಕೆ ಇವರ ಸಾಂಪ್ರದಾಯಿಕ ವೃತ್ತಿ. ಈಚೆಗೆ ಅವರೂ ಕೃಷಿ, ಪಶುಪಾಲನೆ, ನೌಕರಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಮನೆಯ ಮಾತು ತೆಲುಗು. ಕನ್ನಡವನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ಇವರಲ್ಲಿ ಅನೇಕರು ಮೇಲ್ಮುಖವಾಗಿ ಚಲಿಸುವುದರ ಜೊತೆಗೆ ತಮ್ಮ ಅಸ್ತಿತ್ವವನ್ನು ಕನ್ನಡ ಭಾಷೆಯ ಮೂಲಕ ಕಂಡುಕೊಳ್ಳುವ ಪ್ರಯತ್ನ ಮಾಡತೊಡಗಿದ್ದಾರೆ.

**ವಿಶ್ವಕರ್ಮ :** ಆಚಾರಿ, ವಾಜರು, ವಿಶ್ವಕರ್ಮ ಬ್ರಾಹ್ಮಣ ಮುಂತಾಗಿ ವಿಶ್ವಕರ್ಮರೆಂದು ಕರೆಯಲಾಗುತ್ತದೆ. ಇವರ ಪಾರಂಪರಿಕವಾಗಿ ಚಿನ್ನ ಬೆಳ್ಳಿ ಆಭರಣಗಳನ್ನು ತಯಾರಿಸುತ್ತಾರೆ. ಕಬ್ಬಿಣ, ಮರಗೆಲಸ, ಶಿಲ್ಪಿ ಮುಂತಾದ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ತೆಲುಗು ಇವರ ಮನೆಮಾತಾಗಿದ್ದರೂ ಕನ್ನಡವನ್ನು ಬಳಸುವರಾಗಿದ್ದಾರೆ. ಇತ್ತೀಚೆಗಿನವರು ಕರಕುಶಲರು, ಬೇಸಾಯ, ವ್ಯಾಪಾರ, ಸರ್ಕಾರಿ ಹಾಗೂ ಖಾಸಗೀ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

**ವೈಶ್ಯ :** ಕೋಮಟಿಗ, ಆರ್ಯವೈಶ್ಯರೆಂದು ಕರೆದುಕೊಳ್ಳುವ ಸಮುದಾಯ ಸಾಂಪ್ರದಾಯಿಕವಾಗಿ ವಣಿಕ (ವ್ಯಾಪಾರಿ) ವೃತ್ತಿ. ಈಚೆಗೆ ಇವರು ಬೇರೆ ಉದ್ಯಮಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ತುಪ್ಪದ ಕೋಮಟಿ ಮತ್ತು ಎಣ್ಣೆ ಕೋಮಟಿಗರೆಂದು ಎರಡು ಉಪಪಂಗಡಗಳಿವೆ. ತೆಲುಗು ಇವರ ಮನೆ ಭಾಷೆಯಾಗಿದ್ದು ಕನ್ನಡ ಭಾಷೆ ಮತ್ತು ಲಿಪಿಯನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ಸರ್ಕಾರಿ ನೌಕರಿ, ಖಾಸಗಿ ಸಂಸ್ಥೆಗಳು, ಬ್ಯಾಂಕ್, ವ್ಯಾಪಾರ, ಸಣ್ಣ ದೊಡ್ಡ ಪ್ರಮಾಣದ ಉದ್ಯಮಗಳಲ್ಲಿ

ನಿರತರಾಗಿದ್ದಾರೆ. ಆಧುನಿಕ ಸಂದರ್ಭದ ಎಲ್ಲಾ ಸಾಮಾಜಿಕ ಹಾಗೂ ಅಭಿವೃದ್ಧಿ ಕಾರ್ಯಗಳ ಸೌಲಭ್ಯಗಳನ್ನು ಬಳಸಿಕೊಳ್ಳುತ್ತಿದ್ದಾರೆ.

**ವೀರಶೈವ :** ವೀರಶೈವ ಲಿಂಗಾಯಿತರೆಂದೇ ಕರೆಯಲಾಗುವ ಇವರು ಜಿಲ್ಲೆಯ ಗೌರಿಬಿದನೂರು, ಬಾಗೇಪಲ್ಲಿ, ಗುಡಿಬಂಡೆ, ಚಿಕ್ಕಬಳ್ಳಾಪುರ, ಬಂಗಾರಪೇಟೆ, ಶಿಡ್ಲಘಟ್ಟ, ಮಾಲೂರು, ಕೋಲಾರಗಳಲ್ಲಿ ಹೆಚ್ಚಾಗಿರುವುದು ಕಂಡು ಬರುತ್ತದೆ. ವ್ಯವಸಾಯ, ವ್ಯಾಪಾರದಲ್ಲಿ ನಿರತರಾಗಿದ್ದ ಇವರು ಈಚೆಗೆ ಸರ್ಕಾರಿ ನೌಕರಿ, ಇತರೆ ವಿದ್ಯಮಾನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಮನೆಮಾತು ಕನ್ನಡವಾಗಿದ್ದು ತೆಲುಗನ್ನು ಬಲ್ಲವರಾಗಿದ್ದಾರೆ.

| | ಒಟ್ಟು ಭಾಷಿಕರು | ಪುರುಷರು | ಮಹಿಳೆಯರು |
|---|---|---|---|
| ಕನ್ನಡ ಏಕಭಾಷಿಕರು | ೩.೦ | ೩.೩ | ೪.೨ |
| ತೆಲುಗು ಏಕಭಾಷಿಕರು | ೬.೫ | ೫.೫ | ೭.೬ |
| ಕನ್ನಡ ತೆಲುಗು ದ್ವಿಭಾಷಿಕರು | ೧೦.೭ | ೧೨.೬ | ೧೦.೫ |
| ತೆಲುಗು ಕನ್ನಡ ದ್ವಿಭಾಷಿಕರು | ೬೮.೭ | ೭೨.೬ | ೬೫.೬ |

ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ ಅಂಶಗಳಿಂದ ಏಕಭಾಷಿಕರು ಒಟ್ಟಾರೆಯಾಗಿ ಮಹಿಳೆಯರೇ ಹೆಚ್ಚಾಗಿರುವುದು ಕನ್ನಡ ಹಾಗೂ ತೆಲುಗು ಏಕಭಾಷಿಕ ಸಂದರ್ಭದಲ್ಲಿ ಕಂಡು ಬರುತ್ತದೆ. ಇಲ್ಲಿನ ಜಾತಿಗಳು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದವರಾಗಿದ್ದು ಸಾಕ್ಷರತೆಯ ಪ್ರಮಾಣ ತೀರ ಕಡಿಮೆ ಇರುವುದು ಕಂಡು ಬರುತ್ತದೆ. ಇಲ್ಲಿ ಹೆಸರಿಸಿರುವ ಜಾತಿಗಳು ಬಹುತೇಕ ಮನೆಯ ಆವರಣಗಳಲ್ಲಿ ತೆಲುಗನ್ನೇ ಹೆಚ್ಚಾಗಿ ಬಳಸುವವರಾಗಿದ್ದಾರೆ. ತಮ್ಮ ತಮ್ಮ ಕುಟುಂಬಗಳಲ್ಲಿ ಜರುಗುವ ಹಬ್ಬ ಹರಿದಿನಗಳು, ಮದುವೆ ಮುಂಜಿ, ನಾಮಕರಣ ಇತ್ಯಾದಿ ಕಾರ್ಯಕ್ರಮಗಳಲ್ಲಿ ಸೇರುವಾಗ ಇಲ್ಲಿನ ಆವರಣಗಳಲ್ಲಿ ಹೆಚ್ಚಾಗಿ ತೆಲುಗನ್ನೇ ಬಳಸುತ್ತಿರುವುದು ಕಂಡು ಬಂದರೂ ವ್ಯವಹಾರಿಕ ಸಂದರ್ಭಗಳಲ್ಲಿ ಕನ್ನಡ ಭಾಷೆಯ ಕೌಶಲ್ಯಗಳನ್ನು ಚೆನ್ನಾಗಿ ಬಳಸುವುದು ಕಂಡು ಬಂದಿದೆ. ಸಾಕ್ಷರ ನೆಲೆಗಳಲ್ಲಿ ಕನ್ನಡ ಇಂಗ್ಲೀಷ್‌ನ್ನು ಹೆಚ್ಚಾಗಿ ರೂಢಿಗೆ ತಂದುಕೊಂಡಿದ್ದು ಹೆಚ್ಚಾಗಿ ಬಳಸುವುದು ಕಂಡುಬಂದಿದೆ. ಇಲ್ಲಿ ಕಂಡುಬರುವ ಅಗಸ, ಈಡಿಗ, ವಿಶ್ವಕರ್ಮ ಸಮುದಾಯಗಳು ಹೆಚ್ಚಾಗಿ ತಮ್ಮ ವೃತ್ತಿ ಆವರಣಗಳಲ್ಲಿ ಜನಸಮುದಾಯದೊಡನೆ ಕಸುಬಿನ ಕಾರಣಗಳಿಗಾಗಿ ಹೆಚ್ಚು ಹೆಚ್ಚು ಸಂಪರ್ಕ ಹೊಂದುತ್ತಿರುವ ಕಾರಣಗಳಿಂದ ಕನ್ನಡವನ್ನು ಎಲ್ಲಾ ನೆಲೆಗಳಲ್ಲಿ ಹೆಚ್ಚಾಗಿ ಬಳಸುತ್ತಿರುವುದು ಕಂಡು ಬಂದಿದೆ. ಈ ಜನಾಂಗಗಳಲ್ಲಿ ಬಹಳಷ್ಟು ಜನರು ವೃತ್ತಿಯಲ್ಲಿ ಪಲ್ಲಟಗೊಳ್ಳುತ್ತಿರುವುದರಿಂದಲೂ ಹೆಚ್ಚಾಗಿ ಕನ್ನಡ ತೆಲುಗು ದ್ವಿಭಾಷಿಕರಾಗುತ್ತಿರುವುದುಕಂಡು ಬಂದಿದೆ.

## ಇತರೆ ಜನಾಂಗಗಳ ಭಾಷಿಕರ ಕೋಷ್ಟಕ



ಇಲ್ಲಿಯವರೆಗೂ ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ ಅಂಶಗಳನ್ನು ಅವಲೋಕಿಸುವಾಗ ಸಾಮಾಜಿಕ ಭಿನ್ನಾಂಶಗಳಾದ ಜಾತಿ, ವರ್ಗ, ಕುಟುಂಬ, ವಯಸ್ಸು, ಹಳ್ಳಿ, ಪಟ್ಟಣ ಎಲ್ಲವೂ ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ಸಂದರ್ಭದಲ್ಲಿ ಮಹತ್ತರ ಪಾತ್ರವಹಿಸಿರುವುದು ಕಂಡು ಬರುತ್ತದೆ. ಸಾಮಾಜಿಕವಾಗಿ ದ್ವಿಭಾಷಿಕತೆಯ ಕಲಿಕೆ ಬಳಕೆಯ ನೆಲೆಗಳು ಭಿನ್ನವಾಗಿರುವುದು ಕಂಡು ಬಂದಿದೆ. ಕುಟುಂಬ ಹಾಗೂ ಜಾತಿಯ ಹಿನ್ನೆಲೆಯಲ್ಲಿ ನೋಡಿದಾಗಲೂ ಇದೇ ಅಂಶ ವ್ಯಕ್ತವಾಗುತ್ತದೆ. ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿ ಮೇಲ್ಜಾತಿಗಳೆಂದು ಪರಿಭಾವಿಸುವವರಲ್ಲಿ ಭಾಷೆ ಒಂದು ಪ್ರತಿಷ್ಠೆಯ ಅಂಶವಾಗಿರುವುದು ಕಾಣಬರುತ್ತದೆ. ಕರ್ನಾಟಕ ಸರ್ಕಾರದ ಭಾಷಾಭಿವೃದ್ಧಿ ಕಾರ್ಯಗಳು, ಆಡಳಿತದಲ್ಲಿ ಕನ್ನಡ ಮುಂತಾದ ಅಂಶಗಳ ಜಿಲ್ಲೆಯ ಎಲ್ಲಾ ನಗರದವರು ತೆಲುಗಿನ ನೆಲೆಯಿಂದ ಕನ್ನಡ ಭಾಷಿಕ ನೆಲೆಗಳಿಗೆ ಶೈಕ್ಷಣಿಕವಾಗಿ ಹೆಚ್ಚು ಹೆಚ್ಚಾಗಿ ಪಲ್ಲಟವಾಗುತ್ತಿರುವುದು ಕಂಡು ಬರುತ್ತಿದೆ. ತೆಲುಗಿನ ಪ್ರಭಾವವು ಕೋಲಾರ ಜಿಲ್ಲೆಯ ಕನ್ನಡದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿರುವುದರಿಂದ ಇಲ್ಲಿನ ಕನ್ನಡ ಭಾಷೆಯು ವಿಶೇಷ ರೀತಿಯಲ್ಲಿ ಉಪಭಾಷೆಯಾಗಿರುವುದು ಕಂಡುಬರುತ್ತದೆಯಲ್ಲದೆ ವ್ಯಾಕರಣ ಅಂಶಗಳಾದ ವಿಭಕ್ತಿ ಪ್ರತ್ಯಯಗಳು, ಧ್ವನಿಯ ನೆಲೆಗಳ ಉತ್ತರಸ್ಥಾನೀಯಗಳ ಇವೇ ಮೊದಲಾದವುಗಳಲ್ಲಿ ವ್ಯತ್ಯಾಸಗಳಾಗಿರುವುದು ಕಂಡು ಬಂದಿದೆ. ಹಾಗೆಯೇ ಹಳೆಯ ತಲೆಮಾರಿನಲ್ಲಿ ಕಾಣಬರುವ ಭಾಷಿಕರು ಕನ್ನಡವನ್ನಾಗಲೀ ತೆಲುಗನ್ನಾಗಲೀ ಮೌಖಿಕ ನೆಲೆಯಲ್ಲಿ ಬಳಸುತ್ತಿರುವುದು ಅರೆದ್ವಿಭಾಷಿಕತೆಗೆ ಕಾರಣವಾಗಿರುವುದು ಕಂಡು ಬಂದಿದೆ. ದ್ವಿಭಾಷಿಕರಾಗಲೀ ಅರೆದ್ವಿಭಾಷಿಕರಾಗಲೀ ತಮ್ಮ ತಮ್ಮ ನೆಲೆಗಳಲ್ಲಿ ದ್ವಿಭಾಷಾ ಸನ್ನಿವೇಶವನ್ನು ನಿರ್ವಹಿಸುವ ರೀತಿ ಕೂಡ ಭಿನ್ನವಾಗಿದೆ. ಕರ್ನಾಟಕ ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯನ್ನಾಗಿಸಿರುವ ಸಂದರ್ಭ ಇಲ್ಲಿ ಕನ್ನಡ ಭಾಷೆಗೆ ಹೆಚ್ಚಿನ ಪ್ರಾಧಾನ್ಯತೆ ದೊರೆತಿರುವ ಕಾರಣ ಕನ್ನಡ ಮುಂಚೂಣಿ ನೆಲೆಯಲ್ಲಿ ಪ್ರಾಧಾನ್ಯ ಪಡೆದು ಪ್ರಬಲ ಭಾಷೆಯಾಗುತ್ತಿರುವ ಸಂದರ್ಭಗಳು ಕಂಡು ಬಂದರೆ ತೆಲುಗು ಸಾಕ್ಷರತೆ ನೆಲೆಯಲ್ಲಿ ದುರ್ಬಲ ಗೊಳ್ಳುತ್ತಾ ಮೌಖಿಕ ನೆಲೆಗೆ ಮಾತ್ರ ಸರಿಯುತ್ತಿರುವುದು ಕಂಡು ಬಂದಿದೆ. ಇಂತಹವರು ತೆಲುಗನ್ನು ಮನೆಯ ಆವರಣ, ಮದುವೆ, ನಾಮಕರಣದಂಥ ತೀರಾ ಖಾಸಗಿ ನೆಲೆಗಳಲ್ಲಿ ಮಾತ್ರ ಪ್ರಧಾನವಾಗಿ ಬಳಸುತ್ತಿದ್ದು ಮಿಕ್ಕಂತೆ ಹೊರ ಆವರಣಗಳಾದ ಕೋರ್ಟು, ಸರಕಾರಿ ಕಚೇರಿ, ಶಾಲಾ-ಕಾಲೇಜುಗಳಂಥ ಕಡೆ ಕನ್ನಡವನ್ನು ಪ್ರಧಾನವಾಗಿ ಬಳಸುತ್ತಿರುವುದನ್ನು ಕಾಣಬಹುದು.

ವಲಸಿಗರು ಹಾಗೂ ವೈವಾಹಿಕ ಸಂಬಂಧಗಳಿಂದ ಆದ ದ್ವಿಭಾಷಿಕತೆಯ ಸಂದರ್ಭಗಳ ಅರೆದ್ವಿಭಾಷಿಕತೆಯನ್ನು ಹೆಚ್ಚಾಗಿಸಿರುವುದು ಕಾಣಬರುತ್ತದೆ. ಒಟ್ಟಾರೆ ಜಿಲ್ಲೆಯ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ನೆಲೆಗಳಲ್ಲಿ ದ್ವಿಭಾಷಿಕತೆಯ ಸ್ವರೂಪವನ್ನು ಅವಲೋಕಿಸಿದಾಗ ಸಾಮಾಜಿಕ ಭಿನ್ನಾಂಶಗಳು ಬಹಳಷ್ಟು ದ್ವಿಭಾಷಿಕತೆಯ ಭಿನ್ನತೆಗಳಿಗೆ ಕಾರಣವಾಗಿರುವುದು ಕಂಡು ಬರುತ್ತದೆ. ಹೀಗಾಗಿ ಸಾಮಾಜಿಕ ನೆಲೆಗಳಲ್ಲಿ ದ್ವಿಭಾಷಿಕತೆ ಒಂದೇ ರೀತಿ ಇರದೆ ಅದರ ಸಂರಚನೆಯಲ್ಲಿ ಭಿನ್ನ ಭಿನ್ನ ನೆಲೆಗಳಲ್ಲಿ ವ್ಯತ್ಯಸ್ತ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿರುವ ಅಂಶ ವೇದ್ಯವಾಗುತ್ತದೆ.

ಅಧ್ಯಾಯ ೬

# ಶೈಕ್ಷಣಿಕ ಸಂದರ್ಭದಲ್ಲಿ ದ್ವಿಭಾಷಿಕ ಮಕ್ಕಳ ಬೆಳವಣಿಗೆ ಮತ್ತು ಪರಿಣಾಮ

೧. ಕನ್ನಡದ ಶಿಕ್ಷಣ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ತೆಲುಗು ಭಾಷಿಕ ಮಕ್ಕಳು

೨. ತೆಲುಗು ಭಾಷಿಕ ಮಕ್ಕಳು ತೆಲುಗಿನ ಸಾಮಾಜಿಕ ಸಂದರ್ಭದಲ್ಲಿ

೩. ಕನ್ನಡ ಮತ್ತು ತೆಲುಗು ಭಾಷಾ ಬಳಕೆ ಸಂದರ್ಭದಲ್ಲಿ ಮಕ್ಕಳು

೬

# ಶೈಕ್ಷಣಿಕ ಸಂದರ್ಭದಲ್ಲಿ ದ್ವಿಭಾಷಿಕ ಮಕ್ಕಳ ಬೆಳವಣಿಗೆ ಮತ್ತು ಪರಿಣಾಮ

## ಶೈಕ್ಷಣಿಕ ಸಂದರ್ಭದಲ್ಲಿ ದ್ವಿಭಾಷಿಕ ಮಕ್ಕಳು

ಕೋಲಾರ ಜಿಲ್ಲೆಯು ಕನ್ನಡ ತೆಲುಗಿನ ಸಹಜ ದ್ವಿಭಾಷಾ ಪ್ರದೇಶ. ಕರ್ನಾಟಕ ಏಕೀಕರಣಕ್ಕೂ ಮುಂಚಿನ ದಿನಗಳಲ್ಲಿ ಕೋಲಾರ ಜಿಲ್ಲೆಯ ಬಹುತೇಕ ಪ್ರದೇಶಗಳು ಈಗಿನ ಚಿತ್ತೂರು ಜಿಲ್ಲೆಗೆ ಸೇರಿದ್ದವು. ಹೀಗಾಗಿ ಇಂದು ಜಿಲ್ಲೆಯಲ್ಲಿ ೪೬.೮೪%ರಷ್ಟು ತೆಲುಗು ಭಾಷಿಕರಿದ್ದರೆ, ಕನ್ನಡ ಭಾಷಿಕರ ಸಂಖ್ಯೆ ಕೇವಲ ೩.೨%ರಷ್ಟಿದೆ. ಕರ್ನಾಟಕದಲ್ಲಿ ದ್ವಿಭಾಷಿಕತೆಯಾಗಲಿ ಬಹುಭಾಷಿಕತೆಯಾಗಲಿ ಒಂದು ಸಹಜವಾದ ಪ್ರಕ್ರಿಯೆ. ಇಲ್ಲಿನ ದ್ವಿಭಾಷಿಕ ಸಂದರ್ಭವು ನಿರ್ಮಾಣವಾಗುತ್ತಿರುವುದು ಮುಖ್ಯವಾಗಿ ಎರಡು ರೀತಿಯ ನೆಲೆಗಳಲ್ಲಿ. ಒಂದು ಸಾಮಾಜಿಕ ನೆಲೆಯಲ್ಲಿ. ಎರಡನೆಯದು ಶೈಕ್ಷಣಿಕ ನೆಲೆಯಲ್ಲಿ. ಎರಡು ನೆಲೆಗಳೂ ಕೂಡ ಭಿನ್ನ ರೀತಿಯ ಭಾಷಾ ಸ್ವರೂಪವುಳ್ಳದ್ದಾಗಿವೆ. ಸಾಮಾಜಿಕ ನೆಲೆಯಲ್ಲಿ ಉಂಟಾಗುವ ದ್ವಿಭಾಷಾ ಪರಿಸರದಲ್ಲಿ ಭಾಷಿಕರು ಕೇವಲ ಮೌಖಿಕ ನೆಲೆಯಲ್ಲಷ್ಟೇ ದ್ವಿಭಾಷಿಕರಾಗಿದ್ದರೆ, ಶೈಕ್ಷಣಿಕ ನೆಲೆಯಲ್ಲಿ ಉಂಟಾಗುವ ದ್ವಿಭಾಷಾ ಪರಿಸರದ ದ್ವಿಭಾಷಿಕರು ಭಾಷಾ ಕೌಶಲ್ಯಗಳಾದ ಬರಹದ ನೆಲೆಯಲ್ಲಿ ಅಂದರೆ ಸಾಕ್ಷರತೆಯ ನೆಲೆಯಲ್ಲಿ ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ. ಒಟ್ಟಾರೆ ಭಾರತದ ಸಂದರ್ಭ ಹೇಗೋ ಹಾಗೆಯೇ ಕರ್ನಾಟಕದಲ್ಲಿಯೂ ಸಹ ಸಾಮಾಜಿಕ ನೆಲೆಯಲ್ಲಿ ದ್ವಿಭಾಷಿಕತೆಯ ಮೌಖಿಕ ಕೌಶ್ಯಲಗಳು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಂಡಿವೆ. ಆದರೆ ಶಿಕ್ಷಣ ಸಂದರ್ಭದಲ್ಲಿ ಇದರ ಪ್ರಮಾಣ ಕಡಿಮೆ.

ದ್ವಿಭಾಷಿಕತೆಯನ್ನು ಕುರಿತ ಹಾಗೆ ಕೆಲವು ತಪ್ಪು ತಿಳುವಳಿಕೆಗಳು ಇವೆ. ಅವೆಂದರೆ ದ್ವಿಭಾಷಿಕತೆಯು ಸಮಾಜದ ಅಭಿವೃದ್ಧಿಗಾಗಲಿ ಅಥವಾ ಭಾಷೆಯ ಅಭಿವೃದ್ಧಿಗಾಗಲಿ ಅಡ್ಡಿಯನ್ನುಂಟುಮಾಡುತ್ತದೆಂಬ ವಾದ. ಪಾಶ್ಚಾತ್ಯ ಸಂದರ್ಭದಲ್ಲಿ ಕೆಲ ಭಾಷಾವಿಜ್ಞಾನಿಗಳು ಕೇವಲ ಅಲ್ಲಿನ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ದ್ವಿಭಾಷಿಕತೆ ಎಂಬುದು ಒಂದು ಸಹಜವಾದ ಭಾಷಿಕ ಪ್ರಕ್ರಿಯೆ ಎಂದು ತಿಳಿಯದೆ ಹೇಳಿದ ಮಾತು. ಅವರ ಈ ವಾದಕ್ಕೆ ಕಾರಣ ತೃತೀಯ ಜಗತ್ತಿನ ರಾಷ್ಟ್ರಗಳಾದ ಭಾರತ

ಸೇರಿದಂತೆ ಏಷ್ಯಾ, ಆಫ್ರಿಕಾ ದೇಶಗಳಲ್ಲಿನ ಆರ್ಥಿಕವಾಗಿ ಹಿಂದುಳಿದ ಸನ್ನಿವೇಶ ಆದರೆ ದೇಶವೊಂದರ ಹಿಂದುಳಿಯುವಿಕೆಗೂ ದ್ವಿಭಾಷಿಕತೆಗಾಗಿ ಯಾವುದೇ ರೀತಿಯ ಸಂಬಂಧವಿಲ್ಲ. ಎರಡೂ ಭಿನ್ನ ರೀತಿಯ ಸಂದರ್ಭಗಳು. ಕೆನಡಾ, ಅಮೆರಿಕಾ, ಬೆಲ್ಜಿಯಂ, ಸ್ವಿಟ್ಜರ್‌ಲೆಂಡ್‌ಗಳಲ್ಲಿ, ಸ್ಕ್ಯಾಂಡಿನೇವಿಯನ್ ದೇಶಗಳಲ್ಲಿ ಒಂದಾದ ಫಿನ್‌ಲೆಂಡ್ ಇಲ್ಲೆಲ್ಲಾ ಒಂದಕ್ಕೆ ಹೆಚ್ಚಿನ ಭಾಷೆಯನ್ನು ಆಡುವ ಭಾಷಿಕ ಸಮುದಾಯಗಳಿವೆ. ಇದೇ ಸಂದರ್ಭದಲ್ಲಿ ಮೆಕ್ಸಿಕೋ, ಆಫ್ರಿಕಾದ ಅತ್ಯಂತ ಬಡರಾಷ್ಟ್ರ ಸೋಮಾಲಿಯಾ, ಆಲ್ಬೇನಿಯಾದಂಥ ದೇಶಗಳಲ್ಲಿ ಏಕಭಾಷಿಕ ಸಮುದಾಯಗಳೇ ಇದ್ದರೂ ಅವು ಇದುವರೆಗೂ ಹೆಚ್ಚಿನ ರೀತಿಯಲ್ಲಿ ಆರ್ಥಿಕ ಪ್ರಗತಿಯನ್ನು ಕಂಡಿಲ್ಲ.

ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಸಮಾಜಶಾಸ್ತ್ರಜ್ಞರಲ್ಲಿ, ಮನಃಶಾಸ್ತ್ರಜ್ಞರಲ್ಲಿ, ಭಾಷಾಶಾಸ್ತ್ರಜ್ಞರಲ್ಲಿ ಹಾಗೂ ಶಿಕ್ಷಣ ತಜ್ಞರಲ್ಲಿ ದ್ವಿಭಾಷಿಕತೆ ಹಾಗೂ ಅದರ ಸಾಮಾಜಿಕ ಪರಿಣಾಮಗಳನ್ನು ಕುರಿತು ಹಲವು ರೀತಿಯ ಅಭಿಪ್ರಾಯಗಳು ಭಿನ್ನವಾಗಿವೆ. ಮಕ್ಕಳ ಶೈಕ್ಷಣಿಕ ಸಂದರ್ಭವನ್ನು ಕುರಿತು ಅವಲೋಕಿಸಿದಾಗ ದ್ವಿಭಾಷಿಕತೆಯು ಅಲ್ಲಿ ಅತ್ಯಂತ ಸೂಕ್ಷ್ಮರೀತಿಯ ಸಂವೇದನಾ ಸಂದರ್ಭವಾಗಿ ಕಾಣಿಸಿಕೊಳ್ಳುತ್ತದೆ. ದ್ವಿಭಾಷಿಕತೆಯು ಶೈಕ್ಷಣಿಕ ಸಂದರ್ಭದಲ್ಲಿ ಮಕ್ಕಳ ಬೌದ್ಧಿಕ ವಿಕಾಸಕ್ಕೆ ಅಡ್ಡಿಯಾಗುದೆಂಬ ಸಾಮಾನ್ಯ ತಿಳುವಳಿಕೆ ಒಂದೆಡೆಯಿದ್ದರೆ, ದ್ವಿಭಾಷಿಕ ಮಕ್ಕಳು ಏಕಭಾಷಿಕ ಮಕ್ಕಳಿಗಿಂತ ಹೆಚ್ಚಿನ ತಿಳುವಳಿಕೆಯನ್ನು ಪಡೆಯುತ್ತಾರೆಂಬ ಅಭಿಪ್ರಾಯ ಮತ್ತೊಂದು ಎಡೆಯಲ್ಲಿದೆ. ಆದರೆ ವಿದ್ಯಾರ್ಥಿಗಳ ಬುದ್ಧಿಮತ್ತೆ(ಐ.ಕ್ಯೂ)ಯನ್ನು ಮಾಪನ ಮಾಡತಕ್ಕ ಪರೀಕ್ಷೆಗಳಲ್ಲಿ ಏಕಭಾಷಿಕ ವಿದ್ಯಾರ್ಥಿಗಳಿಗಿಂತ ದ್ವಿಭಾಷಿಕ ವಿದ್ಯಾರ್ಥಿಗಳು ಕಡಿಮೆ ಅಂಕಗಳನ್ನು ಪಡೆಯುತ್ತಾರೆಂದು ತೋರಿಸುವ ಪ್ರಯೋಗಗಳು ಜಾಸ್ತಿ ಇವೆ. ದ್ವಿಭಾಷಾ ವಿದ್ಯಾರ್ಥಿಗಳು ಗ್ರಹಿಕೆಯ ಸಂಪೂರ್ಣ ಸಾಮರ್ಥ್ಯಗಳನ್ನು ಪ್ರಕಟಿಸಲು ಇರುವ ಅವಕಾಶಗಳಿಂದ ವಂಚಿತರಾಗಿರುತ್ತಾರೆಂದು ಸಾಧಿಸಲು ಈ ಪ್ರಯೋಗಗಳು ನಡೆದಿವೆಂಬುದನ್ನು ಗಮನಿಸಿದಾಗ ಇವು ಪೂರ್ವಗ್ರಹಪೀಡಿತವಾಗಿರುವುದು ಕಂಡುಬರುತ್ತದೆ. ಇದೇ ಪ್ರಯೋಗಗಳನ್ನು ಪುನಹರೂಪಿಸಿ ಬಳಸಿದಾಗ ಇದೇ ದ್ವಿಭಾಷಿಕ ವಿದ್ಯಾರ್ಥಿಗಳು ಏಕಭಾಷಿಕ ವಿದ್ಯಾರ್ಥಿಗಳಿಗೆ ಸರಿಸಾಟಿಯಾಗಿ, ಕೆಲವೊಮ್ಮೆ ಅದಕ್ಕೂ ಮಿಗಿಲಾಗಿ ಇರುವುದು ಗೊತ್ತಾಗಿದೆ. ಇದರಿಂದ ತಿಳಿಯುದೇನೆಂದರೆ ಶೈಕ್ಷಣಿಕ ಹಿನ್ನಡೆಗೂ ವಿದ್ಯಾರ್ಥಿ ಸಮುದಾಯದ ದ್ವಿಭಾಷಿಕ ಸನ್ನಿವೇಶಕ್ಕೂ ಯಾವುದೇ ರೀತಿಯ ಸಂಬಂಧವಿಲ್ಲ ಎಂಬುದು. ಹೀಗಿದ್ದರೂ ದ್ವಿಭಾಷಿಕ ವಿದ್ಯಾರ್ಥಿಗಳು ಶೈಕ್ಷಣಿಕ ನೀತಿಯಲ್ಲಿ ಅಡಕವಾಗಿರುವ ದ್ವಿಭಾಷಿಕತೆಯ ವಿರೋಧದ ತಿಳುವಳಿಕೆಯಿಂದಾಗಿ ಕಷ್ಟವನ್ನು ಅನುಭವಿಸುವುದು ನಿಂತಿಲ್ಲ (ಕೆ.ವಿ. ನಾರಾಯಣ ೧೯೯೮, ಪುಟ ೧೬) ಎಂಬ ಮಾತು ಸ್ಪರ್ಶದಷ್ಟೇ ಸತ್ಯ ಎಂಬುದು ಗೋಚರವಾಗುತ್ತದೆ.

(ಮಗುವೊಂದರ ಶೈಕ್ಷಣಿಕ ಪ್ರಗತಿ ಮಾತೃಭಾಷಾ ಶಿಕ್ಷಣ ಉತ್ತಮವೆಂಬ ಅಭಿಪ್ರಾಯವನ್ನು ಮಹಾತ್ಮಾ ಗಾಂಧಿಜಿಯವರಿಂದ ಮೊದಲ್ಗೊಂಡು ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಯುನೆಸ್ಕೋ,

೧೯೬೪-೬೬ರ ಅವಧಿಯ ಭಾರತ ಸರ್ಕಾರದ ಶಿಕ್ಷಣ ಆಯೋಗ ಎಲ್ಲವೂ ಮಾತೃ ಭಾಷಾ ಶಿಕ್ಷಣವನ್ನು ಅನುಮೋದಿಸುತ್ತಾ ಬಂದಿವೆ. ಇದೇ ಅರ್ಥದಲ್ಲಿ ಭಾರತ ಸರ್ಕಾರದ ಅಧಿಸೂಚನೆಯೊಂದು ೧೯೭೫ನ್ನು ರಾಜ್ಯಭಾಷಾ ವರ್ಷವನ್ನಾಗಿ ಆಚರಿಸಲಾಯಿತು). ಇಂದು ಎಲ್ಲಾ ಭಾಷಾಯೋಜನೆಗಳು ಏಕಭಾಷಿಕತೆಯ ಪರವಾಗಿ ಎಂದರೆ ಅಧಿಕಾರಸ್ಥ ಭಾಷೆಯ ಪರವಾಗಿ ದುಡಿಯುತ್ತಿವೆ. ಇದು ಜಗತ್ತಿನ ಭಾಷಿಕ ಸಮುದಾಯಗಳಿಗೆ ಆತಂಕಕಾರಿ ಸ್ಥಿತಿ. ಈ ಸನ್ನಿವೇಶ ಬದಲಾಯಿಸಿದಾದರೆ ದೀರ್ಘಕಾಲದಿಂದ ದ್ವಿಭಾಷಿಕ ಹಾಗೂ ಬಹುಭಾಷಿಕ ಸನ್ನಿವೇಶಗಳನ್ನು ಅಧ್ಯಯನ ಮಾಡಿ ಕನ್ನಡ ದ್ವಿಭಾಷಿಕತೆಯ ಬಗೆಗಿರುವ ತಪ್ಪು ತಿಳಿವಳಿಕೆಗಳನ್ನು ಹೋಗಲಾಡಿಸುವುದು.

ಕೋಲಾರ ಜಿಲ್ಲೆ ಸಹಜವಾಗೇ ಕನ್ನಡ ತೆಲುಗು ದ್ವಿಭಾಷಾ ಪ್ರದೇಶ. ಇಲ್ಲಿನ ವೈಶಿಷ್ಟವೆಂದರೆ ೪೬.೮೪% ರಲ್ಲಿರುವ ತೆಲುಗು ಮನೆಮಾತಾಗಿರುವ ಹೆಚ್ಚಿನ ಶಿಕ್ಷಕರು ಕನ್ನಡ ಮಾಧ್ಯಮಗಳಲ್ಲಿ ಕಲಿಯುತ್ತಿರುವುದು ಇದರಿಂದ ಸಾಕ್ಷರತೆಯ ನೆಲೆಗಳಲ್ಲಿ ಅಂದರೆ ಓದುವ, ಬರೆಯುವ ಭಾಷಾ ಕೌಶಲ್ಯಗಳಲ್ಲಿ ಹೆಚ್ಚಿನ ಪ್ರಗತಿ ಸಾಧಿಸಿರುವುದು ತೆಲುಗು ಮಾಧ್ಯಮದ ಶಾಲೆಗಳು ಜಿಲ್ಲೆಗಳಲ್ಲಿ ಇಲ್ಲ. ಕೆ.ಜಿ.ಎಫ್‌ನ ಚಿನ್ನದ ಗಣಿ ಪ್ರದೇಶದಲ್ಲಿದ್ದ ದೇಶದಲ್ಲಿದ್ದ ಏಕೈಕ ತೆಲುಗು ಶಾಲೆಯನ್ನು ೪ ವರ್ಷಗಳ ಹಿಂದೆ ವಿದ್ಯಾರ್ಥಿಗಳ ಕೊರತೆಯಿಂದಾಗಿ ಸಂಪೂರ್ಣ ಮುಚ್ಚಲಾಗಿದ್ದು, ತೆಲುಗನ್ನು ಮನೆಮಾತಾಗಿ ಉಳ್ಳವರೆಲ್ಲ ತಮ್ಮ ಮಕ್ಕಳನ್ನು ಹೆಚ್ಚಾಗಿ ಕನ್ನಡ ಅಥವಾ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ. ಸಾಕ್ಷರತೆಯ ನೆಲೆಯಲ್ಲಿ ತೆಲುಗು ಭಾಷಿಕ ಕೌಶಲ್ಯಗಳನ್ನು ಕಲಿಯಲು ಇದ್ದ ಏಕೈಕ ಅವಕಾಶವೂ ಈಗ ತೆಲುಗು ಭಾಷಿಕ ಮಕ್ಕಳಿಗೆ ಇಲ್ಲದಾಗಿದೆ. ಇದಕ್ಕೆ ಕಾರಣ ಕರ್ನಾಟಕ ಏಕೀಕರಣದ ತರುವಾಯ ಕರ್ನಾಟಕ ಸರ್ಕಾರದ ಭಾಷಾನೀತಿ, ಸರ್ಕಾರದ ಆಡಳಿತಾತ್ಮಕ ಭಾಷಾನೀತಿಯಿಂದ ತೆಲುಗು ಭಾಷಿಕರು ಅನಿವಾರ್ಯವಾಗಿ ತೆಲುಗಿನಿಂದ ಕನ್ನಡಕ್ಕೆ ಭಾಷಾಪಲ್ಲಟವಾಗುತ್ತಿರುವುದು ಕಂಡುಬಂದಿದೆ. ಇಂತಹ ಸಂದರ್ಭದಲ್ಲಿ ತೆಲುಗು ಭಾಷಿಕರಾದವರು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದಲ್ಲಿ ಓದಿಸುತ್ತಿರುವ ಸಂದರ್ಭದಲ್ಲಿ ತೆಲುಗು-ಕನ್ನಡ ದ್ವಿಭಾಷಿಕ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ಕುರಿತು ಕೋಲಾರ ಜಿಲ್ಲೆಯ ಮುಳಬಾಗಿಲು, ಚಿಂತಾಮಣಿ, ಶ್ರೀನಿವಾಸಪುರ ಹಾಗೂ ಜಿಲ್ಲಾ ಕೇಂದ್ರ ಕೋಲಾರ ಸೇರಿದಂತೆ ಪ್ರಾಥಮಿಕ, ಮಾಧ್ಯಮಿಕ ಪ್ರಾಥಶಾಲಾ ಹಂತದಲ್ಲಿ ಸಮೀಕ್ಷೆ ನಡೆಸಿದಾಗ ತಿಳಿದುಬಂದ ಮಾಹಿತಿಯನ್ನು ಆಧರಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ಹೀಗೆ ವಿಶ್ಲೇಷಿಸುವಾಗ,

೧. ಕನ್ನಡ ಸಾಮಾಜಿಕ ನೆಲೆಗಳು

೨. ತೆಲುಗು ಸಾಮಾಜಿಕ ನೆಲೆಗಳು

೩. ಕನ್ನಡ ತೆಲುಗು ಸಾಮಾಜಿಕ ನೆಲೆಗಳು

ಎಂದು ಮೂರು ವಿಧವಾಗಿ ವಿಂಗಡಿಸಿಕೊಂಡು ತನ್ಮೂಲಕ ಇಲ್ಲಿನ ದ್ವಿಭಾಷಿಕ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ಗುರ್ತಿಸುವ ಕಾರ್ಯ ಮಾಡಲಾಗಿದೆ.

## ೬.೧. ಕನ್ನಡ ಸಾಮಾಜಿಕ ನೆಲೆಗಳು ಹಾಗೂ ತೆಲುಗು ಭಾಷಿಕ ಮಕ್ಕಳು

ಜಿಲ್ಲೆಯ ಬಹುತೇಕ ತೆಲುಗು ಭಾಷಿಕರು ತಮ್ಮ ದಿನನಿತ್ಯದ ವ್ಯವಹಾರಿಕ ಕಾರ್ಯಗಳಿಗಾಗಿ ಕನ್ನಡ ಭಾಷಿಕರೊಂದಿಗೆ ಬೆರೆತು ಬದುಕು ಸಾಗಿಸುವ ಸಂದರ್ಭದಲ್ಲಿ ಕನ್ನಡದ ಸಾಮಾಜಿಕ ನೆಲೆಗಳಲ್ಲಿ ತಮ್ಮನ್ನು ಅನಾವರಣಗೊಳಿಸಿಕೊಳ್ಳುವ ಅನಿವಾರ್ಯತೆಗೆ ಸಿಲುಕಿವೆ. ಇಂತಹ ಪರಿಸರದಲ್ಲಿ ಬೆಳೆಯುತ್ತಿರುವ ತೆಲುಗು ಭಾಷಿಕ ಮಕ್ಕಳು ಸಹಜವಾಗಿಯೇ ತೆಲುಗಿನ ಜೊತೆಗೆ ಕನ್ನಡ ಭಾಷೆಯನ್ನು ಕಲಿಯುವ ಸನ್ನಿವೇಶ ನಿರ್ಮಾಣವಾಗಿದೆ. ಭಾಷಾ ಬಳಕೆ ಆವರಣಗಳಾದ ಕುಟುಂಬ ಮತ್ತು ಅದಕ್ಕೆ ಪೂರ್ವಸನ್ನಿವೇಶಗಳಾದ ಮದುವೆ, ನಾಮಕರಣಗಳಂಥ ಸಂದರ್ಭಗಳಲ್ಲಿ ತೆಲುಗು ಹೆಚ್ಚು ಬಳಕೆಯಾಗುತ್ತಿದ್ದರೆ, ಇನ್ನಿತರ ಆವರಣಗಳಲ್ಲಿ ಕನ್ನಡವೇ ಹೆಚ್ಚಾಗಿ ಬಳಕೆಯಾಗುತ್ತಿರುವ ಸಂದರ್ಭಗಳಿವೆ. ಶಿಕ್ಷಣದ ಸಂದರ್ಭದಲ್ಲಿ ತೆಲುಗು ಭಾಷಿಕ ಮಕ್ಕಳು ಕನ್ನಡ ಮಾಧ್ಯಮದಲ್ಲಿ ಓದುವ ಪ್ರಕ್ರಿಯೆಗೆ ಒಳಗಾದಾಗ ಮೊಟ್ಟಮೊದಲು ಸಾಕ್ಷರತೆಯ ನೆಲೆಯಲ್ಲಿ ಬರವಣಿಗೆ ಅಂದರೆ ಕನ್ನಡ ಲಿಪಿಯನ್ನು ಕಲಿಯುವ ಕೌಶಲ್ಯಕ್ಕೆ ಒಳಗಾಗುತ್ತವೆ. ಹೀಗಾಗಿ ತೆಲುಗಿನ ಸಾಕ್ಷರತೆಗಿಂತ ಕನ್ನಡ ಸಾಕ್ಷರತಾ ಕೌಶಲ್ಯಕ್ಕೆ ತೆಲುಗು ಭಾಷಿಕ ಮಕ್ಕಳು ಒಳಗಾಗುತ್ತಿರುವುದು ಹಾಗೂ ತೆಲುಗನ್ನು ಕೇವಲ ಮೌಖಿಕ ನೆಲೆಯಲ್ಲಿಯೂ ಬಳಸುತ್ತಿರುವುದರಿಂದ ತೆಲುಗು ಲಿಪಿಯನ್ನು ಬರವಣಿಗೆ, ಓದುವ ನೆಲೆಯಲ್ಲಿ ಬಳಸುವ ಸಂದರ್ಭಗಳು ಇಲ್ಲ. ಹೀಗಾಗಿ ತೆಲುಗು ಭಾಷಿಕ ಮಕ್ಕಳು ಶಿಕ್ಷಣ ಪ್ರಗತಿಯ ಮೇಲೆ ತೆಲುಗು ಭಾಷೆಯ ಪ್ರಭಾವ ಅಷ್ಟಾಗಿ ಇಲ್ಲ. ಪ್ರಾಥಮಿಕ ಶಾಲಾ ಹಂತದಲ್ಲಿ ಮಾತ್ರ ತೆಲುಗು ಭಾಷಿಕ ಮಕ್ಕಳು ಉಚ್ಚಾರಣ ದೋಷವನ್ನು ಕನ್ನಡ ಕಲಿಕೆಯ ಹಂತದಲ್ಲಿ ಎಸಗುತ್ತಿರುವುದು ಕಂಡುಬಂದಿದೆ. ಆದರೆ ಇದೇ ಹಂತದಲ್ಲಿ ಕಲಿಯುತ್ತಿರುವ ಕನ್ನಡ ಭಾಷಿಕ ಮಕ್ಕಳಿಗಿಂತಲೂ ಅಂತಹ ಭಿನ್ನವಾಗೇನೂ ಈ ರೀತಿಯ ದೋಷ ಕಂಡುಬಂದಿಲ್ಲ. ಮಾಧ್ಯಮಿಕ ಶಾಲಾ ಹಂತದ ಹೊತ್ತಿಗೆ ಈ ಭಾಷಾ ಕೌಶಲ್ಯಗಳು ಶಿಕ್ಷಣದ ಮೂಲಕ ಹೆಚ್ಚು ಹೆಚ್ಚಾಗಿ ಸುಲಲಿತವಾಗುತ್ತಾ ಹೋಗುತ್ತಿರುವುದು ಕಂಡುಬಂದಿದೆ. ಪ್ರಾಥಮಿಕ ಹಂತದಲ್ಲಿ ಈ ತೆಲುಗು ಭಾಷಿಕ ಮಕ್ಕಳಿಗೆ ಇದ್ದ ದೋಷಗಳು ಕಾಣದಾಗುತ್ತಿರುವುದು ಕಂಡುಬರುತ್ತದೆ. ಇದರಿಂದಾಗಿ ತೆಲುಗು ಕನ್ನಡ ದ್ವಿಭಾಷಿಕ ಮಕ್ಕಳು ಶಿಕ್ಷಣದ ಹಂತದಲ್ಲಿಯೂ ಒಳ್ಳೆಯ ಪ್ರಗತಿ ಸಾಧಿಸುತ್ತಿದ್ದಾರಲ್ಲದೆ ಇವರಿಗೆ ಯಾವುದೇ ರೀತಿಯ ಅಡಚಣೆಗಳು ಎದುರಾಗಿಲ್ಲ. ಅಷ್ಟೇ ಅಲ್ಲದೆ ಅವರಿಗೆ ಯಾವುದೇ ಹಂತದಲ್ಲಿ ದ್ವಿಭಾಷಿಕತೆಯಿಂದ ತೊಂದರೆ ಆಗುತ್ತಿಲ್ಲವೆಂಬ ಸಂಗತಿ ತಿಳಿದುಬಂದಿದೆ. ಕನ್ನಡದ ಸಾಮಾಜಿಕ ಸಂದರ್ಭದಲ್ಲಿ ಒಳಗಾಗುತ್ತಿರುವ ಈ ತೆಲುಗು-ಕನ್ನಡ ದ್ವಿಭಾಷಿಕ ಮಕ್ಕಳು ಸಹಜರೀತಿಯಲ್ಲೆ ಕಲಿಕೆಯಲ್ಲಿ ಕನ್ನಡ ಭಾಷಿಕ ಮಕ್ಕಳಿಗೆ ಸಮನಾಗಿರುವುದು ಕಂಡುಬಂದಿದೆ.

## ೬.೨. ತೆಲುಗಿನ ಸಾಮಾಜಿಕ ನೆಲೆಗಳು ಹಾಗೂ ತೆಲುಗು ಭಾಷಿಕ ಮಕ್ಕಳು

ಕೋಲಾರ ಜಿಲ್ಲೆಯ ಬಹುತೇಕ ಭಾಗ ಪಶ್ಚಿಮ ಭಾಗವೊಂದನ್ನು ಬಿಟ್ಟರೆ ಆಂಧ್ರಪ್ರದೇಶದ ಗಡಿಯನ್ನು ಹೊಂದಿಕೊಂಡಿದೆ. ಜಿಲ್ಲೆಯಲ್ಲಿ ಬಹುತೇಕ ತೆಲುಗನ್ನು ಮನೆಯ ಮಾತನ್ನಾಗಿ ಉಳ್ಳವರೇ ಆಗಿದ್ದು, ಮೌಖಿಕ ನೆಲೆಯಲ್ಲೂ ಭಾಷಾ ಸಂಗೋಪನಾ ಕಾರ್ಯ ಹೆಚ್ಚಾಗಿದೆ. ಭಾಷಾ ಬಳಕೆಯ ಆವರಣಗಳಲ್ಲಿ ಹೆಚ್ಚಾಗಿ ತೆಲುಗನ್ನೇ ಮೌಖಿಕ ನೆಲೆಯಲ್ಲಿ ಬಳಸಲಾಗುತ್ತಿದೆ. ಹೆಚ್ಚಾಗಿ ದೈನಂದಿನ ವ್ಯವಹಾರಗಳಲ್ಲಿ ತೆಲುಗನ್ನೇ ಬಳಸಿದರೂ ಶಾಲಾ ಆವರಣದಲ್ಲಿ ಮಾತ್ರ ಕನ್ನಡಕ್ಕೆ ಪಲ್ಲಟಗೊಳ್ಳುತ್ತಿರುವುದು ಕಂಡುಬಂದಿದೆ. ಇಲ್ಲಿನ ಬಹುತೇಕ ತೆಲುಗು ಭಾಷಿಕ ಮಕ್ಕಳು ಕೃಷಿಕೂಲಿಕಾರ್ಮಿಕರ ಮಕ್ಕಳಾಗಿದ್ದು, ಆರ್ಥಿಕವಾಗಿಯಾಗಲಿ, ಸಾಮಾಜಿಕವಾಗಿಯಾಗಲೀ ಬಹಳಷ್ಟು ಹಿಂದುಳಿದಿರುವ ಕಾರಣ ಶೈಕ್ಷಣಿಕವಾಗಿಯೂ ಹೆಚ್ಚೇನೂ ಪ್ರಗತಿ ಸಾಧಿಸಿಲ್ಲದಿರುವುದು ಕಂಡುಬರುತ್ತದೆ. ಹೀಗಾಗಿ ಇಂತಹ ಹಿಂದುಳಿದ, ದಲಿತ ವರ್ಗದ ಕುಟುಂಬಗಳಿಂದ ಬಂದ ಈ ಮಕ್ಕಳು ಕನ್ನಡ ಮಾಧ್ಯಮದ ಶಾಲೆಗಳಿಗೆ ಓದಲು ಬರುತ್ತಿರುವ ಸಂದರ್ಭದಲ್ಲಿ ಅವರ ಶೈಕ್ಷಣಿಕ ಪ್ರಗತಿ ತೊಡಕಿನದಾಗಿದ್ದಾಗಿದೆ. ಈ ಸಂದರ್ಭದಲ್ಲಿ ಕಂಡುಬರುತ್ತಿರುವ ತೆಲುಗು ಭಾಷಾ ಮಕ್ಕಳ ಕಲಿಕೆಯ ಸಾಮರ್ಥ್ಯದ ಜೊತೆಗೆ ಕನ್ನಡದಲ್ಲಿ ಆ ಮಕ್ಕಳ ಅಭಿವ್ಯಕ್ತಿ ಸಾಮರ್ಥ್ಯವನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಹಾಗೆಯೆ ಆ ಮಕ್ಕಳ ಓದು ಹಾಗೂ ಬರಹದ ನೆಲೆಯಲ್ಲಿ ಕಂಡುಬರುವ ಭಾಷಾ ದೋಷಗಳ ಕುರಿತಾಗಿ ಚರ್ಚಿಸಲಾಗಿದೆ.

### ತೆಲುಗು ಭಾಷಿಕ ಮಕ್ಕಳಲ್ಲಿನ ಕನ್ನಡದ ಕಲಿಕೆ ಹಾಗೂ ಅಭಿವ್ಯಕ್ತಿ ನೆಲೆಗಳು

ದಟ್ಟವಾದ ತೆಲುಗು ಭಾಷಿಕ ಪ್ರದೇಶವಾದ ಕೋಲಾರ ಜಿಲ್ಲೆಯ ಸಂದರ್ಭವನ್ನು ಗಮನಿಸಿದಾಗ ಪ್ರಾಥಮಿಕ ಶಾಲಾ ಹಂತದಲ್ಲಿ ತೆಲುಗು ಭಾಷಿಕ ಮಕ್ಕಳ ಕನ್ನಡ ಭಾಷಾ ಕಲಿಕೆಯು ನಿಧಾನಗತಿಯಲ್ಲಿ ಸಾಗಿರುವುದು ಕಂಡುಬಂದಿದೆ. ಕನ್ನಡ ಭಾಷಿಕ ಮಕ್ಕಳ ಕಲಿಕೆಯ ವೇಗಕ್ಕಿಂತ ತೆಲುಗು ಭಾಷಿಕ ಮಕ್ಕಳು ಕಲಿಕೆಯಲ್ಲಿ ಹಿಂದೇ ಬಿದ್ದಿರುವುದು ಕಂಡುಬಂದಿದೆ. ತೆಲುಗು ಭಾಷೆ ಮಕ್ಕಳು ಕನ್ನಡ ಭಾಷಾ ಕಲಿಕೆಯಲ್ಲಿ ಕನ್ನಡ ಭಾಷಿಕ ಮಕ್ಕಳಿಗಿಂತ ಹಿಂದುಳಿದಿರುವ ಕಾರಣಗಳನ್ನು ಪರಿಶೀಲಿಸಿದಾಗ ಕಂಡುಬಂದ ಅಂಶಗಳು ಹೀಗಿವೆ. ಮೊದಲೆಯದಾಗಿ ತೆಲುಗು ಭಾಷಿಕ ಮಕ್ಕಳಿಗೆ ಕನ್ನಡ ಭಾಷಾ ಕಲಿಕೆಗೆ ಇರುವ ಏಕೈಕ ಆವರಣ ಶಾಲೆ. ಮಿಕ್ಕಂತೆ ಮನೆಯ ಆವರಣದಿಂದ ಹಿಡಿದು ಮಿಕ್ಕೆಲ್ಲಾ ಆವರಣಗಳಲ್ಲಿ ಹೆಚ್ಚಾಗಿ ಈ ಮಕ್ಕಳು ತೆಲುಗನ್ನೇ ಬಳಕೆ ಮಾಡುತ್ತಿರುವುದು. ಎರಡನೆಯದಾಗಿ ಈ ಮಕ್ಕಳ ಪೋಷಕರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತೀರಾ ಹಿಂದುಳಿದವರಾಗಿದ್ದಾರೆ. ಇದರಿಂದ ಬಹಳಷ್ಟು ಈ ಭಾಷಿಕ ಸಮುದಾಯಗಳವರಿಗೆ ಶೈಕ್ಷಣಿಕವಾಗಿ ಪ್ರಗತಿ ಹೊಂದಲು ಸಾಧ್ಯವಾಗಿಲ್ಲ. ಆದರೆ ಇದೇ ಸಂದರ್ಭದಲ್ಲಿ ಆರ್ಥಿಕವಾಗಿ ಸಬಲರಾಗಿರುವ ಕೆಲವೇ ತೆಲುಗು ಭಾಷಿಕ ಸಮುದಾಯದವರ ಮಕ್ಕಳು ಇಂಗ್ಲಿಶ್ ಮಾಧ್ಯಮದಲ್ಲಿ

ಓದುತ್ತಿರುವ ಸಂದಭದಲ್ಲಿ ಆ ಮಕ್ಕಳು ಶೈಕ್ಷಣಿಕವಾಗಿ ಹೆಚ್ಚಾಗಿ ಪ್ರಗತಿ ಹೊಂದುತ್ತಿರುವುದು ಕಂಡುಬಂದಿದೆ. ಕೂಲಿಕಾರ್ಮಿಕರು ತಮ್ಮ ಮಕ್ಕಳನ್ನು ಕಷ್ಟಪಟ್ಟು ಆಂಗ್ಲ ಮಾಧ್ಯಮದ ಶಾಲೆಗೆ ಸೇರಿಸಿರುವ ಅಪರೂಪದ ಪ್ರಕರಣಗಳಲ್ಲಿ ಆ ತೆಲುಗು ಭಾಷಿಕ ಮಕ್ಕಳು ಹೆಚ್ಚಿನ ರೀತಿಯಲ್ಲಿ ಶೈಕ್ಷಣಿಕವಾಗಿ ಯಶಸ್ಸನ್ನು ಗಳಿಸಿರುವುದು ಕಂಡುಬಂದಿದೆ.

ಆರ್ಥಿಕವಾಗಿ ಹಿಂದುಳಿದಂತಹ ತೆಲುಗು ಭಾಷಿಕ ಪೋಷಕರು ತಮ್ಮ ಮಕ್ಕಳಿಗೆ ಮನೆಯ ಆವರಣಗಳಲ್ಲಿ ಒಳ್ಳೆಯ ರೀತಿಯಲ್ಲಿ ಶಿಕ್ಷಣವನ್ನು ಕೊಡಿಸಲು ಅಶಕ್ತರಾಗಿದ್ದಾರೆ. ಇವರಿಗೆ ತಮ್ಮ ಮಕ್ಕಳು ಚೆನ್ನಾಗಿ ಓದಬೇಕೆಂಬ ಸಾಮಾನ್ಯ ಆಸೆ ಬಿಟ್ಟರೆ, ಅವರ ವಿದ್ಯಾಭ್ಯಾಸದ ಬಗೆಗೆ ಯಾವುದೇ ರೀತಿಯ ಉತ್ಸಾಹವಿಲ್ಲದೇ ಇರುವುದು ಕಾಣಬರುತ್ತದೆ. ಜೊತೆಗೆ ಪ್ರಾಥಮಿಕ ಶಾಲೆಗಳಲ್ಲಿ ಬಹುತೇಕ ಅಧ್ಯಾಪಕರ ಕೊರತೆ, ಏಕೋಪಾಧ್ಯಾಯ ಶಾಲೆಗಳೂ, ಸರಿಯಾದ ಕಲಿಕೆಯ ವಾತಾವರಣ ನಿರ್ಮಾಣ ಮಾಡದಿರುವುದೂ ಕೂಡ ಇಂತಹ ಮಕ್ಕಳ ಕಲಿಕೆಯ ಮೇಲೆ ಪರಿಣಾಮ ಬೀರಿರುವ ಸಾಧ್ಯತೆ ಇದೆ. ಅಷ್ಟೇ ಅಲ್ಲದೇ ೦.೫೦%ರಿಂದ ೧೦೦ ವಿದ್ಯಾರ್ಥಿಗಳವರೆಗೆ ಒಬ್ಬರೇ ಶಿಕ್ಷಕರು ಕಲಿಸುವ ಸಂದರ್ಭಗಳೂ ಕೂಡ ಇದಕ್ಕೆ ಕಾರಣವಿರಬಹುದು. ಇಲ್ಲಿನ ಬಹುತೇಕ ಶಾಲೆಗಳಲ್ಲಿನ ಶಿಕ್ಷಕರು ಕನ್ನಡ-ತೆಲುಗು ದ್ವಿಭಾಷಿಕರೇ ಆಗಿದ್ದು ಬೋಧನೆಯ ಸಂದರ್ಭದಲ್ಲಿ ಕನ್ನಡದಲ್ಲಿ ಕಲಿಯುತ್ತಿರುವ ತೆಲುಗು ಭಾಷಿಕ ಮಕ್ಕಳಿಗೆ ಕನ್ನಡ ಪದದ ಅರ್ಥ ತಿಳಿಯದಿದ್ದ ಸಂದರ್ಭದಲ್ಲಿ ತೆಲುಗಿನಲ್ಲೇ ಆ ಪದದ ಅರ್ಥವನ್ನು ಹೇಳುವ ಪರಿಪಾಠ ಕೂಡ ಇರುವುದು ಕಂಡುಬಂದಿದೆ. ಪಠ್ಯದ ಹೊರತಾಗಿ ಶಿಕ್ಷಕರು ಹಾಗೂ ವಿದ್ಯಾರ್ಥಿಗಳ ನಡುವೆ ಬಹಳಷ್ಟು ತೆಲುಗಿನಲ್ಲಿಯೇ ಸಂವಾದವಿರುವುದು ಪ್ರತಿನಿತ್ಯ ಕಾಣುವ ವಿಷಯವಾಗಿದೆ.

ಪ್ರಾಥಮಿಕ ಶಾಲಾ ಸಂದರ್ಭದಲ್ಲಿ ತೆಲುಗು ಭಾಷಾ ಮಕ್ಕಳು ಕನ್ನಡ ಕಲಿಯುವಾಗ ಧ್ವನಿಮಾ ಹಂತದಲ್ಲಿಯಾಗಲಿ, ಆಕೃತಿಯ ಹಂತದಲ್ಲಿಯಾಗಲಿ ಸ್ಪಷ್ಟತೆ ಇಲ್ಲದಿರುವುದು ಕಂಡುಬಂದಿದೆ. ಆಂಧ್ರದ ಗಡಿಭಾಗದಲ್ಲಿರುವ ಕನ್ನಡ ಪ್ರಾಥಮಿಕ ಶಾಲೆಯ ಮಕ್ಕಳಲ್ಲಿ ಕತೆಯನ್ನು ಹೇಳಿಸುವ ಸಂದರ್ಭಗಳಲ್ಲಿ ಆ ಮಕ್ಕಳು ಗುಂಡುಕಲ್ಲನ್ನು 'ಗುಂಡರಾಯಿ' ಅಂತಲೂ, ಕೆಂಪಗೆ ಕಾಯಿಸಿಕೊಂಡು ಎಂಬಲ್ಲಿ 'ಎರ್ರಗ ಕಾಯ್ಸ್ಕಂಡು' ಎಂತಲೂ ಗುಬ್ಬಚ್ಚಿ ಪದವನ್ನು ಪಿಕ್ಕಲುಗುವ್ವ ಎಂತಲೂ ನುಡಿಮಿಶ್ರಣದೊಂದಿಗೆ ಬಳಕೆಯಲ್ಲಿದೆ. ಅಷ್ಟೇ ಅಲ್ಲದೆ ಈ ಮಕ್ಕಳು ಕತೆ ಹೇಳುವಾಗ ತಾವು ಆಡುವ ಕೋಲಾರ ಉಪಭಾಷೆಯನ್ನು ಶಿಷ್ಟಭಾಷೆಗೆ ಪರಿವರ್ತಿಸುವ ಮನಃಸ್ಥಿತಿ ಹೊಂದಿರುವುದು ಕಂಡುಬಂದಿವೆ. ಮೊದಮೊದಲಿಗೆ ಈ ಸಂಶೋಧಕನ ಮುಂದೆ ಕತೆ ಹೇಳಲು ಈ ಮಕ್ಕಳು ಹಿಂಜರಿಕೆ ವ್ಯಕ್ತಪಡಿಸಿದವು. "ನೇನೂ ಮೀವೋಡೇ, ಚಪ್ಪಂಡ್ರಾ" (ನಾನು ನಿಮ್ಮವನೇ ಹೇಳಿ) ಎಂದಾಗ ಕತೆ ಹೇಳಲು ಶುರು ಮಾಡಿದವು. ಇದೇ ಶಾಲೆಯಲ್ಲಿ ಅನುಭವಿ ಶಿಕ್ಷಕರು ಮಕ್ಕಳಿಗೆ ಪಠ್ಯದಲ್ಲಿರುವ ಪದ್ಯಗಳನ್ನು ಕಂಠಪಾಠ ಮಾಡಿಸಿ ಸ್ಪಷ್ಟವಾಗಿ, ಸುಶ್ರಾವ್ಯವಾಗಿ ಹಾಡಿಸುವ ಅಭ್ಯಾಸ ಮಾಡಿಸಿದ್ದಾರೆ. ಇದಕ್ಕಾಗಿ ಅವರು ಈ ಮಕ್ಕಳ

ಹಾಡಿನ ಧ್ವನಿಗ್ರಹಣ ಮಾಡಿ ಮಕ್ಕಳಿಗೆ ಆ ಹಾಡನ್ನು ಪುನಃ ಕೇಳಿಸಿ ಇನ್ನೂ ಚೆನ್ನಾಗಿ ಹಾಡಲು ಪ್ರೇರೇಪಿಸುವುದರ ಮೂಲಕ ಕನ್ನಡವನ್ನು ಕಲಿಸುವ ಕಾಯಕ ಮಾಡುತ್ತಿರುವುದು ಕಂಡುಬಂದಿದೆ. ಇದರಿಂದ ಮಕ್ಕಳಲ್ಲಿ ಉಚ್ಚಾರಣೆಯಲ್ಲಿ ಸ್ಪಷ್ಟತೆ ಕಂಡುಬಂದಿದೆ. ಹಳ್ಳಿಯ ಪ್ರಾಥಮಿಕ ಶಾಲೆಗಳಿಗಾಗಿ ಪಟ್ಟಣದ ಪ್ರಾಥಮಿಕ ಶಾಲೆಗಳಲ್ಲಿ ತಕ್ಕಮಟ್ಟಿನ ವ್ಯತ್ಯಾಸವಿದ್ದು ಪಟ್ಟಣದ ತೆಲುಗು ಭಾಷಿಕ ಮಕ್ಕಳು ಅಲ್ಲಿನ ಉತ್ತಮ ಕಲಿಕೆಯ ವಾತಾವರಣದಲ್ಲಿ ಕನ್ನಡವನ್ನು ಎಲ್ಲಾ ಭಾಷಿಕ ಕೌಶಲ್ಯಗಳಲ್ಲೂ ಕಲಿಯುವ ವಾತಾವರಣ ಸೃಷ್ಟಿಸಲಾಗಿದ್ದರೆ ಹಳ್ಳಿಗಾಡಿನ ಶಾಲೆಗಳಲ್ಲಿ ಈರೀತಿ ಉತ್ತಮ ವಾತಾವರಣದ ಕೊರತಡಿಯಿಂದಾಗಿ ತೆಲುಗು ಮಕ್ಕಳು ಕನ್ನಡ ಕಲಿಯುವ ಮೊಗದಲ್ಲಿ ನಿಧಾನ ಗತಿಯಿರುವುದು ಕಂಡುಬಂದಿದೆ.

ಪ್ರಾಥಮಿಕ ಹಂತದಲ್ಲಿ ನಾಲ್ಕನೆಯ ತರಗತಿಗೆ ಕಾಲಿಡುವ ಮಟ್ಟಿಗೆ ಅಕ್ಷರ ಹಂತದ ಕಲಿಯುವ ದಾಟಿ ಹೋಗಿದ್ದು ಮಕ್ಕಳ ಗ್ರಹಿಕೆಯ ನೆಲೆಯಲ್ಲಿ ಬದಲಾವಣೆಗಳಾಗಿರುತ್ತವೆ. ಪ್ರಶ್ನೆಯನ್ನು ಕನ್ನಡದ ಮೂಲಕ ಗ್ರಹಿಸಿದ್ದರೂ ಸ್ಪಷ್ಟ ಹಾಗೂ ಖಚಿತವಾದ ಉತ್ತರಗಳನ್ನು ಕನ್ನಡದಲ್ಲಿ ಕೊಡಲು ತೆಲುಗು ಭಾಷಿಕ ಮಕ್ಕಳಿಗೆ ಸಾಧ್ಯವಾಗಿರುವುದಿಲ್ಲ. ಭಾಷಾ ಪಠ್ಯವನ್ನು ಸಮೂಹ ಅಧ್ಯಯನ ಅಥವಾ ವಿಜ್ಞಾನ ಪಠ್ಯವನ್ನು ಕನ್ನಡದಲ್ಲಿ ಗ್ರಹಿಸಿದ್ದರೂ ಉತ್ತರಿಸಲು ಸಾಧ್ಯವಾಗಿರುವುದಿಲ್ಲ. ಪಕ್ಕದಲ್ಲಿ ಕುಳಿತ ಸಹಪಾಠಿಯಿಂದ ಉತ್ತರ ತಿಳಿದುಕೊಂಡು ಉತ್ತರಿಸುತ್ತಾರೆ.

ಮಾಧ್ಯಮಿಕ ಹಂತದಲ್ಲಿ ಐದನೆಯ ತರಗತಿಗೆ ಬರುವ ಹೊತ್ತಿಗೆ ಈ ಮಕ್ಕಳ ಗ್ರಹಿಕೆಯ ನೆಲೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿ ತೆಲುಗು ಕನ್ನಡ ಭಾಷಿಕ ಸನ್ನಿವೇಶದ ಬಗ್ಗೆ ಸ್ಪಷ್ಟ ಅರಿವು ಮೂಡಿರುವುದು ಕಂಡುಬರುತ್ತದೆ. ಅಂದರೆ ತೆಲುಗು ಹಾಗೂ ಕನ್ನಡ ಭಾಷೆಗಳನ್ನು ಆಯಾ ಭಾಷಾ ಅವಕಾಶಗಳಿಗೆ ತಕ್ಕಂತೆ ಬದಲಾಣೆಗೊಂಡು ಅಥವಾ ಪಲ್ಲಟಗೊಂಡು ವ್ಯವಹರಿಸುವ ಕುಶಲತೆ ಕಂಡುಬರುತ್ತವೆ. ಜಿಲ್ಲೆಯ ಬಹುತೇಕ ಶಾಲೆಗಳಲ್ಲಿ ಕನ್ನಡ ಕಲಿಯುತ್ತಿರುವ ತೆಲುಗು ಭಾಷಿಕ ಮಕ್ಕಳು ಕನ್ನಡದ ಬಗ್ಗೆ ಹೆಚ್ಚಿನ ಗೌರವವನ್ನು ತೆಲುಗಿನ ಬಗ್ಗೆ ಕೀಳರಿಮೆಯನ್ನು ಇಟ್ಟುಕೊಂಡಿರುವುದು ಕಾಣಬರುತ್ತದೆ. ಕೇವಲ ಶಾಲಾ ಪರಿಕರವನ್ನಾಗಿ ಅಲ್ಲದೆ ಹಿರಿಯರ ಭಾಷಿಕ ಸನ್ನಿವೇಶದಲ್ಲೂ ತನ್ನದೇ ರೀತಿಯ ಸಂದರ್ಭ ಉಂಟಾಗಿರುವುದು ಕಂಡುಬರುತ್ತದೆ. ತೆಲುಗು ಭಾಷಿಕ ಸಮುದಾಯದವರು ಇರುವಂತಹ ಗಡಿ ಕನ್ನಡ ಭಾಷಿಕರಿಗೆ ಹೆಚ್ಚಿನ ಗೌರವಾದಾರಗಳು ದೊರೆಯುವುದು ಕಂಡುಬಂದಿದೆ.

ಬಹಳಷ್ಟು ಮಕ್ಕಳು ಬಡತನದ ಹಿನ್ನೆಲೆಯಲ್ಲಿ ಕಲಿಯುವ ಸಂದರ್ಭದಲ್ಲಿ ತಮ್ಮ ಬಗ್ಗೆಯೇ ಕೀಳರಿಮೆ ಹೊಂದಿದ್ದು ಈ ಪಠ್ಯಕ್ಕಿಂತ ಪಠೇತರ ಚಟುವಟಿಕೆಗಳಲ್ಲಿ ಹೆಚ್ಚಿನ ಬುದ್ಧಿವಂತಿಕೆಯನ್ನು ಪ್ರದರ್ಶಿಸುವುದು ಕಂಡುಬಂದಿದೆ.

ಮಾಧ್ಯಮಿಕ ಹಂತ ಕೊನೆಯ ಘಟ್ಟದ ಹೊತ್ತಿಗೆ ಕನ್ನಡ ಮಾಧ್ಯಮದಲ್ಲಿ ಕಲಿಯುವುದಕ್ಕಿಂತ ತೆಲುಗು ಭಾಷಿಕ ಮಕ್ಕಳಲ್ಲಿ ಕಲಿಯುವ ಹಾಗೂ ಅಭಿವ್ಯಕ್ತಿಸುವ ಸಾಮರ್ಥ್ಯದಲ್ಲಿನ ಅನೇಕ ಸಮಸ್ಯೆಗಳಗೆ

ಪರಿಹಾರ ಸಿಕ್ಕಿರುವುದು ಕಂಡುಬಂದಿರುತ್ತದೆ. ಭಾಷಿಕ ಕೌಶಲ್ಯಗಳಾದ ಮಾತು, ಗ್ರಹಿಕೆ, ಓದು, ಬರಹಗಳಲ್ಲಿನ ವ್ಯಾಕರಣ ದೋಷವನ್ನು ಬಹಳಷ್ಟು ಮಕ್ಕಳಿಗೆ ಪರಿಹರಿಸಿಕೊಂಡು ಈ ಮಕ್ಕಳು ಕನ್ನಡ ಭಾಷಿಕ ಮಕ್ಕಳಷ್ಟೇ ಪ್ರಬುದ್ಧರಾಗಿರುವುದು ಕಂಡುಬಂದಿದೆ. ಕೆಲವೊಮ್ಮೆ ಕನ್ನಡ ಮಕ್ಕಳಿಗೆ ಹೆಚ್ಚಿನ ಸಾಧನೆಯನ್ನು ಮಾಡಿರುವುದು ಕಂಡುಬಂದಿದೆ.

ಲಿಂಗವನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಗಂಡು ಮಕ್ಕಳಷ್ಟೇ ಕೆಲವೊಮ್ಮೆ ಅವರಿಗಿಂತಲೂ ಚೆನ್ನಾಗಿ ತೆಲುಗು ಭಾಷಿಕ ಹೆಣ್ಣುಮಕ್ಕಳು ಕನ್ನಡವನ್ನು ಹೆಚ್ಚಿನ ರೀತಿಯಲ್ಲಿ ಕಲಿಸಿರುವುದು ಕಾಣುತ್ತದೆ. ಪ್ರಾಥಮಿಕ ಹಂತದಿಂದ ಪ್ರೌಢಶಾಲಾ ಹಂತದವರೆಗಿನ ಕಲಿಕೆ ಹಾಗೂ ಅಭಿವ್ಯಕ್ತಿ ಸಂದರ್ಭಗಳನ್ನು ಗಮನಿಸಿದಾಗ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿನ ಮಕ್ಕಳ ಸಮಸ್ಯೆಗಳು ಪ್ರೌಢಶಾಲಾ ಹಂತದಲ್ಲಿ ಕಣ್ಮರೆಯಾಗಿರುವುದು ಕಂಡುಬರುತ್ತದೆ.

ಕಾಲೇಜು ಹಂತದಲ್ಲಿ ಕನ್ನಡದಲ್ಲಿ ಹೆಚ್ಚಿನ ಪ್ರಬುದ್ಧತೆ ಪಡೆದಿರುವುದಿಲ್ಲದೆ ಕರ್ನಾಟಕ ಲೋಕ ಸೇವಾ ಆಯೋಗ ನಡೆಸುವ ಕೆ.ಎ.ಎಸ್. ಪರೀಕ್ಷೆಗಳನ್ನು ಕನ್ನಡದಲ್ಲೇ ಬರೆದು ಆಯ್ಕೆಯಾಗಿರುವ ತೆಲುಗು ಭಾಷಿಕ ವಿದ್ಯಾರ್ಥಿಗಳು ಜಿಲ್ಲೆಯಲ್ಲಿ ಸಾಕಷ್ಟು ಇರುವುದು ಇದಕ್ಕೆ ಸಾಕ್ಷಿಯಾಗಿದೆ.

ಮೇಲೆ ತಿಳಿಸಿದ ಎಲ್ಲಾ ಸಂಗತಿಗಳನ್ನು ಇನ್ನೂ ಹೆಚ್ಚಿನ ಸೂಕ್ಷ್ಮವಾದ ಅಧ್ಯಯನವನ್ನು ಒಳಪಡಿಸುವ ಅಗತ್ಯವಿದೆ. ಏಕೆಂದರೆ ಈ ಸಂಗತಿಗಳು ಸಂಶೋಧನೆಯ ಹೆಚ್ಚಿನ ಸಮಯವನ್ನು ಬೇಡುವುದರಿಂದ ಇನ್ನೂ ಉತ್ತಮ ಫಲಿತಾಂಶಗಳನ್ನು ಪಡೆಯಲು ಮತ್ತಷ್ಟು ಒಳಗೆ ಹೆಚ್ಚು ನೋಡಬೇಕಾದ ಅಗತ್ಯವಿದೆ.

ಇವೆಲ್ಲದರ ನಡುವೆ ಮಕ್ಕಳ ಕಲಿಕೆಯಲ್ಲಿ ದ್ವಿಭಾಷಿಕತೆ ಅಡ್ಡಿಯುಂಟು ಮಾಡುತ್ತದೆಯೇ ಎಂಬುದನ್ನು ಪರಿಶೀಲಿಸಿದಾಗ ಉತ್ತರ ಬೇರೆಯದೇ ಆಗಿರುವ ಸಂಗತಿ ಗೋಚರಿಸುತ್ತದೆ. ಸಾಮಾಜಿಕ ಜೀವನದಲ್ಲಿರುವ ಅಸಮಾನತೆ ಅಂಶಗಳಾದ ಬಡತನ, ಜಾತಿಪದ್ಧತಿ, ಜೊತೆಗೆ ಗ್ರಾಮೀಣ ಪ್ರದೇಶದ ತೀರಾ ಹಿಂದುಳಿದ ಪರಿಸರ, ಸರಿಯಾದ ರೀತಿಯಲ್ಲಿ ಶಿಕ್ಷಕರ ಕೊರತೆ, ಬೋಧನಾಮಟ್ಟದಲ್ಲಿ ಕುಸಿತ, ಒಳ್ಳೆಯ ಶೈಕ್ಷಣಿಕ ವಾತಾವರಣ ಸೃಷ್ಟಿಯಾಗದಿರುವುದು, ಕಲಿಸುವುದಕ್ಕಿಂತ ಸ್ಥಳೀಯ ರಾಜಕಾರಣದಲ್ಲಿ ಶಿಕ್ಷಕರು ತೊಡಗಿಸಿಕೊಂಡಿರುವುದು, ಈ ಎಲ್ಲಾ ಅಂಶಗಳು ಮಕ್ಕಳ ಅಸಮರ್ಥ ಕಲಿಕೆಯ ಹಿಂದಿರುವ ಘೋರ ಕಾರಣಗಳು. ಇದರಿಂದಾಗಿ ಶೈಕ್ಷಣಿಕ ಗುಣಮಟ್ಟ ಕುಸಿತಕ್ಕೊಳಗಾಗಿ ಮಕ್ಕಳ ಕಲಿಕೆಯಲ್ಲಿ ಹಿನ್ನಡೆ ಉಂಟಾಗಿರುವುದು ಹಲವೆಡೆ ಕಂಡುಬಂದಿದೆ.

### ಅಕ್ಷರ ಕಲಿಕೆಯ ನೆಲೆಗಳು

ಜಿಲ್ಲೆಯ ತೆಲುಗು ಕನ್ನಡ ದ್ವಿಭಾಷಿಕ ಪರಿಸರದ ಸಂದರ್ಭದಲ್ಲಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿರುವ ತೆಲುಗು ಭಾಷಿಕ ಮಕ್ಕಳು ಮೌಖಿಕ ನೆಲೆಯಲ್ಲಷ್ಟೇ ತೆಲುಗು ಭಾಷೆಯನ್ನು ಬಳಕೆ

ಮಾಡುವ ಕೌಶಲ್ಯವನ್ನು ಪಡೆದಿರುತ್ತಾರೆ. ಆದರೆ ಕನ್ನಡ ಕಲಿಕೆಯ ಸಂದರ್ಭದಲ್ಲಿ ಈ ಮಕ್ಕಳು ಕನ್ನಡ ಅಕ್ಷರಗಳಿಂದ ಅಂದರೆ ಕನ್ನಡ ಲಿಪಿಯಿಂದ ತಮ್ಮ ಕನ್ನಡ ಭಾಷಾ ಕಲಿಕೆಯನ್ನು ಆರಂಭಿಸಿರುತ್ತಾರೆ. ಆದರೆ ಹೆಚ್ಚಾಗಿ ತೆಲುಗನ್ನು ಭಾಷಾ ಬಳಕೆಯ ಆವರಣಗಳಲ್ಲಿ ಬಳಸುತ್ತಿರುವ ಕಾರಣ ಕನ್ನಡವನ್ನು ಲಿಪಿ ಹಾಗೂ ಮೌಖಿಕ ನೆಲೆಯಲ್ಲಿ ಬಳಸುವಾಗ ಸಣ್ಣಪುಟ್ಟ ವ್ಯಾಕರಣ ದೋಷಗಳು ಕಾಣಿಸಿಕೊಂಡಿವೆ. ಈ ಮಕ್ಕಳು ಯಾವ ರೀತಿ ಕನ್ನಡ ಭಾಷಾ ಬಳಕೆ ಸಂದರ್ಭದಲ್ಲಿ ತಪ್ಪುಗಳನ್ನು ಎಸಗುತ್ತವೆ ಎಂಬುದನ್ನು ಪರಿಕ್ಷಿಸಲಾಯಿತು. ಆ ಮಕ್ಕಳು ಎಲ್ಲೆಲ್ಲಿ ಲಿಪಿ-ವ್ಯಾಕರಣ ದೋಷಗಳನ್ನು ಎಸಗಿದ್ದಾರೆಂಬುದು ಇಲ್ಲಿ ವಿವರಿಸಲಾಗಿದೆ ಮಕ್ಕಳು ಹೇಗೆ ಉಚ್ಚರಿಸುತ್ತಾರೆಯೋ ಹಾಗೆ ಬರಹದ ನೆಲೆಯಲ್ಲೂ ಬರೆದು ತೋರಿಸಿರುವುದು ಹೀಗಿದೆ.

- ‘ಳ’ಕಾರ, ಬದಲಾಗಿ ‘ಲ’ಕಾರ

  ಉರುಳು > ಉರುಲು

  ಮಾಡುತ್ತಾಳೆ > ಮಾಡುತ್ತಾಲೆ

- ‘ಡ’ಕಾರಕ್ಕೆ ಬದಲಾಗಿ ‘ಟ’ಕಾರ

  ಉಂಡೆ > ಉಂಟೆ

- ‘ಲ’ಕಾರಕ್ಕೆ ಬದಲಾಗಿ ‘ಳ’ಕಾರ

  ಅಗಲ > ಅಗಳ

  ಹಲಸು > ಅಳಸು > ಪಳಸು

- ‘ಹ’ಕಾರಕ್ಕೆ ಬದಲಾಗಿ ‘ಉ’ಕಾರ

  ಹುರುಳಿ > ಉರುಳಿ

  ಹುಳ > ಉಳುವು

  ಹಿಟ್ಟು > ಉಲ್ಟು

  ಹುಡುಕು > ಉಡುಕು

- ‘ಚ’ಕಾರಕ್ಕೆ ಬದಲಾಗಿ ‘ಸ’ಕಾರ

  ಚಟ್ನಿ > ಸಟ್ನಿ

  ಚರ್ಮ > ಸಮರ

  ಚಳಿ ಸಳಿ > ಚೂಟಿ ಸೂಟಿ

- ‘ಷ’ ‘ಶ’ಕಾರಕ್ಕೆ ಬದಲಾಗಿ ‘ಸ’

ಭಾಷೆ > ಬಾಸೆ

ಕೋಶ > ಕೋಸ

- 'ಣ'ಕಾರಕ್ಕೆ ಬದಲಾಗಿ 'ನ'ಕಾರ

ಅಣ್ಣ > ಅನ್ನ

ಬಣ್ಣ > ಬನ್ನ

ಸುಣ್ಣ > ಸುನ್ನ

ಕಣ್ಣು > ಕನ್ನು

ಮಣ್ಣು > ಮನ್ನು

ಬರಹದ ನೆಲೆಯಲ್ಲಿ ಧ್ವನಿ ವ್ಯತ್ಯಾಸಗೊಂಡು ಬಳಸಿರುವುದು ಕಾಣಬರುತ್ತದೆ. ಜೊತೆಗೆ ವಾಕ್ಯರಚನೆ ಸ್ವಂತವಾಗಿ ಮಾಡಲೂ ಮಕ್ಕಳಿಗೆ ತೊಡಕಾಗಿರುವುದು ಕಂಡುಬಂದಿದೆ. ನುಡಿಗಟ್ಟುಗಳನ್ನು ಹೇಳಿ ವಾಕ್ಯದಲ್ಲಿ ಪ್ರಯೋಗಿಸಲು ಹೇಳಿದಾಗ ಸರಿಯಾದ ರೀತಿಯಲ್ಲಿ ವಾಕ್ಯ ಪ್ರಯೋಗಮಾಡಲು ಬಹಳಷ್ಟು ಮಕ್ಕಳಿಗೆ ಸಾಧ್ಯವಾಗಲಿಲ್ಲ. ಮೌಖಿಕವಾಗಿ ಪ್ರಶ್ನಿಸಿದಾಗಲೂ ಆ ಮಕ್ಕಳು ನೀಡಿದ ಉತ್ತರ ಅರೆವಾಕ್ಯಗಳಾಗಿದ್ದವೇ ಹೊರತು ಸಂಪೂರ್ಣ ವಾಕ್ಯಗಳಾಗಿರಲಿಲ್ಲ. ಬಹುವಚನ ರೂಪಗಳಿಗೆ ಬದಲಾಗಿ ಬಹಳಷ್ಟು ಏಕವಚನ ರೂಪಗಳನ್ನೇ ಬಳಸಿದ್ದು ಕಂಡುಬಂದಿತು. ಉದಾಹರಣೆಗೆ ಇದ್ದಾರೆ ಎಂಬುದನ್ನು ಇದ್ದಾನೆ ನೀನು ಬಾ ಸಾಮಿ, ಕುಂತ್ಕ ಸಾಮಿ, ಇತ್ಯಾದಿ. ಇಲ್ಲಿ ಕಂಡುಬಂದ ಆಡುರೂಪದ, ಬರಹ ರೂಪದ ವಿಶ್ಲೇಷಣೆಯ ಬೇರೆ ಅಧ್ಯಾಯದಲ್ಲಿ ಹೆಚ್ಚಿಗೆ ವಿವರಿಸಲಾಗಿದೆ.

### ಕನ್ನಡ ತೆಲುಗು ಸಾಮಾಜಿಕ ನೆಲೆಗಳು

ಕೋಲಾರ ಜಿಲ್ಲೆಯ ದ್ವಿಭಾಷಾ ಪರಿಸರದಲ್ಲಿ ಬಹಳಷ್ಟು ಕುಟುಂಬಗಳು ಕನ್ನಡ ತೆಲುಗು ಎರಡೂ ಭಾಷೆಯನ್ನು ಮನೆಯ ಅವಕಾಶದಲ್ಲಿ ಬಳಸುವುದು ಕಂಡುಬಂದಿದೆ. ಕಾರಣ ತಂದೆ ಕಡೆಯಿಂದ ಒಂದು ಭಾಷೆ ತಾಯಿ ಕಡೆಯಿಂದ ಒಂದು ಭಾಷೆ ಕಲಿತ ಮಕ್ಕಳು ಎರಡೂ ಭಾಷೆಗಳಲ್ಲಿ ಪ್ರಗತಿ ಸಾಧಿಸಿರುವುದು ಕಂಡುಬಂದಿದೆ. ಇಂತಹ ಸನ್ನಿವೇಶಗಳು ಕಂಡುಬಂದಿರುವುದು ಬಹುತೇಕ ಮಧ್ಯಮ ವರ್ಗದ ಕುಟುಂಬಗಳಲ್ಲಿ ಕನ್ನಡ ಕಲಿಕೆಯ ಹಂತದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಇರಬಹುದಾದ ದೋಷಗಳು ಪ್ರೌಢ ಶಾಲಾ ಹಂತದಲ್ಲಿ ಮರೆಯಾಗಿರುವುದು ಕಂಡುಬಂದಿದೆ. ತೆಲುಗು-ಕನ್ನಡವನ್ನು ದ್ವಿಭಾಷೆಯಾಗುಳ್ಳ ಈ ಮಕ್ಕಳು ಶಿಕ್ಷಣದ ಸಂದರ್ಭದಲ್ಲಿ ಇಂಗ್ಲಿಶ್ ಮಾಧ್ಯಮದಲ್ಲಿ ಓದುತ್ತಿದ್ದರೂ ಯಾವುದೇ ಅಡೆತಡೆ ಇಲ್ಲದೆ ಉತ್ತಮ ಪ್ರಗತಿಯನ್ನು ಸಾಧಿಸಿರುವುದು ಕಂಡುಬಂದಿದೆ ಕನ್ನಡವನ್ನು ಸಾಕ್ಷರತೆ ನೆಲೆಯಲ್ಲೂ, ತೆಲುಗನ್ನು ಮೌಖಿಕ ನೆಲೆಯಲ್ಲೂ ಸಂಗೋಪನೆ ಮಾಡಿಕೊಂಡಿರುವುದು ಕಂಡುಬಂದಿದೆ. ಅಷ್ಟೇ ಅಲ್ಲದೆ

ಕನ್ನಡ ಮಾಧ್ಯಮದಲ್ಲಿ ಓದಿದ ಮಕ್ಕಳು ಸಹ ಬಹುತೇಕ ಪ್ರಗತಿಯನ್ನು ಸಾಧಿಸಿವೆ. ಇದು ದ್ವಿಭಾಷಿಕತೆಯಿಂದ ಕಲಿಕೆ ಹಾಗೂ ಜ್ಞಾನವೃದ್ಧಿಗೆ ಯಾವುದೇ ರೀತಿಯ ಭಾದಕಗಳಿಲ್ಲ ಎಂಬುದನ್ನು ಎತ್ತಿ ತೋರಿಸುತ್ತದೆ. ಶಿಕ್ಷಣ ಸಂದರ್ಭದಲ್ಲಿ ದ್ವಿಭಾಷಿಕ ಮಕ್ಕಳ ಕಲಿಕೆಯಲ್ಲಿ ಯಾವುದೇ ರೀತಿಯ ಸಮಸ್ಯೆಗಳು ಇಲ್ಲದಿರುವುದು ಮೇಲಿನ ಅಂಶಗಳು ತೋರಿಸಿಕೊಟ್ಟಿವೆ. ಆದರೆ ಈ ದ್ವಿಭಾಷಿಕ ಮಕ್ಕಳು ಬಹಳಷ್ಟು ಸಂದರ್ಭದಲ್ಲಿ ಆರ್ಥಿಕವಾಗಿ ಹಿಂದುಳಿದವರಾಗಿರುವುದು, ಬೋಧನೆಯ ಗುಣಮಟ್ಟದಲ್ಲಿ ಕಳಪೆಯಾಗಿರುವುದು, ಸಾಮಾಜಿಕ ಪರಿಸರ ಎಲ್ಲಾ ಕಾರಣಗಳಿಂದಾಗಿ ಕಲಿಕೆಯಲ್ಲಿ ಹಿಂದುಳಿದಿರುವ ಕಲೆ ಕಾರಣವಾಗಿರುವ ಅಂಶಗಳೇ ಹೆಚ್ಚಾಗಿ ಗೋಚರಿಸಿವೆ. ಈ ಮಕ್ಕಳಿಗೆ ಉತ್ತಮ ಗುಣಮಟ್ಟದ ಶೈಕ್ಷಣಿಕ ಪರಿಸರ, ಒಳ್ಳೆಯ ಗುಣಮಟ್ಟದ ಬೋಧನೆಯಿಂದಾಗಿ ಕಲಿಕೆಯಲ್ಲಿ ಗುಣಮಟ್ಟವನ್ನು ಪ್ರದರ್ಶಿಸ ಬಹುದಾಗಿದೆ. ಸಮೂಹ ಬೋಧನೆಗಿಂತ ಕಡಿಮೆ ಮಕ್ಕಳಿಗೆ ಅವರ ವೈಯಕ್ತಿಕ ಹಿನ್ನೆಲೆಗಳನ್ನು ತಿಳಿದುಕೊಂಡು ಹೆಚ್ಚಿನ ರೀತಿಯಲ್ಲಿ ಕಲಿಸುವ ಸನ್ನಿವೇಶ ನಿರ್ಮಾಣ ಮಾಡಿದಲ್ಲಿ ಈ ದ್ವಿಭಾಷಿಕ ಮಕ್ಕಳು ಹೆಚ್ಚಿನ ಅಭಿವೃದ್ಧಿಯನ್ನು ಸಾಧಿಸಬಲ್ಲರು.

# ಅಧ್ಯಾಯ ೭

## ದ್ವಿಭಾಷಿಕತೆಯ ಸಂದರ್ಭಗಳು

೭.೧. ವಿವಾಹದಿಂದ ಉಂಟಾಗಿರುವ ದ್ವಿಭಾಷಿಕತೆ

೭.೨. ಉದ್ಯೋಗದ ಕಾರಣದಿಂದ ಉಂಟಾದ ದ್ವಿಭಾಷಿಕತೆ

೭.೩. ವಲಸೆ ಕಾರಣದಿಂದ ಉಂಟಾದ ದ್ವಿಭಾಷಿಕತೆ

# ೭

# ದ್ವಿಭಾಷಿಕತೆಯ ಸಂದರ್ಭಗಳು

## ೭.೧. ವಿವಾಹದ ಕಾರಣದಿಂದಾದ ದ್ವಿಭಾಷಿಕತೆ

ಕರ್ನಾಟಕದಲ್ಲಿ ಅತಿ ಹೆಚ್ಚಿನ ತೆಲುಗು ಭಾಷಿಕರಿರುವ ಜಿಲ್ಲೆ ಕೋಲಾರ. ಇದಕ್ಕೆ ಕಾರಣ ಈ ಜಿಲ್ಲೆಗೆ ಇತಿಹಾಸ ಪೂರ್ವದಿಂದಲೂ ಆಂಧ್ರದೊಂದಿಗೆ ಇರುವ ನಿಕಟ ಸಂಪರ್ಕ. ಇಲ್ಲಿನ ಕನ್ನಡ ತೆಲುಗು ಸಂಬಂಧ ಅವಿನಾಭಾವವುಳ್ಳದ್ದು. ಈ ಕಾರಣದಿಂದ ಇಲ್ಲಿ ದ್ವಿಭಾಷಿಕತೆಯ ಸಂದರ್ಭಗಳು ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡಿದೆ. ದ್ವಿಭಾಷಿಕತೆ ಸಂದರ್ಭ ಉಂಟಾಗಲು ಇಲ್ಲಿ ಇನ್ನೊಂದು ಮುಖ್ಯ ಕಾರಣವಿದೆ. ಆಂಧ್ರಪ್ರದೇಶದ ಜೊತೆಗಿನ ವೈವಾಹಿಕ ಸಂದರ್ಭಗಳು ಈ ಪ್ರದೇಶದಲ್ಲಿ ದ್ವಿಭಾಷಿಕತೆಯನ್ನುಂಟು ಮಾಡಿದೆ. ಕರ್ನಾಟಕಾಂಧ್ರ ಗಡಿ ಪ್ರದೇಶದ ಜನರು ಹೆಚ್ಚಾಗಿ ತೆಲುಗರೊಂದಿಗೆ ಕನ್ನಡಿಗರೂ, ಕನ್ನಡಿಗರೊಂದಿಗೆ ತೆಲುಗರೂ ಪರಸ್ಪರ ಹೆಣ್ಣು ಗಂಡು ಕೊಡುಕೊಳ್ಳುವಿಕೆ ಪ್ರಕ್ರಿಯೆಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಬಂದಿರುವುದು ಇಲ್ಲಿನ ದ್ವಿಭಾಷಿಕತೆಗೆ ಪ್ರಮುಖ ಕಾರಣಗಳಲ್ಲೊಂದು. ಜಿಲ್ಲೆಗೆ ಹತ್ತಿರದ ಆಂಧ್ರದ ಊರುಗಳಾದ ಚಿತ್ತೂರು, ಪಲಮನೇರು, ಪುಂಗನೂರು, ಕುಪ್ಪಂ, ಮದನಪಲ್ಲಿ, ಹಿಂದೂಪುರ, ಕದಿರಿ, ಕಡಪ, ನಾಯಕನೇರಿ, ತಿರುಪತಿ ಮುಂತಾದೆಡೆಗಳಿಂದ ವೈವಾಹಿಕ ಸಂಬಂಧದ ಕಾರಣ ಜಿಲ್ಲೆಯ ಕನ್ನಡ ಭಾಷಿಕ ಗಂಡನ್ನು ಮದುವೆಯಾದ ಮಹಿಳೆಯರು ಹೇಗೆ ಇಲ್ಲಿನ ಕನ್ನಡವನ್ನು ಕಲಿತು ದ್ವಿಭಾಷಿಕತರಾಗುತ್ತಾರೆ ಯಾವ ರೀತಿಯ ಒತ್ತಡಗಳು ಇವರಿಗೆ ದ್ವಿಭಾಷಿಕರಾಗಲು ಕಾರಣವಾಗುತ್ತವೆ ಕನ್ನಡವನ್ನು ಕಲಿಯುವಲ್ಲಿ ಎಂತಹ ಸಮಸ್ಯೆಗಳಿವೆ ಮುಂತಾದ ಪ್ರಶ್ನೆಗಳು ಎದುರಾಗುತ್ತವೆ. ಭಾಷಾ ಕಲಿಕೆಯ ಹಂತವನ್ನು ದಾಟಿದ ವಯಸ್ಕ ಮಹಿಳೆಯರಾದ್ದರಿಂದ ಅವರ ಭಾಷಾ ಕಲಿಕೆ ಅಷ್ಟೊಂದು ಸಹಜವಾಗಿರುವುದಿಲ್ಲ. ಇಂತಹ ಸಂದರ್ಭಗಳನ್ನು ವಿವಾಹವಾಗಿ ಬಂದ ಮಹಿಳೆಯರು ಯಾವ ರೀತಿ ನಿಭಾಯಿಸಬಲ್ಲರೆಂಬುದು ಅತ್ಯಂತ ಕುತೂಹಲಕರವಾದುದು. ಇದೇ ಸಂದರ್ಭದಲ್ಲಿ ಕನ್ನಡ ಯುವತಿಯರನ್ನೇ ಮದುವೆಯಾಗಿ ಜಿಲ್ಲೆಯಲ್ಲೇ ವಾಸ್ತವ್ಯ ಹೂಡಿದ ತೆಲುಗು ಭಾಷಿಕ ಗಂಡಸರು ಕನ್ನಡಕ್ಕೆ ಪಲ್ಲಗೊಂಡಿರುವ ನಿದರ್ಶನಗಳೂ ಇವೆ. ಅದೇ ರೀತಿ ಮಹಿಳೆಯರೂ ಕನ್ನಡಕ್ಕೆ ಹೆಚ್ಚು ಹೆಚ್ಚು ಪಲ್ಲಟಗೊಂಡಿರುವ ನಿದರ್ಶನಗಳು ಇವೆ. ಇದೇ ರೀತಿ ಕೌಟುಂಬಿಕ ಕಾರಣಗಳಿಂದಾಗಿ ಜಿಲ್ಲೆಯಲ್ಲೇ ಹೆಂಡತಿಯ ತೌರಿನಲ್ಲೇ ವಾಸ್ತವ್ಯ ಹೂಡಿದ ತೆಲುಗು ಭಾಷಿಕ ಗಂಡಸರು ಕನ್ನಡಕ್ಕೆ ಪಲ್ಲಟಗೊಳ್ಳದಿರುವ ಉದಾಹರಣೆಗಳೂ

ಇವೆ. ಕುಟುಂಬವೊಂದರಲ್ಲಿ ಆಂಧ್ರದ ಕಡಪ ಕಡೆಯಿಂದ ಕೋಲಾರಕ್ಕೆ ಮದುವೆಯಾಗಿ ಇದರಿಂದ ಮಹಿಳೆ ತೆಲುಗಿನಿಂದ ಕನ್ನಡಕ್ಕೆ ಪಲ್ಲಟ ಆಗದೇ ಇರುವ ಸಂಗತಿ ಕಂಡುಬಂದಿದೆ. ಕಾರಣವನ್ನು ಪರಿಶೀಲಿಸಿದಾಗ ಆಕೆ ಮನೆಯ ಹೊರಗಿನ ಆವರಣಗಳಲ್ಲಿ ಬೆರೆಯದಂಥ ವಾತಾವರಣವಿರುವುದು ಕಂಡುಬಂತು. ಮನೆಯ ಆವರಣದಲ್ಲಿ ಆಪ್ತ, ಗಂಡ, ಮಕ್ಕಳೊಂದಿಗಿನ ಆಕೆಯ ಭಾಷಿಕ ವ್ಯವಹಾರ ಕೇವಲ ತೆಲುಗಿನಲ್ಲಿ ಮಾತ್ರ ಇದ್ದು, ಕನ್ನಡದ ಗ್ರಹಿಕೆಯ ಕೌಶಲ್ಯ ಮಾತ್ರ ಇದ್ದುದು ಕಂಡುಬಂದಿದೆ.

ಸಾಮಾನ್ಯವಾಗಿ ವಿವಾಹಿತ ಮಹಿಳೆಯರು ಕನ್ನಡ ಕಲಿತು ದ್ವಿಭಾಷಿಕರಾಗಬೇಕಾದರೆ ಅನೇಕ ಸಾಮಾಜಿಕ ಸಂಗತಿಗಳು ಜರುಗುವ ಸಂದರ್ಭದಲ್ಲಿ ಅಲ್ಲಿನ ಪರಿಸರ ಪೂರ್ತಿ ಕನ್ನಡದ್ದೇ ಆಗಿರುವುದು ಮತ್ತು ಬೇರೆ ಯಾರೇ ತೆಲುಗು ಭಾಷಿಕರು ಆ ಪ್ರದೇಶದಲ್ಲಿ ಇಲ್ಲದಿದ್ದಲ್ಲಿ ಮಾತ್ರ ಕನ್ನಡವನ್ನು ಕಲಿಯುವ ಅನಿವಾರ್ಯತೆ ಆ ಮಹಿಳೆಯರಿಗೆ ಒದಗುತ್ತದೆ.

ಆಂಧ್ರದಿಂದ ಕರ್ನಾಟಕಕ್ಕೆ ಹೆಣ್ಣು ಕೊಡುವ ಸಂಪ್ರದಾಯ ಹೆಚ್ಚಾಗಿ ಕಾಣಿಸಿಕೊಂಡಿದೆ. ಇದಕ್ಕೆ ಕಾರಣ ಕರ್ನಾಟಕದ ಶಾಂತಯುತವಾದ ಬದುಕು. ಆಂಧ್ರದಲ್ಲಿ ನಕ್ಸಲ್ ಹಿಂಸೆ ದಾಳಿಯಿಂದ ಬೇಸತ್ತಿರುವ ಬಹುತೇಕ ಮಂದಿ ಸುಶಿಕ್ಷಿತ ಕನ್ನಡಿಗ ಗಂಡುಗಳಿಗೆ ತಮ್ಮ ಹೆಣ್ಣುಮಕ್ಕಳನ್ನು ಕೊಡಲಿಚ್ಛಿಸುತ್ತಾರೆ. ಇತ್ತೀಚಿನ ತಲೆಮಾರುಗಳಲ್ಲಿ ಈ ಪ್ರಕ್ರಿಯೆ ಹೆಚ್ಚಾಗಿದೆ. ಇದರ ಜೊತೆಗೆ ಇನ್ನೊಂದು ಕಾರಣವೂ ಇದೆ. ಆಂಧ್ರದಲ್ಲಿ ಓದಿಕೊಂಡ ವರಮಹಾರಾಯರಿಗೆ ಹೆಚ್ಚಿನ ವರದಕ್ಷಿಣೆ ಚಿನ್ನ, ಬೆಳ್ಳಿ, ಕರೆನ್ಸಿ ರೂಪದಲ್ಲಿ ಕೊಡುವುದು ಆಂಧ್ರದ ಹಾಗೂ ಕೋಲಾರದ ವೈವಾಹಿಕ ಸಂಬಂಧಗಳು ಹೆಚ್ಚಾಗಿವೆ. ಇವು ಕೂಡ ಜಿಲ್ಲೆಯಲ್ಲಿ ಹೆಚ್ಚಿನ ರೀತಿಯಲ್ಲಿ ತೆಲುಗು ಕನ್ನಡ ದ್ವಿಭಾಷಾ ಸಂದರ್ಭ ಉಂಟಾಗಲು ಕಾರಣವಾಗಿದೆ.

ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಆಂಧ್ರದಿಂದ ಜಿಲ್ಲೆಗೆ ಸೊಸೆಯಾಗಿ ಬಂದ ಮಹಿಳೆಯರಲ್ಲಿ ಅನೇಕರು ಮಕ್ಕಳ ಶೈಕ್ಷಣಿಕ ಬೆಳವಣಿಗೆಗೆ ಪೂರಕವಾಗಿ ಕನ್ನಡದಲ್ಲಿ ಮೌಖಿಕ ನೆಲೆಯಲ್ಲಷ್ಟೇ ಅಲ್ಲದೆ ಸಾಕ್ಷರತೆ ನೆಲೆಗಳಲ್ಲೂ ಕೌಶಲ್ಯವನ್ನು ಸಾಧಿಸಿರುವುದು ಕಂಡುಬಂದಿದೆ. ಕನ್ನಡ ಸಂದರ್ಭದಲ್ಲಿ ಅವರ ಬದುಕು ಮುಂದುವರೆದಂತೆಲ್ಲಾ ಅವರ ಭಾಷಾ ಕಲಿಕೆ ಶುರುವಾಗಿ ಕನ್ನಡ ಮೌಖಿಕ ನೆಲೆಗಳು ಗಟ್ಟಿಯಾಗುತ್ತಾ ಹೋಗುತ್ತದೆ. ಯಾವ್ಯಾವ ಆವರಣಗಳಲ್ಲಿ ಕನ್ನಡವನ್ನು ಬಳಸಬೇಕೆಂಬ ಭಾಷಾ ಆಯ್ಕೆ ನಿಗದಿಯಾಗಿರುತ್ತದೆ. ಆವರಣಕ್ಕೆ ತಕ್ಕಂತೆ ಭಾಷಾ ಬಳಕೆ ಇರುತ್ತದೆ. ಬಹಳಷ್ಟು ಮಹಿಳೆಯರ ಸಂಭಾಷಣೆಯಲ್ಲಿ ನುಡಿಜಿಗಿತವಿರುವುದು ಕಾಣಬರುತ್ತದೆ. ಏಕೆಂದರೆ ಆ ಮಹಿಳೆಯರಿಗೆ ಕನ್ನಡ ಭಾಷಾ ಸಂಪತ್ತಿನ ಕೊರತೆ ಇರುವುದನ್ನು ಕಂಡುಕೊಳ್ಳಲಾಗಿದೆ. ಮದುವೆಯಾಗಿ ಬಂದ ಮಹಿಳೆಯರ ವಯಸ್ಕ ಸ್ಥಿತಿಯಲ್ಲಿ ಬೇರೊಂದು ಭಾಷೆಯನ್ನು ಕಲಿಯುವುದು ನಿಧಾನಗತಿಯಲ್ಲಿರುವುದು ಇಂಥ ಸಂದರ್ಭಗಳು ನುಡಿಮಿಶ್ರಣ, ಜಿಗಿತ, ದ್ವಿಭಾಷಾ ಸ್ವೀಕರಣ ಪ್ರಕ್ರಿಯೆಗಳಿಗೆ ಕಾರಣವಾಗಿವೆ. ದೀರ್ಘಕಾಲ ಈ

ಮಹಿಳೆಯರೊಂದಿಗೆ ಸಂಭಾಷಣೆಗೆ ತೊಡಗಿದಾಗ ಅವರಲ್ಲಿ ಮೇಲೆ ಹೇಳಿದ ಅಂಶಗಳು ಕಾಣಿಸಿಕೊಂಡಿವೆ. ಭಾಷಾ ಕೌಶಲ್ಯವು ಕಾಲದ ಅವಧಿ ದೀರ್ಘವಾದಂತೆ ಗಟ್ಟಿಗೊಳ್ಳುತ್ತಾ ಹೋಗಿರುವುದನ್ನು ಕಾಣಬಹುದು.

## ಉದ್ಯೋಗದ ಕಾರಣದಿಂದಾದ ದ್ವಿಭಾಷಿಕತೆ

ಜಗತ್ತು ಇಂದು ಪುಟ್ಟ ಹಳ್ಳಿಯಾಗುತ್ತಿರುವ ಸಂದರ್ಭದಲ್ಲಿ ಉದ್ಯೋಗದ ಅವಶ್ಯಕತೆಗಳಿಗಾಗಿ ಜನರು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಅಥವಾ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಲಸೆ ಹೋಗುವ ಪ್ರಕ್ರಿಯೆ ಮೂರು ದಶಕಗಳಿಂದೀಚೆಗೆ ಹೆಚ್ಚಾಗಿದೆ. ಬಹುರಾಷ್ಟ್ರೀಯ ಕಂಪನಿಗಳು, ಭಾರತೀಯರದ್ದೇ ಆದ ಸಾಫ್ಟವೇರ್ ಕಂಪನಿಗಳು ತಮ್ಮ ಕಂಪನಿಗಳ ಕಾರ್ಯಕ್ಷೇಮತೆಗೆ ತಮ್ಮಲ್ಲಿನ ಉದ್ಯೋಗಿಗಳನ್ನು ಭಾರತದಿಂದ ಅಮೆರಿಕ, ಜರ್ಮನಿ, ಕೊರಿಯಾ, ಆಸ್ಟ್ರೇಲಿಯ, ಜಪಾನ್ ಮುಂತಾದ ದೇಶಗಳಿಗೆ ತರಬೇತಿ ಮುಂತಾದ ಕಾರಣಗಳಿಗಾಗಿ ಕಳುಹಿಸಿಕೊಡುತ್ತಿವೆ. ಕಂಪನಿಗಳಲ್ಲಿನ ಉದ್ಯೋಗಸ್ಥರ ರೀತಿ ಒಂದು ರೀತಿಯದಾದರೆ ಕುಶಲಕೆಲಸಗಾರರು(ಸ್ಕಿಲ್ಡ್‌ಲೇಬರ್‌ರ್ಸ್) ಅರಬ್ ರಾಷ್ಟ್ರಗಳು ಯೂರೋಪ್, ಅಮೇರಿಕಾ, ಕೆನಡಾ ಅಲ್ಲದೇ ಪೌರ್ವತ್ಯ ರಾಷ್ಟ್ರಗಳಾದ ಫಿಜಿ, ಸಿಂಗಪುರ, ಥೈಲ್ಯಾಂಡ್, ಇಂಡೋನೆಷಿಯಾ ದೇಶಗಳಿಗೆ ಉದ್ಯೋಗವನ್ನರಸಿಕೊಂಡು ಹೋದವರು ಒಂದೆಡೆ ನೆಲೆನಿಂತು ಅಲ್ಲಿ ತಮ್ಮದೇ ಆದ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಾರೆ. ಹೀಗೆ ಸ್ಥಾಪಿಕೊಂಡವರು ಅಲ್ಲಿನ ದೇಸಿ ಭಾಷೆಗಳ ಸಂಪರ್ಕಕ್ಕೆ ಕಾರಣವಾಗುತ್ತಾರೆ. ಹೀಗೆ ದೀರ್ಘಕಾಲ ಸಂಪರ್ಕಗೊಂಡ ಭಾಷೆಗಳು ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆ ಪ್ರಭಾವ ಬೀರಿ ದ್ವಿಭಾಷಿಕತೆ ತಲೆದೋರುತ್ತದೆ.

ಮೇಲೆ ತಿಳಿಸಿದ ಕಾರಣಗಳಿಂದಾಗಿ ಕೆನಡಾದಲ್ಲಿ ತಮಿಳು-ಇಂಗ್ಲಿಷ್, ಇಂಗ್ಲೆಂಡಿನಲ್ಲಿ ಪಂಜಾಬಿ-ಇಂಗ್ಲಿಷ್, ಹಿಂದಿ-ಇಂಗ್ಲಿಷ್, ಶ್ರೀಲಂಕಾದಲ್ಲಿ ತಮಿಳು-ಸಿಂಹಳಿ ಹೀಗೆ ದ್ವಿಭಾಷಾ ಸಮುದಾಯಗಳು ಹುಟ್ಟಿಕೊಳ್ಳುತ್ತವೆ. ಕೋಲಾರ ಜಿಲ್ಲೆಯಲ್ಲಿ ಬಹುಮುಖ್ಯವಾಗಿ ಇರುವುದು ಎರಡು ಕೈಗಾರಿಕೆಗಳು. ಒಂದು ಚಿನ್ನದಗಣಿ. ಮತ್ತೊಂದು ಬುಲ್‌ಡೋಜರ್, ರೈಲ್ವೆ ಕೋಚ್ ನಿರ್ಮಾಣ ಮಾಡುವ ಬಿ.ಇ.ಎಂ.ಎಲ್.ಕಾರ್ಖಾನೆ. ಇಲ್ಲಿಗೆ ಉದ್ಯೋಗದ ಕಾರಣಕ್ಕಾಗಿ ದೇಶದ ನಾನಾ ಭಾಗಗಳಿಂದ ಬಂದ ವಲಸಿಗರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಮಿಳರು ಬಂದರೆ ಸ್ವಲ್ಪಮಟ್ಟಿಗೆ ತೆಲುಗು ಮತ್ತು ಇತರ ಭಾರತೀಯ ಭಾಷೆಗಳ ಜನರು ಇಲ್ಲಿ ಉದ್ಯೋಗಕ್ಕಾಗಿ ವಲಸೆ ಬಂದವರಾಗಿದ್ದಾರೆ. ಕೆ.ಜಿ.ಎಫ್.ನಲ್ಲಿ ತಮಿಳರ ಸಂಖ್ಯೆ ಹೆಚ್ಚಾಗಿರುವುದರಿಂದ ಅಲ್ಲಿ ತಮಿಳು ಕನ್ನಡ ದ್ವಿಭಾಷಿಕತೆ ಉಂಟಾಗಿದ್ದು, ಆಸಕ್ತರಿಗೆ ಅಧ್ಯಯನ ವಸ್ತುವಾಗಿದೆ. ಹೀಗೆ ಉದ್ಯೋಗಕ್ಕಾಗಿ ವಲಸೆ ಬಂದವರಲ್ಲಿ ಬಹುತೇಕ ತೆಲುಗು ಭಾಷಿಕರು ಬೆಮೆಲ್‌ನಗರ ಟೌನಶಿಪ್, ಬಂಗಾರಪೇಟೆ, ರಾಬರ್ಟ್‌ಸನ್‌ಪೇಟೆ, ಉರಿಗಾಂ ಪ್ರದೇಶಗಳಲ್ಲಿ ನೆಲೆ ನಿಂತಿದ್ದಾರೆ. ಅಷ್ಟೇ ಅಲ್ಲದೇ ತೆಲುಗು ಸಾಂಸ್ಕೃತಿಕ ಸಂಘ ನಿರ್ಮಾಣ ಮಾಡಿಕೊಂಡು ತೆಲುಗು ಭಾಷಿಕರು

ಒಂದೆಡೆ ಸೇರಲು ಅನುವಾಗುವಂತೆ ವಾತಾವರಣ ರೂಪಿಸಿಕೊಂಡಿದ್ದಾರೆ. ಆಗಾಗ್ಗೆ ತೆಲುಗು ನಾಟಕ, ಸಂಗೀತ, ಸಾಂಸ್ಕೃತಿಕ ಹಬ್ಬಗಳ ಮೂಲಕ ತೆಲುಗಿನ ಸಂಗೋಪನೆ ಮಾಡಿಕೊಂಡು ಬರುತ್ತಿದ್ದಾರೆ. ಹೀಗಾಗಿ ಇಲ್ಲಿನ ಪ್ರದೇಶದಲ್ಲಿ ತೆಲುಗು-ಕನ್ನಡ ಭಾಷಾ ಬಳಕೆ ಸಹಜವಾಗಿಯೇ ಹೆಚ್ಚಾಗಿದೆ. ಬಂಗಾರಪೇಟೆ ತಾಲ್ಲೂಕಿನ ಭಾಷಾ ಪರಿಸರದಲ್ಲಿ ಸಹಜ ದ್ವಿಭಾಷಿಕತೆ ತಾನಾಗೇ ಇದ್ದರೂ ಈ ತೆಲುಗು ಭಾಷಿಕರ ಸೇರ್ಪಡೆಯಿಂದ ಆ ಭಾಷೆಗೆ ಅಲ್ಲಿ ತನ್ನದೇ ಆದ ಅಸ್ತಿತ್ವ ಬಂದಂತಾಗಿದೆ.

### ವಲಸೆ ಕಾರಣದಿಂದಾದ ದ್ವಿಭಾಷಿಕತೆ

ಯಾವುದೇ ಭಾಷಾ ಪರಿಸರದಲ್ಲಿ ದ್ವಿಭಾಷಿಕತೆ ಉಂಟಾಗಲು ವಲಸೆಯೂ ಪ್ರಮುಖ ಕಾರಣವಾಗಿದೆ. ವಲಸೆ ನಾನಾ ಕಾರಣಗಳಿಗಾಗಿ ನಡೆಯಬಹುದು. ಮೊದಲನೆಯದು ಪ್ರಾಕೃತಿಕ ಕಾರಣಗಳಿಂದ ಬರುವಂಥದು. ಬರ, ನೆರೆಹಾವಳಿ, ಭೂಕಂಪ ಮುಂತಾದ ಕಾರಣಗಳಿಗಾಗಿ ಒಂದು ರೀತಿಯದು. ಎರಡನೆಯದು ರಾಜಕೀಯ ಕಾರಣಗಳಿಂದಾಗಿ ಸ್ವತಂತ್ರ ಭಾರತ ಇಬ್ಭಾಗವಾದಾಗ ಬಾಂಗ್ಲಾ, ಪಾಕಿಸ್ತಾನಗಳಿಗೆ ವಲಸೆ ಹೋದವರು ಒಂದೆಡೆಯಾದರೆ, ಅಲ್ಲಿಂದ ಹಿಂದೂಧರ್ಮ ಸಂಪ್ರದಾಯದ ಅನೇಕರು ಇಲ್ಲಿಗೆ ವಲಸೆ ಬಂದರು. ಚೀನಾ ಟಿಬೆಟ್‌ನ ಮೇಲೆ ಆಕ್ರಮಣ ಮಾಡಿದಾಗ ಅಲ್ಲಿನ ಟಿಬೇಟಿಯನ್ನರು ಬೌದ್ಧ ಧರ್ಮಗುರು ದಲೈಲಾಮರ ನೇತೃತ್ವದಲ್ಲಿ ರಾಜಕೀಯ ಆಶ್ರಯ (ಪೊಲಿಟಿಕಲ್ ಅಸೈಲಮ್) ಪಡೆದು ಭಾರತಕ್ಕೆ ಬಂದವರು. ಹಾಗೆ ಬಂದ ಅನೇಕರಲ್ಲಿ ಕರ್ನಾಟಕದ ಧಾರವಾಡದ ಮುಂಡಗೋಡು, ಮೈಸೂರು ಜಿಲ್ಲೆಯ ಹುಣಸೂರಿನ ಬಳಿ ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ತಮ್ಮದೇ ಆದ ಟಿಬೆಟನ್ ಕ್ಯಾಂಪ್‌ಗಳಲ್ಲಿ ನೆಲೆಸಿದ್ದಾರೆ. ಈ ಟಿಬೆಟಿಯನ್ನರ ಭಾಷೆ ಹಾಗೂ ಕನ್ನಡದ ಭಾಷೆಯ ಸಂದರ್ಭಗಳು ದ್ವಿಭಾಷಿಕತೆಗೆ ಒಳಗಾದ ಸಂದರ್ಭಗಳಾಗಿವೆ. ಮುಂದಿನ ದಿನಗಳಲ್ಲಿ ಟಿಬೆಟಿಯನ್- ಕನ್ನಡ ದ್ವಿಭಾಷಿಕತೆಯ ಅಧ್ಯಯನ ಮಾಡಬೇಕಾದ ಅವಶ್ಯಕತೆ ಇದೆ.

ಕೋಲಾರ ಜಿಲ್ಲಾ ದ್ವಿಭಾಷಾ ಪರಿಸರದಲ್ಲಿ ಹೀಗೆ ವಲಸೆ ಬಂದವರಲ್ಲಿ ಕೆಲವು ಜಾತಿ, ಬುಡಕಟ್ಟುಗಳಿವೆ. ಇವರೆಲ್ಲ ಬಹುತೇಕ ಆಂಧ್ರದಿಂದ ಹೊಟ್ಟೆಪಾಡಿಗಾಗಿ ಅಲೆಮಾರಿ ಜೀವನ ನಡೆಸಿಕೊಂಡು ಬಂದು ಯಾವುದೇ ಒಂದು ಕಾಲಘಟ್ಟದಲ್ಲಿ ಇಲ್ಲಿ ನೆಲೆ ನಿಂತಿದ್ದಾರೆ. ಇವರಲ್ಲಿ ತಂಬೂರಿ ಹಿಡಿದು ರಾಗಬದ್ಧವಾಗಿ ಭವಿಷ್ಯ ಹೇಳುವ ಕೊಂಡಮಾಮಗಳು. ಇವರಲ್ಲಿ ಕೆಲವರು ಸಿಂಗಪುರ ಮೊದಲಾದೆಡೆ ಹೋಗಿ ಶಾಸ್ತ್ರ ಹೇಳಿ ಪ್ರಸಿದ್ಧರಾಗಿದ್ದರೆಂದು ತಿಳಿದುಬಂದಿದೆ(ಚಿತ್ತರಂಜನ್ ಹೆಚ್., ೨೦೦೫, ಪು.೧೬೯). ಶಂಕು, ಜಾಗಟೆ ಹಿಡಿದು ಭಿಕ್ಷೆ ಬೇಡುವ ಚೆನ್ನದಾಸ, ದಕ್ಕಲಿಗ, ನಟುವ ಜನಾಂಗ, ಬುಡಗಜಂಗಮ, ಬಲಿಜ, ಯಾನಾದಿಗ, ಮೊಂಡರು, ರೆಡ್ಡಿ ಒಕ್ಕಲಿಗರು, ಶಿಳ್ಳೇಕಾತ ಜನಾಂಗಗಳು ಪ್ರಮುಖವಾದವು. ಹೀಗೆ ಬಂದವರಲ್ಲಿ ಇಲ್ಲಿಯೇ ನೆಲೆನಿಂತು ಇಲ್ಲಿನ ಸಾಮಾಜಿಕ ಜೀವನದ ಮುಖ್ಯವಾಹಿನಿಯಲ್ಲಿ ಬೆರೆತು

ಹೋಗಿರುವುದು ಕಂಡುಬರುತ್ತದೆ. ವಲಸೆಯಿಂದಾಗುವ ದ್ವಿಭಾಷಿಕತೆಯು ಬಹುದೀರ್ಘಕಾಲವನ್ನು ತೆಗೆದುಕೊಳ್ಳುವಂಥದ್ದು. ಇಂದಿಗೂ ತೆಲುಗನ್ನೇ ಮನೆಮಾತಾಗುಳ್ಳ ಈ ಭಾಷಿಕರ ಜಿಲ್ಲೆಯ ಗಡಿಭಾಗಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿದ್ದು ಕನ್ನಡ ಭಾಷೆಯನ್ನು ಅಲ್ಪ ಪ್ರಮಾಣದಲ್ಲಿ ಮೌಖಿಕವಾಗಿ ತಿಳಿದಿರುವುದರಿಂದ ಅರೆದ್ವಿಭಾಷಿಕರಾಗಿ ಕಂಡುಬರುತ್ತಾರೆ.

ಮೇಲಿನ ಮೂರು ಕಾರಣಗಳು ಭೌಗೋಳಿಕ ಪ್ರದೇಶವೊಂದರಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಬಹುತೇಕ ಶೈಕ್ಷಣಿಕ ಕಾರಣಗಳಿಗಾಗಿ ದ್ವಿಭಾಷಿಕತೆ ಏರ್ಪಡಲು ಕಾರಣವಾಗಿವೆ.

# ಅಧ್ಯಾಯ ೮

## ಭಾಷಾ ಸಂಪರ್ಕ

# ೮

# ಭಾಷಾ ಸಂಪರ್ಕ

## ೮.೧. ನುಡಿಜಿಗಿತ-ನುಡಿಮಿಶ್ರಣ-ದ್ವಿಭಾಷಾ ಸ್ವೀಕರಣ

ಕಳೆದ ಶತಮಾನದ ೧೯೭೦ರ ಹೊತ್ತಿಗೆ ನುಡಿಜಿಗಿತ, ನುಡಿಮಿಶ್ರಣ, ಹಾಗೂ ದ್ವಿಭಾಷಾ ಸ್ವೀಕರಣಗಳನ್ನು ಕುರಿತಂತೆ ವಿಸ್ತೃತವಾದ ಅಧ್ಯಯನಗಳನ್ನು ಮಾಡಲಾಗಿದೆ. ದ್ವಿಭಾಷಾ ಪರಿಸರಗಳಲ್ಲಿ ಭಾಷಿಕರ ವ್ಯವಹಾರದ ನಡುವೆ ಕಾಣಿಸಿಗೊಳ್ಳುವ ಪ್ರಮುಖ ಭಾಷಿಕರ ಪ್ರಕ್ರಿಯೆಗಳಾಗಿ ನುಡಿಜಿಗಿತ, ನುಡಿಬೆರಕೆ ಹಾಗೂ ದ್ವಿಭಾಷಾ ಪ್ರಕ್ರಿಯೆಗಳನ್ನು ಗುರ್ತಿಸಲಾಗುತ್ತದೆ. ದ್ವಿಭಾಷಿಕತೆಯ ಸಂಶೋಧನೆಯ ಸಂದರ್ಭದಲ್ಲಿ ನುಡಿಜಿಗಿತ ಕೇಂದ್ರ ವಸ್ತುವಾಗಿದ್ದು, ಸಂಭಾಷಣೆಯಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಭಾಷೆಗಳಲ್ಲಿ ಸಂಭಾಷಿಸುವ ದ್ವಿಭಾಷಿಕರಿಗೆ ಪರ್ಯಾಯ ಬಳಕೆಯ ವಿಧಾನವಾಗಿದೆ. ಈ ಸಾಮಾನ್ಯ ಪರಿಭಾಷೆಯಡಿ ದ್ವಿಭಾಷೆ ನಡವಳಿಗಳ ಬೇರೆ ಬೇರೆ ರೂಪಗಳು ಹಾಸುಹೊಕ್ಕಾಗಿವೆ.

ಮೊದಲಿಗೆ ನುಡಿಮಿಶ್ರಣ, ನುಡಿಜಿಗಿತಗಳನ್ನು ಕುರಿತಂತೆ ಭಾಷಾ ಪಂಡಿತರಿಗೆ ಕೋಪ, ತಿರಸ್ಕಾರ ಅಸಹನೆಯಿದೆ. ಭಾಷೆ ಸರಿಯಾಗಿ ತಿಳಿಯದ ಗಾಂಪರು ಮಾತನಾಡುವಂಥದ್ದು ಎಂದು ಅವರು ತಿಳಿಯುತ್ತಾರೆ. ಸಾಮಾಜಿಕ ಭಾಷಾ ವಿಜ್ಞಾನಿಗಳು ನುಡಿಮಿಶ್ರಣ, ನುಡಿ ಜಿಗಿತಗಳು ದ್ವಿಭಾಷಿಕ ಪರಿಸರದ ಸಹಜ ಕ್ರಿಯೆಗಳೆಂದು ಭಾಸುತ್ತಾರೆ ನುಡಿಮಿಶ್ರಣ ಕಲಿಯದವರಿಂದ ಮಾತ್ರ ಅಲ್ಲ, ಕಲಿತವರೂ ಕೂಡ ಈ ಪ್ರಕ್ರಿಯೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಭಾಗಿಗಳಾಗುತ್ತಲೇ ಇರುವುದು ಕಂಡುಬಂದಿದೆ. ಇಂಗ್ಲೀಷಿನ Code switching ಸಂವಾದಿಯಾಗಿ ನುಡಿಜಿಗಿತ ಅಥವಾ ನುಡಿಪಲ್ಲಟ ಎಂದೂ Code mixingಗೆ ಸಂವಾದಿಯಾಗಿ ನುಡಿಮಿಶ್ರಣ ಅಥವಾ ನುಡಿಬೆರಕೆ ಎಂದೂ Bilingual Borrowing ಪದಕ್ಕೆ ಸಂವಾದಿಯಾಗಿ ದ್ವಿಭಾಷಾ ಸ್ವೀಕರಣ ಎಂದೂ ಕನ್ನಡದಲ್ಲಿ ಬಳಸಲಾಗುತ್ತಿದೆ. ನುಡಿಜಿಗಿತ ಮತ್ತು ನುಡಿಮಿಶ್ರಣಗಳನ್ನು ಭಾಷಿಕ ಅಸಾಮರ್ಥ್ಯತೆಯ ಚಿಹ್ನೆಯಾಗಿ ಪರಿಗಣಿಸಲಾಗಿದೆ. ನುಡಿಜಿಗಿತವೆನ್ನುವುದು ಒಂದು ಮಾತಿನ ಸಂದರ್ಭದಲ್ಲಿ ಎರಡು ಶಾಶ್ವತ ವ್ಯಾಕರಣ ತತ್ವಗಳನ್ನೊಳಗೊಂಡ ವಿಸ್ತೃತ ಸರಣಿಯ ಉದ್ಧೃತ ಭಾಗಗಳನ್ನು ಮಾತಿನಲ್ಲಿ ವಿನಿಮಯ ಮಾಡಿಕೊಂಡು ಒಂದರ ಪಕ್ಕದಲ್ಲೊಂದು ಜೋಡಿಸುವುದು (ಗುಂಪರ್ಜ್, ೧೯೮೨, ೫೯) ಎಂದು ಎರಡು ಭಾಷೆಯ ವ್ಯಾಕರಣಗಳು ಅಲ್ಲಿ ಪಾತ್ರವಹಿಸುವುದನ್ನು ಹೇಳಿದರೆ, ಸ್ವೀಕರಣ ಮತ್ತು ನುಡಿಜಿಗಿತಗಳು ಎರಡೂ ಕಡೆಗಳಲ್ಲಿನ ಒಂದು ನಿರಂತರ ಸನ್ನಿವೇಶ.

ಸ್ಥಾಪಿತ ಸ್ವೀಕರಣ ಪದವು ಐತಿಹಾಸಿಕವಾಗಿ ಪರಿವರ್ತಿತ ಪದವಾಗಿದ್ದು ಸ್ವೀಕರಿಸಿದ ಭಾಷೆಯಲ್ಲಿ ಐಕ್ಯವಾಗಿರುತ್ತದೆ. (ರೋಮೇನ್, ೧೯೯೪) ಎಂಬ ಹೇಳಿಕೆ ನುಡಿಜಿಗಿತ ಮತ್ತು ಪದಸ್ವೀಕರಣಕ್ಕಿರುವ ಭಾಷಾ ಕಾಲಕ್ರಮದ ಸಂದರ್ಭವನ್ನು ಸೂಚಿಸುತ್ತದೆ. ನುಡಿಜಿಗಿತವು ಹೆಚ್ಚು ಕಡಿಮೆ ಸಹಜವಾದ, ಬದ್ಧವಾದ, ಒಂದು ಭಾಷೆಯ ವಾಕ್ಯಗಳು ಮತ್ತೊಂದು ಭಾಷೆಯ ವಾಕ್ಯಗಳಾಗಿ ಸಹಜವಾಗಿ, ಬದ್ಧತೆಯಿಂದ ಜಿಗಿಯುವುದು ಕಂಡುಬರುತ್ತದೆಯಲ್ಲದೆ, ಭಾಷಿಕ ರಚನೆಯ ಎಲ್ಲ ಹಂತಗಳಲ್ಲಿ ಏಕಕಾಲಕ್ಕೆ ಪರಿಣಾಮಕಾರಿಯಾಗಿರುತ್ತದೆ.

ಒಂದು ಭಾಷೆಯ ವಾಕ್ಯವನ್ನು ಆಡುವಾಗ, ಬರೆಯುವಾಗ ಇನ್ನೊಂದು ಭಾಷೆಯ ಭಾಷಾಂಶಗಳನ್ನು ಬೆರೆಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯಾಗಿದ್ದು, ವಾಕ್ಯಾಂಶಗಳು ಮಾತ್ರ ಕೆಲವು ಇನ್ನೊಂದು ಭಾಷೆಯಿಂದ ಬಂದು ಸೇರುತ್ತವೆ. ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ ಮುಗಿಸಿ ಅನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನಒಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ, ಉದ್ದೇಶಗಳು ಭಿನ್ನವಾಗಿರುತ್ತವೆ. ನುಡಿ ಜಿಗಿತ ಮಾತ್ರ ಬಹುಮಟ್ಟಿಗೆ ದ್ವಿಭಾಷಿಕರಲ್ಲೇ ನಡೆಯುವಂಥದ್ದು. ನುಡಿಬೆರಕೆ ದ್ವಿಭಾಷಿಕರಲ್ಲೇ ನಡೆಯುತ್ತದೆ ಎನ್ನುವಂತಿಲ್ಲ. ಎಷ್ಟೋ ವೇಳೆ ದ್ವಿಭಾಷಿಕ ಸನ್ನಿವೇಶಗಳಲ್ಲಿ ನಡೆಯುವ ಭಾಷಾಂಶಗಳನ್ನು ತಮ್ಮ ಭಾಷಿಕ ಸಂಕಥನಗಳಲ್ಲಿ ಸೇರಿಸಿಕೊಳ್ಳುತ್ತಾರೆ(ನಾರಾಯಣ, ಕೆ.ವಿ., ೧೯೯೮, ೧೯).

ನುಡಿಜಿಗಿತವು ಕಲಿಕೆಯಿಂದ ಬಂದ ನಡವಳಿಕೆಯೇ? ಹಾಗಿದ್ದರೆ ಅದನ್ನು ಯಾವಾಗ, ಹೇಗೆ ಕಲಿತದ್ದು? ಯಾವ ಸಾಮಾಜಿಕ ಹಾಗೂ ಪ್ರಾಯೋಗಿಕ ಸಂದರ್ಭದಲ್ಲಿ ನುಡಿಜಿಗಿತ ಕಾರ್ಯನಿರ್ವಹಿಸುತ್ತದೆ? ಯಾವ ವ್ಯಾಕರಣ ನಿಯಮಗಳು ನುಡಿಜಿಗಿತದ ಮೇಲೆ ಪ್ರಭಾವ ಬೀರುತ್ತವೆ? ಎಂಬ ಪ್ರಶ್ನೆಗಳು ಇಲ್ಲಿ ಪ್ರಸ್ತುತವಾಗಿವೆ. ಎರಡು ಭಾಷೆಗಳ ಪರ್ಯಾಯ ಬಳಕೆಯು ಒಂದೇ ಬಗೆಯ ಭಾಷಿಕ ಉಚ್ಚಾರಣಾ ಸಂದರ್ಭವು ಮಕ್ಕಳ ಬಾಲ್ಯದಲ್ಲಿ ಶುರುವಾಗುತ್ತದೆ. ಆದರೆ ಅದು ವಯಸ್ಕರ ನುಡಿ ಪರ್ಯಾಯಗಳಿಗಿಂತ ಹೆಚ್ಚಿನ ಸಂಖ್ಯೆಯ ಭಿನ್ನ ಮಾರ್ಗಗಳನ್ನು ಒಳಗೊಂಡಿರುತ್ತದೆ(ಮಿಸೆಲ್, ೧೯೯೪). ಮೆಕ್ಲೂರ್ (೧೯೮೧) ಅವರು ಮೆಕ್ಸಿಕನ್-ಅಮೆರಿಕನ್ ಮಕ್ಕಳು ನುಡಿಜಿಗಿತವನ್ನು ತಮ್ಮ ತಮ್ಮ ವಯಸ್ಸಿಗನುಗುಣವಾಗಿ ಬಳಕೆ ಮಾಡುತ್ತಾರೆ. ಯುವದ್ವಿಭಾಷಿಕರು ಅವರ ಮಾತಿನ ಸಂದರ್ಭದಲ್ಲಿ ನುಡಿಜಿಗಿತಕ್ಕಿಂತ ಹೆಚ್ಚಾಗಿ ನುಡಿಮಿಶ್ರಣವನ್ನು ಬಳಸುತ್ತಾರೆ. ಒಂಬತ್ತು ವಯಸ್ಸಿನ ಮಕ್ಕಳು ಕೊನೆಯ ಪಕ್ಷ ಒಂದು ಪದಗುಚ್ಛವನ್ನು ನುಡಿಜಿಗಿತವಾಗಿ, ಒಂದು ವಾಕ್ಯದಲ್ಲಿ ನುಡಿಮಿಶ್ರಣವನ್ನು ಬಳಸುವ ಪರಿಪಾಠ ಕಂಡುಬಂದಿದೆಯೆಂದು ಹೇಳುತ್ತಾರೆ. ಕೆಲವು ವೇಳೆ ನುಡಿಜಿಗಿತವು ಸಂವಹನ ತಂತ್ರವಾಗಿಯೂ ಮತ್ತು ಒಂದು ಜನಾಂಗೀಯ ಚಹರೆ ಹಾಗೂ ಪ್ರತಿನಿಧಿಯಾಗಿಯೂ ಕಾಣಿಸಿಕೊಳ್ಳುತ್ತದೆಂಬ ಅಂಶವನ್ನು ಪ್ರಸ್ತಾಪಿಸುತ್ತಾರೆ.

ಸಾಮಾನ್ಯವಾಗಿ ನುಡಿಜಿಗಿತ ನುಡಿಮಿಶ್ರಗಳು ಉಂಟಾಗಲು ಕಾರಣಗಳೇನು? ದ್ವಿಭಾಷಿಕರಾದವರಲ್ಲಿ ಯಾವ ಸಂದರ್ಭಗಳಲ್ಲಿ ಈ ಭಾಷಿಕ ಪ್ರಕ್ರಿಯೆ ಕಂಡುಬರುತ್ತದೆ? ಎನ್ನುವ ಕಾರಣಗಳನ್ನು ಪರಿಶೀಲಿಸ ಹೊರಟಾಗ ದ್ವಿಭಾಷಿಕನ ಭಾಷಾ ಆಯ್ಕೆ(ಲಾಂಗ್ವೇಜ್ ಚಾಯ್ಸ್)ಯು ಪ್ರಮುಖವಾಗಿ ಕಂಡುಬರುತ್ತದೆ. ಆದರೆ ದ್ವಿಭಾಷಿಕನಾದವನ ಭಾಷಾ ಆಯ್ಕೆ ಯಾವ ಸಮಯಕ್ಕೆ, ಹೇಗೆ ಬದಲಾಗುತ್ತದೆ ಎಂಬ ಅಂಶವನ್ನು ಖಚಿತವಾಗಿ ಹೇಳಬರುವುದಿಲ್ಲ. ಏಕೆಂದರೆ ಭಾಷಿಕನಾದವನು ತನಗರಿವಿಲ್ಲದಂತೆಯೇ ಸಾಮಾಜಿಕ ಸನ್ನಿವೇಶಗಳಲ್ಲಿ ಪರಿಸ್ಥಿತಿಯ ಒತ್ತಡಗಳಿಗೆ ತಕ್ಕಂತೆ ತನ್ನ ಭಾಷಾ ಆಯ್ಕೆಯನ್ನು ಮಾಡಿಕೊಂಡಿರುವ ಸಾಧ್ಯತೆ ಕಾಣಬರುತ್ತದೆ. ಕೆಲವೊಮ್ಮೆ ಈ ಭಾಷಾ ಆಯ್ಕೆ ಸಮಾಜದಲ್ಲಿನ ಸಾಮಾಜಿಕರ ವಯಸ್ಸು, ಲಿಂಗ, ಶಿಕ್ಷಣ, ವ್ಯಕ್ತಿಯ ಸಾಮಾಜಿಕ ಸ್ಥಾನಮಾನ, ಅಧಿಕಾರಸ್ಥರೊಡನಿರುವ ಸಂಬಂಧಗಳು, ತಾವು ವಾಸಮಾಡುತ್ತಿರುವ ಪರಿಸರ ಮುಂತಾದ ಅಂಶಗಳನ್ನು ಒಳಗೊಂಡಿರುತ್ತದೆ. ತೆಲುಗು ಭಾಷಿಕರಾದವರು ಕನ್ನಡದ ಭಾಷಿಕರೊಡನೆ ವ್ಯವಹರಿಸುವ ಸಂದರ್ಭದಲ್ಲಿ, ವ್ಯಾಪಾರವಹಿವಾಟು, ವೈವಾಹಿಕ ಸಂಬಂಧಗಳನ್ನು ಬೆಸೆಯುವ ಸಂದರ್ಭದಲ್ಲಿ ಬಹುತೇಕ ಈ ರೀತಿಯ ಭಾಷಿಕ ಮಿಶ್ರಣ, ಭಾಷಾಜಿಗಿತ ಉಂಟಾಗುತ್ತದೆ.

ದೈನಂದಿನ ವ್ಯವಹಾರಗಳಲ್ಲಿ ತೆಲುಗು ಭಾಷೆಯನ್ನು ವೈಯಕ್ತಿಕ ನೆಲೆಗಳಲ್ಲಿ ಬಳಕೆ ಮಾಡಿದರೂ ಕನ್ನಡಿಗರೊಂದಿಗೆ ಮಾತನಾಡಬೇಕೆಂದಾಗ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಸಂಪೂರ್ಣವಾಗಿ ಭಾಷೆಯಲ್ಲಿನ ವಾಕ್ಯದ ನೆಲೆಗಳಲ್ಲಿ ಬಳಸಹೊರಟಾಗ ಅವರಿಗೆ ಕನ್ನಡ ಭಾಷೆಯ ಪದಗಳ ಕೊರತೆಯುಂಟಾಗುವ ಸಂದರ್ಭಗಳಲ್ಲಿ ತೆಲುಗಿನ ಪದಗುಚ್ಛಗಳನ್ನಾಗಲೀ, ಅಥವಾ ಕೆಲಮೊಮ್ಮೆ ತೆಲುಗಿನ ವಾಕ್ಯಗಳನ್ನೇ ಅನಾಮತ್ತಾಗಿ ಬಳಸುವುದುಂಟು. "ಒಂದು ಭಾಷೆಯಲ್ಲಿ ಕೊರತೆ ಇರುವ ಭಾಷಾಂಶಗಳನ್ನು ಇನ್ನೊಂದು ಭಾಷೆಯಿಂದ ಎರವಲು ಪಡೆದುಕೊಳ್ಳುವುದೇ ಈ ಭಾಷಾ ಪ್ರಕ್ರಿಯೆಗಳ ಉದ್ದೇಶವೆಂದು ಸಾಮಾನ್ಯವಾಗಿ ತಿಳಿಯಲಾಗುತ್ತದೆ" ಎನ್ನುವ ಕಾರಣವೂ ಇದಕ್ಕಿದೆ. ಆದರೆ ಕೆಲವೊಮ್ಮೆ "ಭಾಷಾಂಶಗಳ ಕೊರತೆ ಇಲ್ಲದಿರುವ ಸಂದರ್ಭಗಳಲ್ಲೂ ನುಡಿಬೆರಕೆ ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತದೆ(ನಾರಾಯಣ, ಕೆ.ವಿ., ೧೯೯೮, ೨೦೦). ಇದಕ್ಕೆ ವ್ಯಕ್ತಿಯ ಸಾಮಾಜಿಕ ಸ್ಥಾನಮಾನ, ಎದುರಿಗಿರುವ ವ್ಯಕ್ತಿ ಯಾರು ಎಂಬುದು, ಭಾಷಾ ಸನ್ನಿವೇಶ ಅಥವಾ ಪರಿಸರ, ಎಂಬುವು ಈಗಾಗಲೇ ನಡೆದಿರುವ ಅಧ್ಯಯನಗಳು ತೋರಿಸಿಕೊಟ್ಟಿವೆ. ಆದರೆ ಜಿಲ್ಲೆಯ ತೆಲುಗು ಕನ್ನಡ ದ್ವಿಭಾಷಾ ಸಂದರ್ಭಗಳಲ್ಲಿ ನುಡಿಜಿಗಿತ ಹಾಗೂ ನುಡಿಬೆರಕೆಗೆ ಕಾರಣಗಳನ್ನು ಹುಡುಕಿದಾಗ ಮೊದಲಿಗೆ ತೆಲುಗರಿಗೆ ಕನ್ನಡದಲ್ಲಿನ ಭಾಷಾಂಶಗಳ ಕೊರತೆ, ದೀರ್ಘ ಸಂಭಾಷಣೆಯ ಸಂದರ್ಭದಲ್ಲಿ ಕನ್ನಡವನ್ನು ಬಳಸಲು ಸಾಧ್ಯವಾಗದಿದ್ದ ಪಕ್ಷದಲ್ಲಿ, ಶಾಲೆಯಲ್ಲಿ ಕನ್ನಡ ಕಲಿಯುತ್ತಿರುವ ತಮ್ಮ ಮಕ್ಕಳಿಗೆ ತೆಲುಗು ಭಾಷಿಕ ತಾಯಂದಿರು ಕನ್ನಡದಲ್ಲೇ ಕತೆಗಳನ್ನು ಹೇಳಲು ಹೊರಟಾಗ, ಯಾರಾದರೂ ಕನ್ನಡ ಭಾಷಿಕರಾದವರು ವಿಳಾಸ ಕೇಳದಾಗ, ಅರೆಬರೆ ಕನ್ನಡದಲ್ಲಿ ತೆಲುಗನ್ನು ಮಿಶ್ರಣ ಮಾಡಿ ಹೇಳುವುದು, ಸಂಭಾಷಣೆಗೆ

ಪೂರಕವಾಗಿ ಗಾದೆಗಳನ್ನು, ನುಡಿಗಟ್ಟುಗಳನ್ನು ಹೇಳುವಾಗ ಕನ್ನಡದ ಗಾದೆಗಳು, ಅಥವಾ ನುಡಿಗಟ್ಟುಗಳಿಗೆ ಬದಲಾಗಿ ಇಡೀ ಗಾದೆ ಅಥವಾ ನುಡಿಗಟ್ಟುಗಳನ್ನು ತೆಲುಗಿನಲ್ಲಿ ಹೇಳುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಅಂಶವಾಗಿವೆ.

ತೆಲುಗು-ಕನ್ನಡದ ಸಂದರ್ಭದಲ್ಲಿ ಭಾಷಾ ಮಿಶ್ರಣದ ಉದಾಹರಣೆಗಳು ಕಂಡುಬಂದ ರೀತಿಯನ್ನು ಇಲ್ಲಿ ವಿವರಿಸಲಾಗಿದೆ.

ಮುಳಬಾಗಿಲಿನ ಕುಟುಂಬವೊಂದರ ತಾಯಿ-ಮಗಳು ಫೋಟೋ ನೋಡುವ ಸಂದರ್ಭದಲ್ಲಿ ನೆರೆಮನೆಯ ಕನ್ನಡ ಭಾಷಿಕರೊಬ್ಬರು ಬಂದು 'ಯಾವಾಗ ಫೋಟೊ ತೆಗೆಸಿದ್ದು?' ಎಂದು ಕೇಳಿದ ಸಂದರ್ಭದಲ್ಲಿ "ಯಾವಾಗೋ ಅವರ (ಮಗಳ) ಕಾಲೇಜಾಗ ಫೊಂಗ್‌ಷನ್ ಆದಾಗ ಪೊಟ್ಟಿಚ್ಚಿಂಡೇದಿ".

ಆವನಿಯಲ್ಲಿ ರಾಮಲಿಂಗೇಶ್ವರ ಜಾತ್ರೆಗೆ ಬಂದಿದ್ದ ತಾಯಿಗೆ ೬ ವರ್ಷದ ಮಗುವೊಂದು ಜಾತ್ರೆಯಲ್ಲಿ ಮಾರುವ ಬಲೂನನ್ನು ಕೇಳಿದ್ದು ಹೀಗೆ: "ಅಮ್ಮಾ ನನಗೂ ಬುಡ್ಡ ತೀಸೀಯೆ".

ಮದುವೆ ಸಮಾರಂಭಕ್ಕೆ ಹೊರಡಲು ಅಣಿಯಾಗುತ್ತಿದ್ದ ಸಂದರ್ಭದಲ್ಲಿ ಯುವತಿಯೊಬ್ಬಳು ಗೆಳತಿಗೆ ಹೇಳಿದ ಮಾತು.

"ಬಿರ್ನ ಬರದಿದ್ರೇ ಸೊಂಪ್ಪಾಕ್ತೀನಿ"

ಕೋಲಾರದ ಮಹಿಳಾ ಕಾಲೇಜೊಂದರಲ್ಲಿ ಸಾಹಿತಿಗಳೊಬ್ಬರನ್ನು ಸಾಹಿತ್ಯದ ಉಪನ್ಯಾಸವೊಂದಕ್ಕೆ ಕರೆಸಿದ್ದಾಗ ಕಾಯಕ್ರಮ ಮಧ್ಯಾಹ್ನದ ಅವಧಿಯನ್ನು ದಾಟಿತ್ತು. ಆಗ ವಿದ್ಯಾರ್ಥಿನಿಯೊಬ್ಬಳು ಹೇಳಿದ್ದು ಹೀಗಿತ್ತು: "ಬೇಗ ಬೇಗ ಅಂಪಿಚ್ಚಿಡಂಡ ಸಾರ್".

ಪ್ರಾಥಮಿಕ ಶಾಲೆಯೊಂದರಲ್ಲಿ ಹಾಜರಾತಿ ಹಾಕುವಾಗ ಕೇಳಿಬಂದದ್ದು: "ಟೀಚರ್ ಅವನು ಪೆಂಡ್ಲಿಗೋಗಿದ್ದಾನೆ".

ಮನೆಯ ಮೇಲಕ್ಕೆ ಹೋಗಲು ಮೆಟ್ಟಿಲುಗಳಿಲ್ಲದ ಮನೆಯ ಮೇಲೆ ಹತ್ತಲು ಹೋದ ಹುಡುಗಿಯೊಬ್ಬಳಿಗೆ ತಾಯಿಯೊಬ್ಬಳು ಹೇಳುತ್ತಿದ್ದ ಮಾತು: "ಮಿದ್ದಿಮ್ಯಾಗೆ ಎಕ್ಕಬೇಡ ಎಂದರೆ ಎಕ್ಕಿ ಕಡುಪೆಲ್ಲಾ ಪರಸುಕೊಂಡ್ಶೆತೇನೋ". ಅದಕ್ಕೆ ಮಗಳ ಉತ್ತರ: "ಇಲ್ಲಮ್ಮೋ ಮಿದ್ದಿಮ್ಯಾಕ ಅನುಮಗಳಾಗಿದ್ದೀನಿ. ಕೋತಿಗ್ಳು ಬತ್ತಾವ. ಓಗ್ಬೇಕು".

ಸಾಲ ವಸೂಲಿಗೆ ಹೊರಟಾತನಿಗೆ ಎಲ್ಲಿಗೆಂದು ಯಾರೋ ಕೇಳಿದಾಗ ಆತ ಹೇಳಿದ್ದು: "ಇಲ್ಲೇ ಸ್ವಲ್ಪ ಕೆಲ್ಸ ಅದೆ. ಯಾರೋ ನಾಲ್ಗುವೇಲು ಕೊಡಬೇಕು".

ನೆರೆಮಾನೆಯಾಕೆಗೆ ಹೆಂಗಸೊಬ್ಬಳು: "ಸೂಜಿ ಕೇಳಿದಾಗ ಆಕೆ ಹೇಳಿದ್ದು ಸೂಜೀನೂ ಇಲ್ಲಿ ಸಿಂತಕಾಯೀನೂ ಇಲ್ಲ".

ಬಹುತೇಕ ನುಡಿಮಿಶ್ರಣಕ್ಕೆ ಭಾಷಿಕನಿಗಿರುವ ಭಾಷಾಸಂಪತ್ತಿನ (ಲಾಂಗ್ವೇಜ್ ರೆಪರ್ಟಾಯರ್) ಕೊರತೆ ಕಾರಣವಾಗಿರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿನ ಮುಳಬಾಗಿಲು, ಶ್ರೀನಿವಾಸಪುರ, ಚಿಂತಾಮಣಿಯಂತಹ ಪಟ್ಟಣಗಳಿಗೆ ಕಟ್ಟಡ ನಿರ್ಮಾಣ ಕಾರ್ಯಗಳಿಗೆ ಬರುವ ಕೂಲಿಕಾರ್ಮಿಕರ ಭಾಷೆಯಲ್ಲಿ ನುಡಿಮಿಶ್ರಣ ಹೆಚ್ಚಾಗಿ ಕಂಡುಬಂದಿದೆ. ಕಟ್ಟಡ ಮಾಲೀಕರುಗಳೊಂದಿಗೆ ವ್ಯವಹರಿಸಬೇಕಾದ ಸಂದರ್ಭದಲ್ಲಿ ಈ ರೀತೀಯ ನುಡಿ ಮಿಶ್ರಣಗಳು ಕಂಡುಬರುತ್ತವೆ. ಅದರಲ್ಲೂ ಹೆಚ್ಚಿಗೆ ಮಹಿಳಾ ಕೂಲಿಕಾರ್ಮಿಕರಲ್ಲಿ ಈ ಬಗೆಯ ಪರಿಪಾಠ ಹೆಚ್ಚಾಗಿದೆ. ಮತ್ತೊಂದು ಸಂಗತಿಯೆಂದರೆ ಈ ನುಡಿಮಿಶ್ರಣಕ್ಕೆ ಒಳಗಾಗಿರುವವರಲ್ಲಿ ಪರಿಶಿಷ್ಟ ಜಾತಿ ಪಂಗಡಗಳ ಜೊತೆಗೆ ವೈಶ್ಯ, ಅಗಸ, ಕುಂಬಾರ, ರೆಡ್ಡಿ ಒಕ್ಕಲಿಗ ಜನಾಂಗಗಳಲ್ಲೇ ಇದು ಹೆಚ್ಚಾಗಿ ಕಂಡುಬರುತ್ತಿದೆ. ಬಹುತೇಕ ಶಾಲೆಗೆ ಹೋಗಿ ಸಾಕ್ಷರತೆಯ ಕೌಶಲ್ಯಗಳಾದ ಅಕ್ಷರಭ್ಯಾಸ, ಓದನ್ನು ಕಲಿತವರಲ್ಲಿ ತೆಲುಗು ಕನ್ನಡ ನುಡಿಮಿಶ್ರಣ ವಿರಳವಾಗಿರುವುದು ಕಂಡುಬಂದಿದ್ದು, ಓದುವ ಕೌಶಲ್ಯವುಳ್ಳ ಬಹುತೇಕರು ಕನ್ನಡ ಇಂಗ್ಲಿಶ್ ಪದಗಳ ನುಡಿಮಿಶ್ರಣಕ್ಕೆ ಒಳಗಾಗಿರುವುದು ಕಂಡುಬಂದಿದೆ. ಹೀಗಾಗಿ ಕನ್ನಡ ಇಂಗ್ಲಿಶ್ ನುಡಿಮಿಶ್ರಣದಲ್ಲಿ ಸಂಶೋಧನೆ ಕೈಗೊಳ್ಳುವಂಥ ಆಸಕ್ತರಿಗೆ ಈ ವಿಷಯ ವಸ್ತುವಾಗಬಲ್ಲುದು.

ಜಿಲ್ಲೆಯ ದ್ವಿಭಾಷಾ ಪರಿಸರವು ಬಹಳಷ್ಟು ಪ್ರಮಾಣದಲ್ಲಿ ನುಡಿಜಿಗಿತಕ್ಕೆ ಒಳಗಾಗಿರುವುದು ಕಂಡುಬಂದಿದೆ. ಈಗಾಗಲೇ ಹೇಳಿರುವಂತೆ ಶೇಕಡ ೪೬.೮೪%ರಲ್ಲಿ ತೆಲುಗು ಭಾಷಿಕರಿಂದ ಹೆಚ್ಚಿನ ನುಡಿ ಜಿಗಿತದ ಸಂದರ್ಭಗಳು ಕಾಣಿಸಿಕೊಂಡಿವೆ. ಭಾಷಿಕರ ಎಲ್ಲಾ ಭಾಷಾಬಳಕೆಯ ಆವರಣಗಳಲ್ಲಿ ನುಡಿಜಿಗಿತ ಕಾಣಿಸಿಕೊಂಡಿದೆ. ಶಾಲಾ ಕಾಲೇಜು, ಮಾರುಕಟ್ಟೆ ಪ್ರದೇಶ, ಗೆಳೆಯರೊಂದಿಗೆ, ಬೇರೆ ಭಾಷಿಕರು ಸಂದರ್ಭವೊಂದರಲ್ಲಿ ಆಡಿದ ಮಾತುಗಳನ್ನು ಅವರದ್ದೇ ಭಾಷೆಯಲ್ಲಿ ವರದಿ ಮಾಡುವಾಗ, ರಹಸ್ಯಮಾತುಕತೆಯ ಸಂದರ್ಭಗಳು, ಶಿಕ್ಷಣ ಸಂಬಂಧಿ ವಿಷಯಗಳು, ಮದುವೆ ಮುಂಜಿಯಂಥ ಕಾರ್ಯಕ್ರಮಗಳು, ಚುನಾವಣೆ ಸಂದರ್ಭಗಳಲ್ಲಿ, ಸಾರ್ವಜನಿಕೆ ಭಾಷಣಗಳಲ್ಲಿ, ನಾಟಕ, ಸಿನಿಮಾ, ಕೇಳಿಕೆ, ಪ್ರವಾಸ ಹೋದ ಸಂದರ್ಭಗಳನ್ನು ವಿವರಿಸುವಾಗ, ಗಹನವಾದ ವಿಷಯಗಳ ಚರ್ಚೆಗಳಲ್ಲಿ, ಅಪರಿಚಿತರೊಂದಿಗೆ ಮಾತನಾಡುವಾಗ ಹೀಗೆ ಇನ್ನೂ ಹಲವಾರು ಸನ್ನಿವೇಶಗಳಲ್ಲಿ ನುಡಿಜಿಗಿತ ಗಳುಂಟಾಗುವುದು ಸಾಮಾನ್ಯ ವಿಷಯವಾಗಿ ಕಂಡುಬಂದಿದೆ. ಸಂಭಾಷಣೆಯ ಸಂದರ್ಭದಲ್ಲಿ ಕಾಣಿಸಿಕೊಂಡ ನುಡಿಜಿಗಿತದ ಕೆಲವು ಮಾದರಿಗಳನ್ನು ಇಲ್ಲಿ ನೀಡಲಾಗಿದೆ.

"ಅಪ್ಪುಡೇ ವಾನಿಕೆ ಚೆಪ್ಪಿತಿ. ನೀನು ಅಲ್ಲಿಗೋಗಬ್ಯಾಡ್ವೋಂತ ಅಂತ".

"ಬಡವರಿಗೆ ಸಾವಿರ ಆಶ್ರಯ ಮನೆಗಳನ್ನು ಕಟ್ಟಿಸಿಕೊಡ್ತೀವಿ. ಪೇದವಾಳ್ಳಕಿ ವಯ್ಯಿ ಆಶ್ರಯ ಇಂಡ್ಲುಲುನಿ ಕಟ್ಟಿಚ್ಚಿಸ್ತಾಮು".

"ఏనాద్రూ తగొళ్ళి హత్తురూపాయి మాత్ర. ఏమన్నా తీస్కొండ. పదిరూపాయిలు మాత్రమే". "ఈ సారి నమ్మస్కూల్‌గె ఒళ్ళే ర్యాంకింగ్ బర్బేకు. లేక పోతే స్కూలికి మానము ఉండదు".

ಮೇಲಿನ ವಾಕ್ಯಗಳನ್ನು ಗಮನಿಸಿದಾಗ ಮೊದಲಿಗೆ ಒಂದು ವಾಕ್ಯವನ್ನು ಪೂರಕವಾಗಿ ತೆಲುಗಿನಲ್ಲಿ ಮಾತನಾಡಿ ನಂತರ ಮತ್ತೊಂದು ವಾಕ್ಯವನ್ನು ಕನ್ನಡದಲ್ಲಿ ರಚಿಸಲಾಗಿದೆ. ಎರಡೂ ವಾಕ್ಯಗಳೂ ಆಯಾ ಭಾಷೆಯ ವ್ಯಾಕರಣಕ್ಕೆ ಅನುಸಾರವಾಗಿಯೇ ಇರುವುದು ಕಂಡುಬರುತ್ತದೆ. ಮೊದಲ ಉದಾಹರಣೆಯ ಮೊದಲ ವಾಕ್ಯವು ತೆಲುಗು ವ್ಯಾಕರಣ ರಚನೆಯನ್ನು ದುಡಿಸಿಕೊಂಡಿದ್ದರೆ, ಎರಡನೆಯದು ಕನ್ನಡ ವಾಕ್ಯ ರಚನೆಯ ನಿಯಮವನ್ನು ಅಳವಡಿಸಿಕೊಂಡಿದೆ. ಎರಡನೆಯ ಹಾಗೂ ಮೂರನೆಯ ಉದಾಹರಣೆಗಳಲ್ಲಿ ಮೊದಲ ವಾಕ್ಯಗಳು ಕನ್ನಡ ಭಾಷಾ ರಾಚನಿಕ ಸಂದರ್ಭಗಳಿಗೆ ಅನುಸಾರವಾಗಿಯೂ ಎರಡನೆಯ ವಾಕ್ಯಗಳು ತೆಲುಗು ಭಾಷೆಯ ವಾಕ್ಯರಚನೆಗೆ ಬದ್ಧವಾಗಿರುವುದೂ ಕಂಡುಬರುತ್ತದೆ.

## ೮.೨. ನುಡಿ ಜಗಿತದ ಮೇಲೆ ನಡೆದಿರುವ ಅಧ್ಯಯನಗಳ ನೋಟ

ಭಾರತದಲ್ಲಿ ನುಡಿಜಗಿತದ ಮೇಲೆಯೇ ಕೇಂದ್ರೀಕರಿಸಿ ನಡೆದ ಅಧ್ಯಯನಗಳು ಬೆರಳಣಿಕೆಯಷ್ಟೂ ಇಲ್ಲ ಎನ್ನಬಹುದು. ದ್ವಿ-ಬಹುಭಾಷಿಕತೆ ಕುರಿತು ನಡೆದ ಅಧ್ಯಯನಗಳಲ್ಲಿ ಸಾಂದರ್ಭಿಕವಾಗಿ ನುಡಿ ಜಗಿತವನ್ನು ಕುರಿತು ಪ್ರಸ್ತಾಪಿಸಲಾಗಿದೆ ಅಷ್ಟೇ. ಕನ್ನಡದ ಸಂದರ್ಭದಲ್ಲಿ ಎಸ್.ಎನ್.ಶ್ರೀಧರ್ ಅವರು ತಮ್ಮ 'ಇಂದಿನ ಕನ್ನಡ : ರಚನೆ ಮತ್ತು ಬಳಕೆ' ಕೃತಿಯಲ್ಲಿ ನುಡಿಜಗಿತ, ನುಡಿಮಿಶ್ರಣದ ಬಗ್ಗೆ ಪ್ರಸ್ತಾಪಿಸುತ್ತಾರೆ. ಪಾಶ್ಚಾತ್ಯರಲ್ಲಿ ಈ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದಿವೆ. ಅದರಲ್ಲಿ ಪ್ರಮುಖವಾಗಿ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

"ನುಡಿಮಿಶ್ರಣವೆಂದರೆ ಮೂಲಧಾತುಗಳನ್ನು ಮುಖ್ಯವಾಗಿ ನಾಮಪದಗಳನ್ನು ಒಂದು ಭಾಷೆಯಿಂದ ತೆಗೆದುಕೊಂಡು ಮತ್ತೊಂದು ಭಾಷೆಯಲ್ಲಿ ಮೇಲುಗೈ ಸಾಧಿಸುವಂತೆ ಉಚ್ಚರಿಸಿ ಬಳಸುವುದು" ನುಡಿಜಗಿತ ವೆಂದರೆ "ಒಂದೇ ಸಂಭಾಷಣೆ ಅಥವಾ ಮಾತಿನ ಅವಧಿಯಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಬದಲಾವಣೆಗೊಳ್ಳುವುದು"(ಹ್ಯಾಮರ್ಸ್ ಮತ್ತು ಬ್ಲಾಂಕ್, ೧೯೮೯, ಪು.೩೫)

ಸೀತಾ ಕಿಷ್ಣ ಅವರು ಸರ್ನ್ನಾಮಿ(ಹಿಂದುಸ್ತಾನಿ)ಯ ಮೇಲೆ ಸಂಶೋಧನೆ ನಡೆಸಿದ್ದು, ಒಳನುಡಿ ಮಿಶ್ರಣಕ್ಕೂ ಸ್ವೀಕರಣಕ್ಕೂ ನಡುವೆ ಯಾವುದೇ ರೀತಿಯ ವ್ಯತ್ಯಾಸಗಳಿಲ್ಲವೆಂಬುದನ್ನು ವಿಸ್ತರವಾಗಿ ಚರ್ಚಿಸಿದ್ದಾರೆ.

ರಾಬ್ ಕ್ರಾಮ ಮತ್ತು ಹೆಲೀನ್ ವ್ಯಾನ್ ಗೆಲ್ಡೆರೆನ್ ಅವರುಗಳು ಡಚ್- ಇಂಗ್ಲಿಷ್ ನುಡಿಮಿಶ್ರಣದ ಮೇಲೆ ಅಧ್ಯಯನ ನಡೆಸಿದ್ದು ಸಮಾನೋಚ್ಚಾರಣ ಪದಗಳ ಮಿಶ್ರಣದ ಸೌಲಭ್ಯಗಳನ್ನು ಮಾಡುವಲ್ಲಿನ ಮಹತ್ವವನ್ನು ಗುರುತಿಸಿದ್ದಾರೆ.

ಜೀನ್ನೆನ್ ಟ್ರೆಫರ್ಸ್-ಡಲ್ಲರ್ ಅವರು ಬ್ರಸಲ್ಸ್‌ಡಚ್- ಫ್ರೆಂಚ್ ನುಡಿಮಿಶ್ರಣದಲ್ಲಿನ ಹೊರಮೈನ ಮಹತ್ವವನ್ನು ಕುರಿತು ತೋರಿಸಿಕೊಟ್ಟಿರುತ್ತಾರೆ. ಹಲವು ಉದಾಹರಣೆಗಳು ವಾಕ್ಯಾಂಶಗಳ ಅಂಚುಗಳಿಗಿಂತ (ಕೊನೆ ಭಾಗಗಳು)ಹೆಚ್ಚಾಗಿ ಮೂಲ ತಿರುಳುಗಳನ್ನು ಒಳಗೊಂಡಿರುವುದನ್ನು ತೋರಿಸುತ್ತದೆ. ಜಾಕೋಮಿನ್ ನೋರ್ಟಿಯರ್ ಅವರು ಮೊರಾಕ್ಕೊ ಅರ್‍ಯಾಬಿಕ್- ಡಚ್ ಭಾಷೆ ನುಡಿಮಿಶ್ರಣವನ್ನು ಅತ್ಯಂತ ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ.

ಜೆಟ್ಟಿ ಬೊಲ್ಲೆ ಅವರು ಸುರಿನಾಮಿ ಡಚ್ ಮತ್ತು ಆಮ್‌ಸ್ಟರ್‌ಡಂನ ಸ್ರಾನನ್ ಕ್ರಿಯೋಲ್‌ನ ಒಂದು ಬಗೆಯ ಎರಡು ಭಾಷೆಗಳು ಪರಸ್ಪರ ಸಂಪರ್ಕ ಹೊಂದಿದಾಗ ಆಗುವ ಮಿಶ್ರಣ ಬಗೆಗಳು ಹೇಗೆ ಭಿನ್ನತೆಯನ್ನು ಹೊಂದುತ್ತವೆ ಎಂಬುದನ್ನು ಸುರಿನಾಂ ಡಚ್ ಹಾಗೂ ಆಮ್‌ಸ್ಟರ್‌ಡಂನ ಸ್ರಾನನ್ ಕ್ರಿಯೋಲ್‌ಗಳ ಕುರಿತು ಪ್ರಾತ್ಯಕ್ಷಿಕೆ ನೀಡಿದ್ದಾರೆ. ಇಂಗ್ಲೆಂಡಿನ ಟೈನ್ ಬಳಿಯ ಚೀನಿ-ಇಂಗ್ಲೀಷ್ ದ್ವಿಭಾಷಾ ಕುಟುಂಬಗಳ ನುಡಿಜಗಿತದ ಅಧ್ಯಯನವನ್ನು ಮಾಡಿದ ವೇಯ್ ಮತ್ತು ಮಿಲ್ರಾಯ್ ೧೯೯೫ ಅವರು ನುಡಜಗಿತದ ಕಾರಣಗಳನ್ನು ಗುರುತಿಸಿದ್ದಾರೆ.

## ೮.೩. ಭಾಷಾ ಸಂಗೋಪನೆ ಮತ್ತು ಭಾಷಾ ನಿಷ್ಠೆ

ದ್ವಿಭಾಷಿಕ ಅಥವಾ ಬಹುತೇಕ ಬಹುಭಾಷಿಕ ಸಂದರ್ಭಗಳಲ್ಲಿ ಒಂದು ಭಾಷೆಯು ಬಲಿಷ್ಠವರ್ಗದಿಂದ ಬಳಸಲ್ಪಡುತ್ತದೆ. ಆದರೆ ಮತ್ತೊಂದು ಭಾಷೆ ಅಥವಾ ಭಾಷೆಗಳು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತವಲ್ಲದೆ ಚಲಾವಣೆಯಿಂದಲೂ ಮರೆಯಾಗುತ್ತವೆ. ಹಲವು ಸಂಗತಿಗಳು ವ್ಯಕ್ತಿ ಅಥವಾ ಗುಂಪುಗಳು ಯಾವ ದರ್ಜೆಯ ಭಾಷೆಯನ್ನು ಪ್ರಯೋಗಿಸುತ್ತವೆ ಎಂಬುದನ್ನು ನಿರ್ಧರಿಸುತ್ತವೆ. ಭಾಷೆಯೊಂದು ಅಲ್ಪಸಂಖ್ಯಾತವಾಗಿದ್ದು, ಆಡಳಿತ ಭಾಷೆಯಾದರೆ ಅದು ಸಂಗೋಪನೆಯಾಗುತ್ತಾ ಹೋಗುತ್ತದೆ ಮತ್ತು ಅಭಿವೃದ್ಧಿಯೂ ಆಗುತ್ತದೆ. ಭಾರತದಲ್ಲಿ ಉರ್ದು ಭಾಷೆಯನ್ನು ಕೆಲವು ಹಿಂದಿ ಭಾಷಿಕ ರಾಜ್ಯಗಳಲ್ಲಿ ದ್ವಿತೀಯ ಭಾಷೆಯಾಗಿ ಘೋಷಿಸಲಾಗಿದೆ. ಅಷ್ಟೇ ಅಲ್ಲದೆ ಸರ್ಕಾರದ ನೆರವನ್ನೂ, ಇತರ ಮೂಲಗಳಿಂದಲೂ ಪ್ರೋತ್ಸಾಹ ಪಡೆದಿದೆ. ಇದೊಂದು ಭಾಷಾ ಸಂಗೋಪನೆಯ ಅತ್ಯುತ್ತಮ ಉದಾಹರಣೆ. ಭಾಷಾ ಸಂಗೋಪನೆ ಎಂದರೆ ಭಾಷಾ ರಕ್ಷಣೆ, ಭಾಷೆಯನ್ನು ಉಳಿಸಿಕೊಳ್ಳುವಿಕೆ ಎಂದರ್ಥ. ಸಂಸ್ಕೃತದ್ದೂ ಇದೇ ತೆರನಾದದ್ದು. ಇದು ಇಂದು ಕೆಲವು ತೀರಾ ಕನಿಷ್ಠವಾಗಿ ವೈಯಕ್ತಿಕ ಅಥವಾ ಸಾರ್ವಜನಿಕ ಸಂದರ್ಭಗಳಲ್ಲಿ ಬಳಕೆಯಾಗುತ್ತಿದ್ದು, ಸರ್ಕಾರ ಮತ್ತು ಮಾಧ್ಯಮಗಳಿಂದ ಪ್ರಾಯೋಜಕತ್ವವನ್ನೂ ಪಡೆದಿದೆ. ಜೊತೆಗೆ ಹಲವು ಖಾಸಗಿ ಸಾರ್ವಜನಿಕ ರಂಗಗಳಲ್ಲಿ ಇದು ಸಂಗೋಪನೆಗೊಳ್ಳುತ್ತಿದೆ. ಅಲ್ಲದೆ ಅದನ್ನೊಂದು ವಿಷಯವಾಗಿ ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯಗಳಲ್ಲಿ ಸಾಕಷ್ಟು ಸಂಖ್ಯೆಯ ಜನರು ಅಧ್ಯಯನ ಮಾಡುತ್ತಿದ್ದಾರೆ. ಆದರೆ ಇನ್ನಿತರ ಭಾಷೆಗಳಾದ ಅರ್‍ಯಾಬಿಕ್, ಪರ್ಷಿಯನ್, ಪಾಳಿ, ಪ್ರಾಕೃತ, ಜರ್ಮನ್,

ಫ್ರೆಂಚ್, ರಷ್ಯನ್ ಭಾಷೆಗಳ ಭಾಷಿಕರಿಗೆ ಈ ಮಟ್ಟಿನ ಭಾಷಾಸಂಗೋಪನೆ ಬೃಹತ್ ಪ್ರಮಾಣದಲ್ಲಿ ಶೈಕ್ಷಣಿಕ ವಲಯದಿಂದಾಗಲೀ, ಅಥವಾ ಸರ್ಕಾರಿ ಪೋಷಿತ ಸಂಘಸಂಸ್ಥೆಗಳಿಂದಾಗಲಿ ಇರುವುದು ಕಂಡುಬಂದಿಲ್ಲ.

ಭಾಷಾ ಸಂಗೋಪನೆಯಂತೆ ಭಾಷಾ ನಿಷ್ಠೆಯೂ ಸಹ ಒಂದು ರೀತಿಯ ಪರಿಣಾಮವನ್ನುಂಟು ಮಾಡಲು ಸಹಕಾರಿಯಾದ ಸಂಗತಿ. ಇದರರ್ಥ ಭಾಷೆಯೊಂದು ಅದನ್ನಾಡುವ ಭಾಷಿಕರಿಂದ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವಾಗಿದ್ದು, ಆ ಭಾಷಿಕರು ಸಾಮಾನ್ಯವಾಗಿ ಅದೇ ದೇಶದ ಅಲ್ಪಸಂಖ್ಯಾತರಾಗಿರುತ್ತಾರಲ್ಲದೆ ಅಲ್ಲಿರುವ ಬೇರೊಂದು ಭಾಷೆಯು ಅಧಿಕಾರಸ್ಥ ಸ್ಥಾನದಲ್ಲಿರುತ್ತದೆ. ಜಾನ್ ಎಲ್ ಗುಂಪರ್ಜ್ ಹೇಳುವ ಹಾಗೆ ನಾವು ಭಾಷಾ ನಿಷ್ಠೆಯ ಬಗ್ಗೆ ಮಾತನಾಡುವಾಗ ನಿರ್ದಿಷ್ಟ ರಾಷ್ಟ್ರೀಯತೆಯ ಗುಂಪು ಅಥವಾ ಸಾಮಾಜಿಕ ಚಳವಳಿಯೊಂದು ಸಾಹಿತ್ಯದ ಬಗೆಯೊಂದನ್ನು ಪ್ರತಿಷ್ಠೆಯ ಸಂಕೇತವಾಗಿ ಸ್ವೀಕರಿಸಿರುವುದಾಗಿರುತ್ತದೆ. ಈ ಭಾಷಾ ನಿಷ್ಠೆಯ ಚದುರಿಹೋಗಿರುವ ಸ್ಥಳೀಯ ಗುಂಪುಗಳು ಮತ್ತ ಸಾಮಾಜಿಕ ವರ್ಗಗಳ ಸದಸ್ಯರನ್ನು ಒಂದುಗೂಡಿಸುವ ಹಾಗೂ ಅವರ ಸ್ವಂತ ದೇಸೀ ಭಾಷೆಯನ್ನು ಆಡುವ ಪರಂಪರೆಯನ್ನು ತಮ್ಮ ತಮ್ಮ ಕೌಟುಂಬಿಕ ವಲಯಗಳಲ್ಲಿ ಮುಂದುವರೆಸಿಕೊಂಡು ಹೋಗುವ ಒಲವನ್ನು ತೋರಿಸುತ್ತದೆ. ಸಾಹಿತ್ಯದ ನುಡಿಗಟ್ಟು ಸಾರ್ವಜನಿಕರು ಬಳಕೆ ಮಾಡಲು, ಓದಲು, ರಾಷ್ಟ್ರದ ಅಥವಾ ಪ್ರದೇಶದ ಸಾಂಸ್ಕೃತಿಕ ಪರಂಪರೆಯನ್ನು ಒಳಗೊಳ್ಳಲು ಕಾರಣವಾಗುತ್ತದೆ. ವ್ಯಕ್ತಿಗಳು ಭಾಷಾನಿಷ್ಠೇಯನ್ನು ರಾಜಕೀಯ ಮೌಲ್ಯಗಳ ವೈಶಾಲ್ಯ ರಾಷ್ಟ್ರನಿಷ್ಠೇಯ ಸಂಕೇತವಾಗಿ ಕುಟುಂಬ ಅಥವಾ ಸಂಬಂಧಗಳನ್ನು ಒಳಗೊಳ್ಳುವಂತೆ ಬಳಕೆಯಾಗುತ್ತದೆ(ಜಾನ್ ಎಲ್ ಗುಂಪರ್ಜ್, ೩೮೫-೮೬). ಈ ನಿಷ್ಠೆ ಎಂಬ ಪದ ವಿಷಯಾತ್ಮಕ ವಸ್ತುವಾಗಿದ್ದು, ಆಗಾಗ್ಗೆ ಭಾಷೆಯ 'ಶುದ್ಧತೆ' ಹಾಗೂ 'ಉನ್ನತಮಟ್ಟ' ಬೇರೆ ಬೇರೆ ಮಜಲುಗಳಲ್ಲಿ ಹೇಗೆ ಸಂಗೋಪನೆಯಾಗುತ್ತಿರುತ್ತದೆಂದು ತೋರಿಸುತ್ತದೆ. ಇದು ಮತ್ತೆ 'ಎಷ್ಟು ಮಂದಿ ಆ ಭಾಷೆಯ ಭಾಷಿಕರು ಒಂದೇ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ' ಎಂಬುದನ್ನು ಕಂಡು ಹಿಡಿಯುತ್ತದೆ. ದ್ವಿಭಾಷಿಕರಾದವರು ಬೇರೆ ಸ್ಥಳಗಳಿಗೆ ವಲಸೆ ಹೋದಾಗ ಅಲ್ಲಿ ಅವರ ಭಾಷೆ ಸಂಪೂರ್ಣ ಇಲ್ಲವಾಗಿದ್ದು ಅಥವಾ ಕಡಿಮೆಯಾದಾಗ ಭಾಷಾ ಸಂಗೋಪನೆಯ ಸಮಸ್ಯೆಯನ್ನು ಎದುರಿಸುತ್ತಾರೆ.

ಭಾಷಾನಿಷ್ಠೆ ಮತ್ತು ಸಂಗೋಪನೆಯು ಭಾಷಾ ಅಲ್ಪಸಂಖ್ಯಾತರ ಅವಿಭಾಜ್ಯ ಅಂಗವಾಗಿದ್ದು, ಜನಾಂಗದ ಸಾಂಸ್ಕೃತಿಕ ಚಹರೆಗಳನ್ನು ಕಾಯ್ದುಕೊಳ್ಳಲು ಸಂಗೋಪನೆ ನಡೆಸುತ್ತಿರುತ್ತಾರೆ ಅವರ ಹಬ್ಬ ಹರಿದಿನಗಳು, ಮತ್ತು ಧಾರ್ಮಿಕ ಆಚರಣೆಗಳು, ಸಭೆಗಳು, ಚರ್ಚಾಗೋಷ್ಠಿಗಳು, ಸೆಮಿನಾರುಗಳು ಹಾಗೂ ಸಮ್ಮೇಳನಗಳು ಅವರ ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಿರುತ್ತವೆ. ಹಾಗೂ ವೃತ್ತಪತ್ರಿಕೆಗಳು, ನಿಯತಕಾಲಿಕಗಳ ಪ್ರಕಟಣೆ ಹಾಗೂ ಇನ್ನಿತರ ಸಾಮಾಜಿಕ ಕಾರ್ಯ ಚಟುವಟಿಕೆಗಳ ಮೂಲಕ ತಮ್ಮ ಭಾಷಾ ನಿಷ್ಠೆಯನ್ನು ಪ್ರದರ್ಶಿಸುತ್ತವೆ.

# ಮಹಿಳಾ ಭಾಷಾ ಬಳಕೆಯ ಆವರಣ

| ಕ್ರ. ಸಂ. | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ವರ್ಗ | ಕುಟುಂಬ | ಮನೆ | ನೆರೆ ಹೊರೆ | ಸಂಬಂಧಿ ಕರು | ಶಾಲೆ | ಕೆಲಸ ಮಾಡುವ ಸ್ಥಳ | ಮಾರು ಕಟ್ಟೆ | ಪ್ರಾರ್ಥನೆ | ಟಿ.ವಿ. | ಕೃಷಿ | ಡಿ.ವಿ.ಡಿ. ವಿ.ಸಿ.ಡಿ. ಆಡಿಯೋ | ಸ್ನೇಹಿತರು | ಸಿನಿಮಾ |
|---|---|---|---|---|---|---|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ |
| ೧ | ೩೬ | ವಿಶ್ವಕರ್ಮ | ವಿದ್ಯಾವಂತೆ | ಟೈಲರಿಂಗ್ | ಮಧ್ಯಮ | ವಿಭಕ್ತ | ತೆ | ತೆ | ತೆ | ಕ | ತೆ/ಕ | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೨ | ೩೪ | ಒಕ್ಕಲಿಗ | ವಿದ್ಯಾವಂತೆ | ಸರ್ಕಾರಿ | ಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | ತೆ/ಕ | - | ತೆ | ತೆ/ಕ | ಕ | ತೆ/ಕ | ತೆ | ತೆ/ಕ |
| ೩ | ೪೯ | ಒಕ್ಕಲಿಗ | ವಿದ್ಯಾವಂತೆ | ಸರ್ಕಾರಿ | ಮಧ್ಯಮ | ವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೪ | ೧೭ | ನಾಯ್ಡು | ವಿದ್ಯಾವಂತೆ | ವಿದ್ಯಾರ್ಥಿ | ಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೫ | ೧೬ | ಕುರುಬ | ವಿದ್ಯಾವಂತೆ | ವಿದ್ಯಾರ್ಥಿ | ಮಧ್ಯಮ | ವಿಭಕ್ತ | ಕ | ಕ | ಕ | ಕ | - | - | ಕ | ಕ/ತೆ | - | ಕ/ತೆ | ಕ | ಕ/ತೆ |
| ೬ | ೧೮ | ಬಣಜಿಗ | ವಿದ್ಯಾವಂತೆ | ವಿದ್ಯಾರ್ಥಿ | ಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೭ | ೧೭ | ಬಣಜಿಗ | ವಿದ್ಯಾವಂತೆ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೮ | ೧೭ | ಭಜಂತ್ರಿ | ವಿದ್ಯಾವಂತೆ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ಕ |
| ೯ | ೧೮ | ಕುರುಬ | ವಿದ್ಯಾವಂತೆ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ಕ | ಕ | ಕ | ಕ | - | - | ಕ | ಕ/ತೆ | - | ಕ/ತೆ | ಕ | ಕ/ತೆ |
| ೧೦ | ೪೫ | ಒಕ್ಕಲಿಗ | ಅವಿದ್ಯಾವಂತೆ | ಗೃಹಿಣಿ | ಕೆಳಮಧ್ಯಮ | ಅವಿಭಕ್ತ | ಕ | ಕ | ಕ | - | - | - | ಕ | ಕ/ತೆ | - | ಕ/ತೆ | ಕ | ತೆ/ಕ |
| ೧೧ | ೫೦ | ಆರ್ಯವೈಶ್ಯ | ವಿದ್ಯಾವಂತೆ | ಗೃಹಿಣಿ | ಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | ಕ | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೧೨ | ೫೫ | ಬ್ರಾಹ್ಮಣ | ವಿದ್ಯಾವಂತೆ | ಗೃಹಿಣಿ | ಮಧ್ಯಮ | ಅವಿಭಕ್ತ | ಕ | ಕ | ಕ | ಕ | ಕ | - | ಕ | ಕ/ತೆ | - | ತೆ/ಕ | ಕ | ತೆ/ಕ |
| ೧೩ | ೫೦ | ಗೊಲ್ಲ | ವಿದ್ಯಾವಂತೆ | ಗೃಹಿಣಿ | ಉತ್ತಮ | ವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೧೪ | ೪೨ | ಬೆಸ್ತ | ವಿದ್ಯಾವಂತೆ | ಗೃಹಣಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | ಕ | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೧೫ | ೪೦ | ಕುರುಬ | ವಿದ್ಯಾವಂತೆ | ಗೃಹಿಣಿ | ಕೆಳಮಧ್ಯಮ | ಅವಿಭಕ್ತ | ಕ | ಕ | ಕ | ಕ | - | - | ಕ | ತೆ/ಕ | - | ತೆ/ಕ | ಕ | ತೆ/ಕ |
| ೧೬ | ೫೪ | ಪ.ಜಾ | ಅವಿದ್ಯಾವಂತೆ | ಕೂಲಿ | ಕೆಳವರ್ಗ | ಅವಿಭಕ್ತ | ಕ | ಕ | ಕ | - | ಕ | - | ಕ | ತೆ/ಕ | - | ತೆ/ಕ | ಕ | ತೆ/ಕ |
| ೧೭ | ೫೫ | ಪ.ವ. | ಅವಿದ್ಯಾವಂತೆ | ಕೂಲಿ | ಕೆಳವರ್ಗ | ಅವಿಭಕ್ತ | ತೆ | ತೆ | ತೆ | - | ತೆ | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೧೮ | ೨೫ | ಒಕ್ಕಲಿಗ | ಅವಿದ್ಯಾವಂತೆ | ಗೃಹಿಣಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | - | - | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೧೯ | ೩೦ | ಒಕ್ಕಲಿಗ | ಅವಿದ್ಯಾವಂತೆ | ಗೃಹಿಣಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | - | ತೆ | - | ತೆ | ತೆ/ಕ | - | ತೆ/ಕ | ತೆ | ತೆ/ಕ |
| ೨೦ | ೩೭ | ಪ.ಜಾ. | ಅವಿದ್ಯಾವಂತೆ | ಗೃಹಿಣಿ | ಕೆಳಮಧ್ಯಮ | ಅವಿಭಕ್ತ | ತೆ | ತೆ | ತೆ | - | ಕ | - | ತೆ | ತೆ/ಕ | - | ತೆ/ಕ | ತೆ | ತೆ/ಕ |

## ಪುರುಷರ ಭಾಷಾ ಬಳಕೆ ಆವರಣ

| ಕ್ರ. ಸಂ. | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ವರ್ಗ | ಕುಟುಂಬ | ಮನೆ | ನೆರೆ ಹೊರೆ | ಸಂಬಂಧಿ ಕರು | ಶಾಲೆ | ಕೆಲಸ ಮಾಡುವ ಸ್ಥಳ | ಮಾರು ಕಟ್ಟೆ | ಪ್ರಾರ್ಥನೆ | ಟಿ.ವಿ. | ಕಚೇರಿ | ಸಿನಿಮಾ | ಡಿ.ವಿ.ಡಿ. ವಿ.ಸಿ.ಡಿ. ಆಡಿಯೋ | ಸ್ನೇಹಿತರು |
|---|---|---|---|---|---|---|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ |
| ೧ | ೩೧ | ಗೊಲ್ಲ | ವಿದ್ಯಾವಂತ | ವ್ಯಾಪಾರ | ಕೆಳಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | ಕ | ತೆ/ಕ | ತೆ/ಕ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |
| ೨ | ೨೫ | ಪ.ಜಾ | ವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ಕ | ಕ/ತೆ | ಕ | ಕ | ಕ | ಕ/ತೆ | ಕ | ಕ/ತೆ | - | ತೆ/ಕ | ತೆ/ಕ | ತೆ/ಕ |
| ೩ | ೪೦ | ಬ್ರಾಹ್ಮಣ | ವಿದ್ಯಾವಂತ | ವ್ಯಾಪಾರ | ಮಧ್ಯಮ | ಅವಿಭಕ್ತ | ತೆ | ಕ/ತೆ | ತೆ | ಕ | ಕ/ತೆ | ಕ/ತೆ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |
| ೪ | ೪೭ | ಒಕ್ಕಲಿಗ | ವಿದ್ಯಾವಂತ | ಕಂಡಕ್ಟರ್ | ಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | ಕ | ತೆ/ಕ | ತೆ/ಕ | ತೆ | ತೆ/ಕ | ಕ | ತೆ/ಕ | ತೆ/ಕ | ತೆ/ಕ |
| ೫ | ೨೭ | ಆರ್ಯವೈಶ್ಯ | ವಿದ್ಯಾವಂತ | ವ್ಯಾಪಾರ | ಮೇ.ಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | ಕ | ತೆ/ಕ | ತೆ/ಕ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |
| ೬ | ೪೧ | ಬ್ರಾಹ್ಮಣ | ವಿದ್ಯಾವಂತ | ವ್ಯಾಪಾರ | ಮೇ.ಮಧ್ಯಮ | ಅವಿಭಕ್ತ | ಕ | ಕ/ತೆ | ಕ | ಕ | ಕ/ತೆ | ಕ/ತೆ | ಕ | ಕ/ತೆ | - | ಕ/ತೆ | ಕ/ತೆ | ಕ/ತೆ |
| ೭ | ೫೦ | ಆರ್ಯವೈಶ್ಯ | ವಿದ್ಯಾವಂತ | ವ್ಯಾಪಾರ | ಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | ಕ | ತೆ/ಕ | ತೆ/ಕ | ತೆ | ತೆ/ಕ | ಕ | ತೆ/ಕ | ತೆ/ಕ | ತೆ/ಕ |
| ೮ | ೩೪ | ಬಲಿಜ | ಅವಿದ್ಯಾವಂತ | ಖಾಸಗಿ | ಕೆಳಮಧ್ಯಮ | ವಿಭಕ್ತ | ತೆ | ತೆ/ಕ | ತೆ | ಕ | ತೆ/ಕ | ತೆ/ಕ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |
| ೯ | ೩೮ | ಕ್ರೈಸ್ತ | ವಿದ್ಯಾವಂತ | ಸರ್ಕಾರಿ | ಕೆಳಮಧ್ಯಮ | ವಿಭಕ್ತ | ಕ | ಕ/ತೆ | ಕ | ಕ | ಕ/ತೆ | ಕ/ತೆ | ಕ | ಕ/ತೆ | ಕ/ತೆ | ಕ/ತೆ | ಕ/ತೆ | ಕ/ತೆ |
| ೧೦ | ೫೬ | ಒಕ್ಕಲಿಗ ರೆಡ್ಡಿ | ವಿದ್ಯಾವಂತ | ಸರ್ಕಾರಿ | ಮಧ್ಯಮ | ವಿಭಕ್ತ | ತೆ | ತೆ/ಕ | ತೆ | ಕ | ಕ/ತೆ | ತೆ/ಕ | ತೆ | ತೆ/ಕ | ತೆ/ಕ | ತೆ/ಕ | ತೆ/ಕ | ತೆ/ಕ |
| ೧೧ | ೫೭ | ಪದ್ಮಶಾಳಿ | ವಿದ್ಯಾವಂತ | ಸರ್ಕಾರಿ | ಉತ್ತಮ | ವಿಭಕ್ತ | ತೆ | ತೆ/ಕ | ತೆ | ಕ | ಕ/ತೆ | ಕ/ತೆ | ತೆ | ತೆ/ಕ | ಕ/ತೆ | ತೆ/ಕ | ತೆ/ಕ | ತೆ/ಕ |
| ೧೨ | ೨೭ | ಒಕ್ಕಲಿಗ | ವಿದ್ಯಾವಂತ | ಖಾಸಗಿ | ಮಧ್ಯಮ | ಅವಿಭಕ್ತ | ಕ | ಕ/ತೆ | ಕ | ಕ | ಕ/ತೆ | ಕ/ತೆ | ಕ | ಕ/ತೆ | ಕ/ತೆ | ಕ/ತೆ | ಕ/ತೆ | ಕ/ತೆ |
| ೧೩ | ೧೭ | ಒಕ್ಕಲಿಗ | ವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ಕ | ಕ/ತೆ | ಕ | ಕ | - | ಕ/ತೆ | ಕ | ಕ/ತೆ | - | ಕ/ತೆ | ಕ/ತೆ | ಕ/ತೆ |
| ೧೪ | ೧೮ | ಒಕ್ಕಲಿಗ | ವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | ಕ | - | ತೆ/ಕ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |
| ೧೫ | ೧೯ | ಒಕ್ಕಲಿಗ | ವಿದ್ಯಾವಂತ | ವಿದ್ಯಾರ್ಥಿ | ಕೆಳಮಧ್ಯಮ | ವಿಭಕ್ತ | ಕ | ಕ/ತೆ | ಕ | ಕ | - | ಕ/ತೆ | ಕ | ಕ/ತೆ | - | ಕ/ತೆ | ಕ/ತೆ | ಕ/ತೆ |
| ೧೬ | ೧೮ | ಕುರುಬ | ಅವಿದ್ಯಾವಂತ | ಕೂಲಿ | ಕೆಳವರ್ಗ | ವಿಭಕ್ತ | ಕ | ಕ/ತೆ | ಕ | - | ಕ/ತೆ | ಕ/ತೆ | ಕ | ತೆ/ಕ | - | ತೆ/ಕ | ತೆ/ಕ | ಕ/ತೆ |
| ೧೭ | ೧೬ | ಕುರುಬ | ಅವಿದ್ಯಾವಂತ | ಕೂಲಿ | ಕೆಳವರ್ಗ | ಅವಿಭಕ್ತ | ಕ | ಕ/ತೆ | ಕ | - | ಕ/ತೆ | ಕ/ತೆ | ಕ | ತೆ/ಕ | - | ತೆ/ಕ | ತೆ/ಕ | ಕ/ತೆ |
| ೧೮ | ೬೨ | ಪ.ಜಾ. | ಅವಿದ್ಯಾವಂತ | ಕೂಲಿ | ಕೆಳವರ್ಗ | ಅವಿಭಕ್ತ | ಕ | ಕ/ತೆ | ಕ | - | ಕ/ತೆ | ಕ/ತೆ | ಕ | ತೆ/ಕ | - | ತೆ/ಕ | ತೆ/ಕ | ಕ/ತೆ |
| ೧೯ | ೬೪ | ನಾಯಕ | ವಿದ್ಯಾವಂತ | ಸರ್ಕಾರಿ | ಕೆಳವರ್ಗ | ಅವಿಭಕ್ತ | ತೆ | ತೆ/ಕ | ತೆ | ಕ | ಕ/ತೆ | ತೆ/ಕ | ತೆ | ತೆ/ಕ | ಕ/ತೆ | ತೆ/ಕ | ತೆ/ಕ | ಕ/ತೆ |
| ೨೦ | ೬೦ | ಬಣಜಿಗ | ಅವಿದ್ಯಾವಂತ | ವ್ಯಾಪಾರ | ಮಧ್ಯಮ | ಅವಿಭಕ್ತ | ತೆ | ತೆ/ಕ | ತೆ | | ತೆ/ಕ | ತೆ/ಕ | ತೆ | ತೆ/ಕ | - | ತೆ/ಕ | ತೆ/ಕ | ತೆ/ಕ |

ಪುರುಷರ ಭಾಷಾ ಬಳಕೆಯ ಆವರಣಗಳ ಕೋಷ್ಟಕ ೧ರ ವಿವರಗಳು

ಮೊದಲನೆ ತಲೆಮಾರು(೪೫-೬೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೦೪ | ೪೭ | ೦೨ | ೦೩ | ೦೭ | ೧೨ |
| ೦೭ | ೫೦ | ೦೨ | ೦೩ | ೦೭ | ೧೨ |
| ೧೦ | ೫೬ | ೦೧ | ೦೩ | ೦೮ | ೧೨ |
| ೧೧ | ೫೭ | ೦೧ | ೦೩ | ೦೮ | ೧೨ |
| ೧೮ | ೬೨ | ೦೩ | ೦ | ೦೭ | ೧೦ |
| ೧೯ | ೬೪ | ೦೧ | ೦೩ | ೦೮ | ೧೨ |
| ೨೦ | ೬೦ | ೦ | ೦೩ | ೦೭ | ೧೦ |
| ಒಟ್ಟು ಆವರಣಗಳು | | ೧೦ | ೧೮ | ೫೨ | ೬೮ |
| ಶೇಕಡವಾರು | | ೧೪.೨% | ೨೫.೭% | ೭೪% | |

ಪುರುಷರ ಭಾಷಾ ಬಳಕೆಯ ಆವರಣಗಳ ಕೋಷ್ಟಕ ೧ರ ವಿವರಗಳು

ಎರಡನೆ ತಲೆಮಾರು(೨೫-೪೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೦೧ | ೩೧ | ೦೧ | ೦೩ | ೦೭ | ೧೧ |
| ೦೨ | ೨೫ | ೦೫ | ೦ | ೦೬ | ೧೧ |
| ೦೩ | ೪೦ | ೦೧ | ೦೩.೦ | ೦೭ | ೧೧ |
| ೦೫ | ೨೭ | ೦೧ | ೦೩.೦ | ೦೭ | ೧೧ |
| ೦೬ | ೪೧ | ೦೪ | ೦ | ೦೭ | ೧೧ |
| ೦೮ | ೩೪ | ೦ | ೦೩ | ೦೭ | ೧೦ |
| ೦೯ | ೩೮ | ೦೪ | ೦ | ೦೮ | ೧೨ |
| ೧೨ | ೨೭ | ೦೪ | ೦ | ೦೮ | ೧೨ |
| ಒಟ್ಟು ಆವರಣಗಳು | | ೨೦ | ೧೨ | ೫೭ | ೯೯ |
| ಶೇಕಡವಾರು | | ೨೫ % | ೧೫ % | ೭೧.೨ % | |

ಪುರುಷರ ಭಾಷಾ ಬಳಕೆಯ ಆವರಣಗಳ ಕೋಷ್ಟಕ ೧ರ ವಿವರಗಳು

ಎರಡನೆ ತಲೆಮಾರು(೧೨-೨೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೧೩ | ೧೭ | ೦೪ | ೦ | ೦೬ | ೧೦ |
| ೧೪ | ೧೮ | ೦೧ | ೦೩ | ೦೬ | ೧೦ |
| ೧೫ | ೧೯ | ೦೪ | ೦ | ೦೬ | ೧೦ |
| ೧೬ | ೧೮ | ೦೩ | ೦ | ೦೭ | ೧೦ |
| ೧೭ | ೧೬ | ೦೩ | ೦ | ೦೭ | ೧೦ |
| ಒಟ್ಟು ಆವರಣಗಳು | | ೧೫ | ೦೩ | ೩೨ | ೫೦ |
| ಶೇಕಡವಾರು | | ೩೦ % | ೧೦ % | ೬೪ % | |

ಪುರುಷರ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ಪಟ್ಟಿ ೧

| ಕ್ರ.ಸಂ. | ತಲೆಮಾರು | ಕನ್ನಡ | ತೆಲುಗು | ದ್ವಿಭಾಷಿಕ ಆವರಣ ಕನ್ನಡ-ತೆಲುಗು |
|---|---|---|---|---|
| ೧ | ಮೊದಲನೇ | ೧೪ | ೨೫ | ೭೪ |
| ೨ | ಎರಡನೇ | ೨೫ | ೧೫ | ೭೧ |
| ೩ | ಮೂರನೇ | ೩೦ | ೧೦ | ೬೪ |

ಪುರುಷರ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೩




ಪುರುಷರ ದ್ವಿಭಾಷಿಕತೆ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೪



ಮೇಲಿನ ಪಟ್ಟಿಯಲ್ಲಿ ಕಂಡುಬಂದ ಪುರುಷರ ಭಾಷಾ ಬಳಕೆಯ ಪ್ರಮಾಣವನ್ನು ತಲೆಮಾರುಗಳ ಅಂತರದಲ್ಲಿ ಮುಂದಿನ ನಕ್ಷೆ ಮೂಲಕ ತಿಳಿಸಲಾಗಿದೆ.

ಕ್ಷೇತ್ರಕಾರ್ಯದಲ್ಲಿ ದೊರೆತ ಪುರುಷರ ಭಾಷಾ ಬಳಕೆಯ ಪ್ರಮಾಣವನ್ನು ಅಂಕಿ ಅಂಶಗಳ ಮೂಲಕ ಗಮನದಲ್ಲಿಟ್ಟುಕೊಂಡು ಚರ್ಚಿಸಲಾಗಿದೆ. ಮೊದಲನೇ ತಲೆಮಾರಿನಲ್ಲಿ ಕನ್ನಡ ಭಾಷಾ ಬಳಕೆಯ ಪ್ರಮಾಣ ಆವರಣದಲ್ಲಿ ಶೇ.೧೪ ರಷ್ಟಿದ್ದರೆ, ತೆಲುಗು ಭಾಷಾ ಬಳಕೆಯ ಪ್ರಮಾಣ ಶೇ.೨೫ ರಷ್ಟಿದೆ. ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳನ್ನು ಬಳಕೆ ಮಾಡುವವರ ಪ್ರಮಾಣ ಶೇಕಡ ೭೪ ರಷ್ಟಿರುವುದು ಕಂಡುಬಂದಿದೆ. ಈ ತಲೆಮಾರಿನವರಲ್ಲಿ ಕನ್ನಡ ತೆಲುಗು ಭಾಷಾ ಬಳಕೆ ಪ್ರಮಾಣವನ್ನು ಗಮನಿಸಿದಾಗ ಕನ್ನಡ ಭಾಷಾ ಬಳಕೆಯ ಆವರಣಗಳು ತೆಲುಗು ಭಾಷಾ ಬಳಕೆಯ ಆವರಣಗಳಗಿಂತ ತೀರಾ ಕಡಿಮೆ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಹಾಗೂ ದ್ವಿಭಾಷಾ ಬಳಕೆಯ ಆವರಣ ಜಾಸ್ತಿಯಾಗಿರುವುದು ಜಿಲ್ಲೆಯಲ್ಲಿ ದ್ವಿಭಾಷಾಕ ನೆಲೆಗಳ ಪ್ರಮಾಣ ಜಾಸ್ತಿಯಾಗಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೆ ಈ ತಲೆಮಾರಿನವರಲ್ಲಿ ತೆಲುಗು ಭಾಷೆಯ ಸಂಗೋಪನೆ ಹೆಚ್ಚಾಗಿರುವುದು ಕಂಡುಬರುತ್ತದೆ.

ಎರಡನೇ ತಲೆಮಾರಿನಲ್ಲಿ ಕನ್ನಡ ಭಾಷಾ ಬಳಕೆದಾರರ ಪ್ರಮಾಣ ಶೇ.೨೫ ರಷ್ಟಿದೆ. ತೆಲುಗು ಭಾಷಾ ಬಳಕೆದಾರರ ಪ್ರಮಾಣ ಶೇ.೧೫ ರಷ್ಟಿದೆ. ಮೊದಲನೇ ತಲೆಮಾರಿನ ಸಂಖ್ಯೆಗೆ ಹೋಲಿಸಿದಾಗ ಎರಡನೇ ತಲೆಮಾರಿನ ಕನ್ನಡ ಭಾಷಾ ಬಳಕೆಯ ಆವರಣಗಳ ಸಂಖ್ಯೆ ಶೇ.೧೧ರಷ್ಟು ಹೆಚ್ಚಾಗಿರುವುದು ಕಂಡುಬಂದರೆ, ತೆಲುಗು ಭಾಷಾ ಬಳಕೆ ಪ್ರಮಾಣ ಶೇ.೧೦ರಷ್ಟು ಕಡಿಮೆಯಾಗುವುದು ಕಂಡುಬರುತ್ತದೆ. ಇದು ತೆಲುಗು ಭಾಷಿಕರು ಕ್ರಮೇಣ ಕನ್ನಡಕ್ಕೆ ಪಲ್ಲಟವಾಗುತ್ತಿರುವ ಅಂಶವನ್ನು ಸೂಚಿಸುತ್ತದೆ. ಹಾಗೆಯೇ ಕನ್ನಡ ತೆಲುಗು ಭಾಷಾ ಬಳಕೆದಾರರ ಪ್ರಮಾಣ ಶೇ.೭೧ಕಷ್ಟಿರುವುದು ಕಂಡುಬರುತ್ತದೆ. ಇದು ಮೊದಲನೇ ತಲೆಮಾರಿಗಿಂತ ಶೇ.೩ರಷ್ಟು ದ್ವಿಭಾಷಿಕರು ಕಡಿಮೆಯಾಗಿರುವುದನ್ನು ಸೂಚಿಸುತ್ತದೆ.

ಮೂರನೇ ತಲೆಮಾರಿನ ಭಾಷಿಕರಲ್ಲಿ ಕನ್ನಡ ಭಾಷಾ ಬಳಕೆದಾರರ ಪ್ರಮಾಣ ಶೇ.೩೦ರಷ್ಟು ಕಂಡುಬಂದರೆ, ಅದೇ ಸಂದರ್ಭದಲ್ಲಿ ತೆಲುಗು ಭಾಷಾ ಬಳಕೆದಾರ ಪ್ರಮಾಣ ಶೇ.೧೦ಕ್ಕೆ ಇಳಿದಿದೆ. ಇಲ್ಲಿ ಕನ್ನಡ ಭಾಷಾ ಬಳಕೆದಾರರ ಶೇಕಡವಾರು ಪ್ರಮಾಣ ಎರಡನೇ ತಲೆಮಾರಿಗಿಂತ ಶೇ.೫ರಷ್ಟು ಹೆಚ್ಚಾಗಿರುವುದು ಕಂಡುಬರುತ್ತದೆ. ಹಾಗೆಯೇ ತೆಲುಗೂ ಭಾಷಾ ಬಳಕೆದಾರರ ಸಂಖ್ಯೆ ಶೇ.೧೦ರಷ್ಟಿದೆ. ಇದು ತೆಲುಗು ಭಾಷಿಕರ ಪ್ರಮಾಣ ಎರಡನೆ ತಲೆಮಾರಿನ ತೆಲುಗು ಭಾಷಿಕರ ಪ್ರಮಾಣಕ್ಕಿಂತ ಶೇ. ೫ರಷ್ಟು ಇಳಿಕೆಯಾಗಿರುವುದು ಕಂಡುಬರುತ್ತದೆ. ಮೂರನೇ ತಲೆಮಾರಿನ ತೆಲುಗು ಭಾಷಿಕರು ಕನ್ನಡಕ್ಕೆ ಪಲ್ಲಟವಾಗುತ್ತಿರುವುದನ್ನು ಇದು ಸೂಚಿಸುತ್ತದೆ.

## ಮಹಿಳೆಯರ ಭಾಷಾ ಬಳಕೆಯ ಆವರಣಗಳ ಕೋಷ್ಟ ೨ರ ವಿವರಗಳು

### ಮೊದಲನೇ ತಲೆಮಾರು(೪೫-೬೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೧೧ | ೫೦ | ೦೧ | ೦೫ | ೦೩ | ೦೯ |
| ೧೨ | ೫೫ | ೦೬ | ೦ | ೦೩ | ೦೯ |
| ೧೩ | ೫೦ | ೦೧ | ೦೫ | ೦೨ | ೦೮ |
| ೧೭ | ೫೫ | ೦ | ೦೬ | ೦೩ | ೦೯ |
| ೦೩ | ೪೯ | ೦೧ | ೦೪ | ೦೩ | ೦೮ |
| ೧೬ | ೫೪ | ೦೬ | ೦೧ | ೦೨ | ೯ |
| ಒಟ್ಟು ಆವರಣಗಳು | | ೧೫ | ೨೧ | ೧೬ | ೫೨ |
| ಶೇಕಡವಾರು | | ೨೫% | ೩೫% | ೨೬% | |

### ಎರಡನೇ ತಲೆಮಾರು(೨೫-೪೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೦೧ | ೩೬ | ೦೧ | ೦೫ | ೦೪ | ೧೦ |
| ೦೨ | ೩೪ | ೦೨ | ೦೫ | ೦೪ | ೧೧ |
| ೧೦ | ೪೫ | ೦೫ | ೦ | ೦೩ | ೦೮ |
| ೧೪ | ೪೨ | ೦೧ | ೦೫ | ೦೩ | ೦೯ |
| ೧೫ | ೪೦ | ೦೬ | ೦ | ೦೨ | ೦೮ |
| ೧೯ | ೩೦ | ೦ | ೦೬ | ೦೩ | ೦೯ |
| ೨೦ | ೩೭ | ೦ | ೦೫ | ೦೩ | ೦೮ |
| ೧೬ | ೫೪ | ೦೬ | ೦೧ | ೦೨ | ೯ |
| ಒಟ್ಟು ಆವರಣಗಳು | | ೦೧ | ೨೬ | ೨೨ | ೬೩ |
| ಶೇಕಡವಾರು | | ೧೨% | ೩೭% | ೩೧% | |

ಮೂರನೇ ತಲೆಮಾರು(೧೨-೨೫)

| ಕ್ರ.ಸಂ. | ವಯಸ್ಸು | ಕನ್ನಡ | ತೆಲುಗು | ಕನ್ನಡ-ತೆಲುಗು ದ್ವಿಭಾಷಿಕ ಆವರಣ | ಒಟ್ಟು ಆವರಣ |
|---|---|---|---|---|---|
| ೦೪ | ೧೭ | ೦೧ | ೦೫ | ೦೩ | ೦೯ |
| ೦೫ | ೧೬ | ೦೬ | ೦ | ೦೩ | ೦೯ |
| ೦೬ | ೧೮ | ೦೧ | ೦೫ | ೦೩ | ೦೯ |
| ೦೭ | ೧೭ | ೦೧ | ೦೫ | ೦೩ | ೦೯ |
| ೦೮ | ೧೭ | ೦೧ | ೦೫ | ೦೩ | ೦೯ |
| ೦೯ | ೧೮ | ೦೬ | ೦೦ | ೦೩ | ೦೯ |
| ೧೮ | ೨೫ | ೦೦ | ೦೫ | ೦೩ | ೦೮ |
| ಒಟ್ಟು ಆವರಣಗಳು | | ೧೬ | ೨೫ | ೨೧ | ೪೯ |
| ಶೇಕಡವಾರು | | ೨೨% | ೩೫% | ೩೦% | |

ಮಹಿಳೆಯರ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ಪಟ್ಟಿ ೨

| ಕ್ರ.ಸಂ. | ತಲೆಮಾರು | ಕನ್ನಡ | ತೆಲುಗು | ದ್ವಿಭಾಷಿಕ ಆವರಣ ಕನ್ನಡ-ತೆಲುಗು |
|---|---|---|---|---|
| ೧ | ಮೊದಲನೇ | ೨೫ | ೩೫ | ೨೬ |
| ೨ | ಎರಡನೇ | ೧೨ | ೩೭ | ೩೧ |
| ೩ | ಮೂರನೇ | ೨೨ | ೩೫ | ೩೦ |

ಮಹಿಳೆಯ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೫




ಮಹಿಳೆಯ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೬



ಮಹಿಳೆಯ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ೭




ಮಹಿಳೆಯರ ದ್ವಿಭಾಷಿಕತ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ೮



ಮೇಲಿನ ಪಟ್ಟಿಯಲ್ಲಿ ಕಂಡುಬಂದ ಮಹಿಳೆಯರ ಭಾಷಾ ಬಳಕೆಯ ಪ್ರಮಾಣವನ್ನು ತಲೆಮಾರುಗಳ ಅಂತರದಲ್ಲಿ ಮುಂದಿನ ನಕ್ಷೆಗಳ ಮೂಲಕ ಚರ್ಚಿಸಲಾಗಿದೆ.

ಮಹಿಳೆಯ ಭಾಷಾ ಬಳಕೆಯ ಆವರಣಗಳನ್ನು ಕುರಿತು ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತ ದತ್ತಮಾಹಿತಿಯ ಅಂಕಿ ಅಂಶಗಳ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ವಿಶ್ಲೇಷಿಸಲಾಗಿದೆ. ಮೊದಲನೇ ತಲೆಮಾರಿನ ಕನ್ನಡ ಸಾಹಿತ್ಯ ಭಾಷಾ ಬಳಕೆದಾರರ ಶೇಕಡವಾರು ಸಂಖ್ಯೆ ೨೫ರಷ್ಟಿದೆ. ಇದೇ ಸಂದರ್ಭದಲ್ಲಿ ತೆಲುಗ ಭಾಷಾ ಬಳಕೆದಾರ ಶೇಕಡವಾರು ಸಂಖ್ಯೆ ೩೫ ರಷ್ಟಿದ್ದು ಕನ್ನಡ ಭಾಷಾ ಬಳಕೆದಾರರಿಗಿಂತ ಶೇ.೧೦ಕಷ್ಟು ತೆಲುಗು ಭಾಷಾ ಬಳಕೆಯ ಆವರಣಗಳು ಹೆಚ್ಚಾಗಿರುವುದು ಕಂಡುಬಂದಿದೆ. ಇದು ತೆಲುಗು ಮಹಿಳಾ ಭಾಷಿಕರ ಹೆಚ್ಚಳವನ್ನು ಕುರಿತು ಹೇಳುತ್ತದೆ. ಇದೇ ಸಂದರ್ಭದಲ್ಲಿ ಮೊದಲನೇ ತಲೆಮಾರಿನ ದ್ವಿಭಾಷಾ ಬಳಕೆದಾರರ ಆವರಣಗಳನ್ನು ಗಮನಿಸಿದಾಗ ೨೬ರಷ್ಟಿರುವುದು ಕಂಡುಬರುತ್ತದೆ. ಇದು ಪುರುಷ ದ್ವಿಭಾಷಾ ಬಳಕೆದಾರರಿಗಿಂತ ಶೇ.೪೮ರಷ್ಟು ಕಡಿಮೆಯಿರುವುದು ಕಂಡುಬಂದಿದೆ. ಇದು ಮಹಿಳೆಯರು ಸಾಮಾನ್ಯವಾಗಿ ಹೆಚ್ಚಾಗಿ ಏಕಭಾಷಿಕರೇ ಆಗಿರುತ್ತಾರೆಂಬ ಅಂಶವನ್ನು ಸೂಚಿಸುತ್ತದೆ.

ಎರಡನೇ ತಲೆಮಾರಿನ ಅಂಕಿ ಅಂಶಗಳನ್ನು ಗಮನಿಸಿದಾಗ ಮಹಿಳಾ ಕನ್ನಡ ಭಾಷಾ ಬಳಕೆದಾರರ ಶೇಕಡವಾರು ಸಂಖ್ಯೆ ೧೨ರಷ್ಟಿರುವುದು ತಿಳಿದುಬರುತ್ತದೆ. ಅದೇ ಸಂದರ್ಭದಲ್ಲಿ ತೆಲುಗು ಭಾಷಾ ಬಳಕೆ ಆವರಣಗಳು ಶೇ.೩೭ಷ್ಟಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಸಂಶೋಧಕ ಸಂದರ್ಶಿಸಿದ ಮಹಿಳಾ ಭಾಷಿಕರಲ್ಲಿ ಕನ್ನಡ ಭಾಷಿಕರು ಕಡಿಮೆಯಿದ್ದು, ತೆಲುಗು ಭಾಷಿಕರು ಹೆಚ್ಚಾಗಿರುವುದಾಗಿದೆ. ಆದರೆ ಒಟ್ಟಾರೆ ದ್ವಿಭಾಷಾ ಶೇ.೩೧ರಷ್ಟು ಏರಿಕೆ ಕಂಡಿರುವುದು ಆಧುನಿಕ ಸಂದರ್ಭದಲ್ಲಿ ದೃಶ್ಯಮಾಧ್ಯಮವಾದ ಟಿ.ವಿ.ಗಳ ಮೂಲಕ ತೆಲುಗು ಕನ್ನಡ ಸಿನಿಮಾ ಹಾಗೂ ಇತರೆ ಮನರಂಜನಾ ಕಾರ್ಯಕ್ರಮಗಳನ್ನು ವೀಕ್ಷಿಸುವುದರಿಂದ ಗ್ರಹಿಕೆ ನೆಲೆಯಲ್ಲಿ ಮಹಿಳೆಯರು ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ.

ಮೂರನೇ ತಲೆಮಾರಿನ ಭಾಷಿಕರನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಕನ್ನಡ ಭಾಷಾ ಬಳಕೆ ಆವರಣಗಳ ಸಂಖ್ಯೆ ಶೇ.೨೨ರಷ್ಟಿದ್ದರೆ ತೆಲುಗು ಭಾಷಾ ಬಳಕೆದಾರರ ಆವರಣಗಳ ಸಂಖ್ಯೆ ೩ರಷ್ಟಿರುವುದು ಕಂಡುಬರುತ್ತದೆ. ಇದು ಕನ್ನಡ ಭಾಷಾ ಮಹಿಳೆಯರಿಗಿಂತ ತೆಲುಗು ಭಾಷೆ ಮಹಿಳೆಯರ ಸಂಖ್ಯೆಯಲ್ಲಿ ಹೆಚ್ಚಾಗಿರುವುದನ್ನು ಸೂಚಿಸುತ್ತದೆ. ದ್ವಿಭಾಷಾ ಆವರಣಗಳನ್ನು ಗಮನಿಸಿದಾಗ ಇಲ್ಲಿ ಶೇ.೩೦ರಷ್ಟಿರುವುದು ಕಂಡುಬಂದಿದೆ. ಎರಡನೇ ತಲೆಮಾರಿನಗಿಂತ ಶೇ.೧ರಷ್ಟು ಇಳಿಮುಖವಾಗಿದೆ. ದ್ವಿಭಾಷಾ ಪ್ರಮಾಣದಲ್ಲಿ ಮಹಿಳೆಯರ ಸಂಖ್ಯೆ ಪುರುಷರಿಗಿಂತ ಕಡಿಮೆಯಿದ್ದರೂ ಅವಶ್ಯಕತೆಗಳಿಗೆ ಅನುಸಾರವಾಗಿ ಮಹಿಳೆಯರಲ್ಲಿ ದ್ವಿಭಾಷಾ ಪ್ರಮಾಣ ಸ್ಥಿರವಾಗಿರುವುದು ಕಂಡುಬಂದಿದೆ.

ಕನ್ನಡ-ತೆಲುಗು ಎರಡು ಭಾಷಾ ಬಳಕೆಯ ಆವರಣಗಳಲ್ಲಿ ಮೂರನೇ ತಲೆಮಾರಿನಲ್ಲಿ ಶೇ.೬೪ರಷ್ಟಿರುವುದು ಕಂಡುಬಂದಿದೆ. ಇಲ್ಲಿ ಎರಡನೇ ತಲೆಮಾರಿಗಿಂತ ಶೇ.೭ರಷ್ಟು ಇಳಿಕೆಯಾಗಿದೆ.

ಇದನ್ನು ಗಮನಿಸಿದಾಗ ಮೂರನೇ ತಲೆಮಾರಿನ ತೆಲುಗು ಭಾಷಿಕರ ಕಾಲಕ್ರಮೇಣ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಕ್ಕೆ ಪಲ್ಲಟವಾಗುವುದನ್ನು ಸೂಚಿಸುತ್ತದೆ.

**ಜಿಲ್ಲೆಯ ಭಾಷಿಕ ಸಮುದಾಯದಲ್ಲಿ ಬಳಕೆಯ ಭಾಷೆಯ**

**ಒಟ್ಟಾರೆ ಪ್ರಮಾಣ(ಶೇಕಡವಾರು) ಪಟ್ಟಿ ೩**

| ಕ್ರ.ಸಂ. | ತಲೆಮಾರುಗಳು | ಕನ್ನಡ | ತೆಲುಗು | ದ್ವಿಭಾಷಿಕತೆ |
|---|---|---|---|---|
| ೧ | ಮೊದಲನೇ | ೧೦.೯ | ೩೦.೦ | ೫೦.೦ |
| ೨ | ಎರಡನೇ | ೧೦.೮ | ೨೦.೬ | ೫೦.೧ |
| ೩ | ಮೂರನೇ | ೨೦.೬ | ೨೦.೨ | ೪೦.೭ |

ಜಿಲ್ಲೆಯ ಲಿಂಗಾಧಾರಿತ ಭಾಷಾ ಬಳಕೆಯ ಸಂದರ್ಭಗಳನ್ನು ದತ್ತದ ಮಾಹಿತಿಯ ಆಧಾರದ ಮೇಲೆ ವಿಶ್ಲೇಷಿಸಿದಾಗ ಮೂರನೇ ತಲೆಮಾರಿನವರೆಗಿನ ಅಂಕಿ-ಅಂಶಗಳು ಕುತೂಹಲಕಾರಿ ಅಂಶಗಳನ್ನು ಹೊರಗೆಡಹಿವೆ. ಪುರುಷ ಹಾಗೂ ಮಹಿಳೆಯರ ಒಟ್ಟಾರೆ ಶೇಕಡವಾರು ಪ್ರಮಾಣವನ್ನು ಗಮನಿಸಿದಾಗ ಮೊದಲನೇ ತಲೆಮಾರಿನವರಲ್ಲಿ ಕನ್ನಡ ಭಾಷಾ ಬಳಕೆ ಶೇ.೧೦.೯ರಷ್ಟಿದ್ದರೆ, ತೆಲುಗು ಭಾಷಾ ಬಳಕೆ ಶೇ.೩೦.೦ರಷ್ಟಿದೆ. ಎರಡೂ ಬಳಕೆ ಶೇ.೫೦ರಷ್ಟಿರುವುದು ಕಂಡುಬಂದಿದೆ. ತೆಲುಗು ಭಾಷಿಕರ ಸಂಖ್ಯೆ ಶೇ.೧೯.೧ರಷ್ಟು ಹೆಚ್ಚಾಗಿದ್ದು, ಇದು ಈ ವಲಯದಲ್ಲಿ ತೆಲುಗು ಭಾಷಿಕರ ಪ್ರಾಬಲ್ಯವನ್ನು ಸೂಚಿಸುತ್ತದೆ. ಎರಡನೇ ತಲೆಮಾರಿನ ಭಾಷಾ ಬಳಕೆದಾರರ ಸಂಖ್ಯೆಯನ್ನು ಅವಲೋಕಿಸಿದಾಗ ಕನ್ನಡ ಭಾಷಿಕರ ಬಳಕೆಯ ವಲಯ ಶೇ.೧೦.೮ರಷ್ಟು, ತೆಲುಗು ಭಾಷಾ ಬಳಕೆಯ ಶೇ.೨೦.೬ರಷ್ಟಿರುವುದು ಕಂಡುಬರುತ್ತದೆ. ಆದರೆ ದ್ವಿಭಾಷಾ ಬಳಕೆ ಶೇ.೫೦.೧ರಷ್ಟಿದ್ದು ಮೊದಲನೇ ತಲೆಮಾರಿನ ದ್ವಿಭಾಷಿಕರಿಗಿಂತ ಶೇ.೧ರಷ್ಟು ಹೆಚ್ಚಾಗಿರುವುದು ಕಂಡುಬರುತ್ತದೆ. ಇದು ಎರಡನೇ ತಲೆಮಾರಿನವರಲ್ಲಿನ ಎರಡೂ ಭಾಷೆಗಳ ಅಗತ್ಯತೆಯನ್ನು ಕುರಿತು ಹೇಳುತ್ತದೆ.

ಮೂರನೆಯ ತಲೆಮಾರಿನ ಹೊತ್ತಿಗೆ ಕನ್ನಡ ಭಾಷಾ ಬಳಕೆ ಶೇ.೨೦.೬ರಷ್ಟಿದೆ. ಎರಡನೆಯ ತಲೆಮಾರಿನವರಿಗಿಂತ ಇದು ಶೇ.೯.೮ರಷ್ಟು ಹೆಚ್ಚಳ ಕಂಡಿದೆ. ಇದೇ ತಲೆಮಾರಿನಲ್ಲಿ ಶೇ.೨೦.೨ರಷ್ಟಿರುವ ತೆಲುಗು ಭಾಷಾ ಬಳಕೆಯಲ್ಲಿ ಶೇ.೦.೪ರಷ್ಟು ಇಳಿಕೆ ಕಂಡಿದೆ. ಇಲ್ಲಿ ಕನ್ನಡ ಭಾಷೆಗೆ ತೆಲುಗು ಭಾಷಿಕರು ಪಲ್ಲಗೊಂಡಿರುವ ಅಂಶ ಕಾಣುತ್ತದೆ. ಒಟ್ಟಾರೆ ದ್ವಿಭಾಷಿಕರ ಪ್ರಮಾಣ ಶೇ.೪೦.೭ರಷ್ಟಿದ್ದು, ದ್ವಿಭಾಷಿಕರಲ್ಲಿ ಇಳಿಕೆಯ ಪ್ರಮಾಣ ಶೇ.೯.೪ರಷ್ಟು ಕಂಡಿದೆ. ಒಟ್ಟಾರೆಯಾಗಿ ಕನ್ನಡ ಭಾಷಿಕರಲ್ಲಿ ಏರಿಕೆಯೂ, ತೆಲುಗು ಭಾಷಿಕರ ಪ್ರಮಾಣ ಇಳಿಮುಖವಾಗಿಯೂ ಇರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಕನ್ನಡ ಭಾಷಾ ಬಳಕೆಯ ಪ್ರಮಾಣವನ್ನು ಗಮನಿಸಿದಾಗ ಒಂದನೆಯ ತಲೆಮಾರಿನವರಲ್ಲಿ ಶೇ.೧೦.೯ರಷ್ಟಿದ್ದ ಕನ್ನಡ ಭಾಷಿಕರ ಸಂಖ್ಯೆ ಎರಡನೆಯ ತಲೆಮಾರಿನ ಹೊತ್ತಿಗೆ ಶೇ.೦.೧ರಷ್ಟು ಇಳಿಕೆ

ಜಿಲ್ಲೆಯ ಭಾಷಿಕ ಸಮುದಾಯದಲ್ಲಿ ಭಾಷಾ ಬಳಕೆಯ ಒಟ್ಟಾರೆ ಪ್ರಮಾಣ(ಶೇಕಡವಾರು) ನಕ್ಷೆ ೯




ಒಟ್ಟು ಕನ್ನಡ ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೧೦



ಒಟ್ಟು ತೆಲುಗು ಭಾಷಾ ಬಳಕೆಯ ಪ್ರಮಾಣ (ಶೇಕಡವಾರು) ನಕ್ಷೆ ೧೧




ಒಟ್ಟು ದ್ವಿಭಾಷಿತೆಯ ಪ್ರಮಾಣ (ಶೇಕಡವಾರು) ನಕ್ಷೆ ೧೨



ಕಂಡಿದೆ. ಆದರೆ ಮೂರನೆಯ ತಲೆಮಾರಿನ ಹೊತ್ತಿಗೆ ಶೇ.೨೦.೬ರಷ್ಟಾಗಿದ್ದು, ಶೇ.೯.೮ರಷ್ಟು ಹೆಚ್ಚಿನ ಏರಿಕೆ ಕನ್ನಡ ಭಾಷಿಕರಲ್ಲಿ ಕಂಡಿದೆ. ಇದು ಕ್ರಮೇಣ ತೆಲುಗು ಭಾಷಿಕರು ಕನ್ನಡ ಭಾಷೆಗೆ ಪಲ್ಲಟವಾಗುತ್ತಾ ನಡೆದಿರುವುದು ಕಂಡುಬರುತ್ತದೆ.

ತೆಲುಗು ಭಾಷಿಕರ ಒಟ್ಟಾರೆ ಭಾಷಾ ಬಳಕೆಯ ಪ್ರಮಾಣವನ್ನು ವಿಶ್ಲೇಷಿಸಿದಾಗ ಮೊದಲನೆ ತಲೆಮಾರಿನಲ್ಲಿ ಶೇ.೩೦ರಷ್ಟಿದ್ದು, ಎರಡನೇ ತಲೆಮಾರಿನ ಹೊತ್ತಿಗೆ ಶೇ.೨೦.೬ರಷ್ಟಾಗಿದೆ. ಅಂದರೆ ಶೇ.೯.೪ರಷ್ಟು ತೆಲುಗು ಭಾಷಿಕರ ಇಳಿಕೆಗೊಂಡಿದೆ. ಮೂರನೇ ತಲೆಮಾರಿಗೆ ಶೇ.೨೦.೨ರಷ್ಟಾಗಿದ್ದು ಎರಡನೇ ತಲೆಮಾರಿಗಿಂತ ಶೇ.೦.೪ರಷ್ಟು ಇಳಿಕೆ ಕಂಡಿದೆ. ಈ ವಿದ್ಯಾಮಾನ ತಲೆಮಾರುಗಳ ಅಂತರದಲ್ಲಿ ತೆಲುಗು ಭಾಷಿಕರ ಸಂಖ್ಯೆ ಇಳಿಮುಖವಾಗುತ್ತಿದ್ದು, ಕನ್ನಡ ಭಾಷೆಗೆ ಪಲ್ಲಟವಾಗುತ್ತಿರುವವರ ಪ್ರಮಾಣದಲ್ಲಿ ಏರಿಕೆ ಕಂಡಿದೆ.

ಒಟ್ಟು ದ್ವಿಭಾಷಿಕರಲ್ಲಿನ ಶೇಕಡವಾರು ಪ್ರಮಾಣಗಳನ್ನು ಗಮನಿಸಿದಾಗ ಮೊದಲನೇ ತಲೆಮಾರಿನಲ್ಲಿ ಶೇ.೫೦.೦ರಷ್ಟು ಅದ್ದಂತಹ ದ್ವಿಭಾಷಿಕರ ಭಾಷಾ ಬಳಕೆಯ ಆವರಣ ಎರಡನೇ ತಲೆಮಾರಿನ ಹೊತ್ತಿಗೆ ಶೇ.೦.೧ರಷ್ಟು ಏರಿಕೆ ಕಂಡಿದೆ. ಆದರೆ ಮೂರನೇ ತಲೆಮಾರಿನ ಹೊತ್ತಿಗೆ ಶೇ.೪೦.೭ರಷ್ಟಾಗಿದ್ದು, ಶೇ.೯.೪ರಷ್ಟು ಇಳಿಮುಖ ಕಂಡಿದೆ. ಬಹುಶಃ ಈ ಇಳಿಕೆಗೆ ತೆಲುಗು ಭಾಷಿಕರಲ್ಲಿ ಅನೇಕರು ಇಂಗ್ಲಿಷ್ ಮಾಧ್ಯಮದಲ್ಲಿ ತಮ್ಮ ಮಕ್ಕಳನ್ನು ಕಲಿಸುತ್ತಿರುವುದೇ ಆಗಿದೆ. ಹಾಗಾಗಿ ತೆಲುಗು ಇಂಗ್ಲಿಷ್ ದ್ವಿಭಾಷಿಕರು ಈ ಕಾರಣದಿಂದಾಗಿ ಕನ್ನಡ ತೆಲುಗು ದ್ವಿಭಾಷಿಕರ ಪ್ರಮಾಣದಲ್ಲಿ ಇಳಿಕೆ ಕಂಡಿದೆ.

## ೮.೪. ಭಾಷಾ ಮನೋಭಾವ ಮತ್ತು ಭಾಷಾ ನಡವಳಿಕೆ

ಭಾಷಿಕ ಮಸುದಾಯವೊಂದರಲ್ಲಿ ಎರಡು ಭಾಷಿಕ ನೆಲೆಗಳಿದ್ದು, ಈ ಎರಡೂ ಭಾಷೆಗಳ ಸಂಪರ್ಕ ಉಂಟಾದಾಗ ದ್ವಿಭಾಷಿಕ ಸಂದರ್ಭ ನಿರ್ಮಾಣವಾಗುತ್ತದೆ. ಈ ಸಂದರ್ಭದಲ್ಲಿ ಅಲ್ಲಿನ ಭಾಷಿಕರು ನಡೆದುಕೊಳ್ಳುವ ರೀತಿ ಮತ್ತು ಅವರ ಮಾನಸಿಕ ಸ್ಥಿತಿ-ಗತಿಗಳು ಭಾಷಾ ಮನೋಭಾವ ಮತ್ತು ಭಾಷಾ ನಡವಳಿಕೆಗಳಿಗೆ ಕಾರಣವಾಗುತ್ತವೆ. ಈ ಎರಡೂ ಪ್ರಕ್ರಿಯೆಗಳು ಮನಃಶಾಸ್ತ್ರಜ್ಞರಿಗೆ ಅಷ್ಟೇ ಅಲ್ಲದೆ ಬಾಷಾವಿಜ್ಞಾನಿಗಳಿಗೂ ಸಹ ಅತ್ಯಂತ ಆಸಕ್ತಿಕರ ವಿಷಯವಾಗಿದೆ. ಎರಡು ಭಾಷೆಗಳು ಸದಾ ಪರಸ್ಪರ ಸಂಪರ್ಕದಲ್ಲಿದ್ದಾಗ ಅಲ್ಲಿನ ಭಾಷಿಕರ ಮನೋಭಾವ ಮತ್ತು ನಡವಳಿಗಳು ಎಷ್ಟೋ ವೇಳೆ ಭಾಷಾ ಪಲ್ಲಟಕ್ಕೆ ಕಾರಣವಾಗಿವೆ.

ಭಾಷಾ ನಡವಳಿಕೆ ಎಂಬುದು ಸಂಸ್ಕೃತಿ ಜನ್ಯ. ಹಾಗಾಗಿ ಇದು ಸುಸಂಸ್ಕೃತ ನಡವಳಿಕೆಯ ನಿಯಮಗಳನ್ನು ಅನುಸರಿಸುತ್ತಿರುತ್ತದೆ. ಭಾಷಾ ನಡವಳಿಕೆ ಎಂಬುದು ಬರಿಯ ಜೈವಿಕ ಸಾಮರ್ಥ್ಯದಿಂದ ಬರುವಂಥದ್ದಲ್ಲ. ಸಂಸ್ಕೃತಿಜನ್ಯವಾದ್ದರಿಂದ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿನವರೆಗೂ

ಸಾಮಾಜಿಕವಾಗಿ ಪ್ರಕ್ರಿಯೆಯಲ್ಲಿ ಹರಿದು ಬರುವಂಥದ್ದು. ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ ಭಾಷೆಯ ನಡವಳಕೆಯು ಸಂಸ್ಕೃತಿಯನ್ನು ರೂಪಿಸುತ್ತಿರುತ್ತದೆ. ಹಾಗೆಯೇ ಈ ಸಾಂಸ್ಕೃತಿಕ ಪ್ರತಿನಿಧಿಸುವಿಕೆಯು ಭಾಷಾ ನಡವಳಿಕೆಯಿಂದ ವಿನ್ಯಾಸಗೊಳ್ಳುತ್ತಿರುತ್ತದೆ(ಹ್ಯಾಮರ್ಸ್, ಜೆ.ಎಫ್. ಮತ್ತು ಬ್ಲಾಂಕ್, ಎಂ.ಹೆಚ್.ಎ, ೨೦೦೦, ೯).

ಭಾಷಾ ಕಾರ್ಯಗಳು ಸಾರ್ವಕಾಲಿಕವಾದುವುಗಳು. ಆದರೆ ಭಾಷಾರೂಪಗಳು ಭಾಷೆ ಮತ್ತು ಸಂಸ್ಕೃತಿಗಳ ನಡುವೆ ಭಿನ್ನತೆಗಳನ್ನುಂಟು ಮಾಡುತ್ತವೆ. ಹಾಗೇ ಮುಂದುವರಿದು ಹೇಳಬೇಕೆಂದರೆ ಭಾಷೆಯೆಂಬುದು ಸಂಸ್ಕೃತಿಯನ್ನು ವ್ಯಾಖ್ಯಾನಿಸಬಲ್ಲ ಒಂದು ಭಿನ್ನಾಂಶ. ಅಷ್ಟೇ ಅಲ್ಲ ಅದು ಭಾಷೆಯು ನಡವಳಿಕೆಯ ಆಶಯಗಳಿಂದ ದೂರವಾಗೇನೂ ನಿಲ್ಲುವುದಿಲ್ಲ. ವ್ಯಕ್ತಿಯಲ್ಲಿ ಭಾಷಾ ಪ್ರಕ್ರಿಯೆ ನಡೆದಲ್ಲಿ ಅದು ಗ್ರಹಿಕೆಯ ಮತ್ತು ಆತ್ಮೀಯ ನೆಲೆಯ ಪ್ರಕ್ರಿಯೆಯಾಗಿರುತ್ತದೆ.

ಒಂದು ಭಾಷೆಯ ಬಗೆಗಿರುವ ದುರಭಿಮಾನ ಭಾಷಿಕರ ಮಧ್ಯೆ ಹಲವು ಸಂಘರ್ಷಗಳಿಗೆ ಕಾರಣವಾಗಬಹುದು. ಒಂದು ಭಾಷೆಯ ಬಗೆಗಿನ ಅಭಿಮಾನ ಭಾಷೆಯನ್ನು ಉಳಿಸಿಕೊಳ್ಳುವ ನೆಲೆಗಳಿಗೆ ಹೆಚ್ಚು ಪಕ್ವವಾಗಬಹುದು. ಇದನ್ನು ಮೀರಿ ಅಂತಸ್ತು, ಅಧಿಕಾರ, ಸ್ಥಾನಮಾನಗಳು, ಪ್ರತಿಷ್ಠೆಯ ಪ್ರಶ್ನೆ ಬಂದಾಗ ಭಾಷೆಯ ಸ್ಥಾನಮಾನಗಳಲ್ಲಿ ವ್ಯತ್ಯಾಸ ಉಂಟಾಗಬಹುದು. ಇವೆಲ್ಲವೂ ಭಾಷೆಯನ್ನು ಬಳಸುವವರ ಬಳಕೆಯ ಸಂದರ್ಭಗಳನ್ನು ಕುರಿತಂತೆ ಗಮನಿಸಿದಾಗ ತಿಳಿದು ಬರುತ್ತದೆ. ದ್ವಿಭಾಷಾ ಸಂದರ್ಭಗಳನ್ನು ಕುರಿತಂತೆ ನಡೆದಿರುವ ಹಲವು ಅಧ್ಯಯನಗಳಲ್ಲಿ ಬಹುಸಂಖ್ಯಾತರ, ಅಧಿಕಾರಶಾಹಿ ಭಾಷೆಯ ಬಗೆಗಿನ ಮನೋಭಾವದಿಂದಾಗಿ ಸಾಮಾಜಿಕ ಚಲನೆಯಲ್ಲಿ ಮೆಲ್ಮುಖವಾಗಿ ಚಲಿಸಲು ಭಾಷಿಕರಲ್ಲಿ ಪಲ್ಲಟಗಳು ಎಂಬುದಾಗಿರುವುದನ್ನು ಕಾಣಬಹುದಾಗಿದೆ. ಆದ್ದರಿಂದ ಯಾವುದೇ ಒಂದು ಭಾಷೆಯ ಅಳಿವು ಉಳಿವಿನಲ್ಲಿ ಭಾಷಿಕರ ಮನೋಭಾವ ಭಾಷಾ ಧೋರಣೆಗಳು ಬಹುಮುಖ್ಯವಾಗಿರುತ್ತವೆ (ಭಾಗ್ಯಲಕ್ಷ್ಮಿ.ಎಂ., ೨೦೦೨, ೧೯೯).

ಕಳೆದ ಶತಮಾನದ ೭೦-೮೦ರ ದಶಕಗಳಲ್ಲಿ ಕೋಲಾರದಲ್ಲಿ ಕನ್ನಡ-ತೆಲುಗು ಭಾಷಿಕರ ಮಧ್ಯ ನಿರಂತರ ಘರ್ಷಣೆಗಳಾಗುತ್ತಿದ್ದವು. ಎರಡೂ ಕಡೆಯ ಭಾಷಿಕರಿಗೆ ತಮ್ಮ ಭಾಷೆಯ ಮೇಲಿರುವ ಅಭಿಮಾನವೇ ಈ ರೀತಿಯ ಘರ್ಷಣೆಗೆ ಕಾರಣವಾಗುತ್ತಿತ್ತು. ಇದಕ್ಕೆ ಅವಕಾಶವನ್ನು ಒಂದಾಗಿಸಿ ಕೊಡುತ್ತಿದ್ದುದು ಕನ್ನಡ ಅಥವಾ ತೆಲುಗು ಸಿನಿಮಾ ಬಿಡುಗಡೆಯ ಸಂದರ್ಭಗಳು ಈ ಅಭಿಮಾನ ತಾವಿರುವ ಸ್ಥಳದಲ್ಲಿ ತಮ್ಮ ಭಾಷೆಯನ್ನು ಉಳಿಸಿಕೊಳ್ಳುವ ಒಂದು ತಂತ್ರವಾಗಿ ಕಂಡುಬರುತ್ತದೆ. ಈಚಿನ ದಿನಗಳಲ್ಲಿ ಜಿಲ್ಲೆಯ ತೆಲುಗು ಭಾಷಿಕರು ಕನ್ನಡದ ಪಲ್ಲಟವಾಗಿರುವುದು ಕಂಡುಬಂದಿದೆ. ಇದಕ್ಕೆ ಕಾರಣ ಕನ್ನಡ ಭಾಷೆಗೆ ಕರ್ನಾಟಕದಸಂದರ್ಭದಲ್ಲಿ ಸಲ್ಲುತ್ತಿರುವ ಸ್ಥಾನಮಾನ. ಇಲ್ಲಿ ನೆಲ-ಜಲದಲ್ಲಿ ಬದುಕು

ಮಾಡಬೇಕಾದ ಸಂದರ್ಭದಲ್ಲಿ ಈ ರೀತಿಯ ವಿವಾದಗಳು ಜರುಗುತ್ತಿವೆ. ಇತ್ತೀಚೆಗೆ ಜರುಗಿದ ಸುವರ್ಣ ಕರ್ನಾಟಕದ ಸಂಭ್ರಮದ ಆಚರಣೆಯನ್ನು ಗಡಿಭಾಗದ ಹಳ್ಳಿಗಳಲ್ಲೂ ಅತ್ಯಂತ ಶ್ರದ್ಧೆಯಿಂದ ಹಳ್ಳಿಗರು ಆಚರಿಸಿದ್ದು ಅವರು ಇಲ್ಲಿನ ಭಾಷೆಗೆ ನಿಷ್ಠೆಯಾಗಿರುವುದನ್ನು ತೋರಿಸಿಕೊಡುತ್ತದೆ.

ಜಿಲ್ಲೆಯ ಬಹುಸಂಖ್ಯಾತ ತೆಲುಗರಲ್ಲಿ ಭಾಷೆಯು ಐಕ್ಯತೆ ಅಥವಾ ಒಗ್ಗಟ್ಟು ಪ್ರದರ್ಶಿಸಲು ಒಂದು ಸಂಕೇತವಾಗಿ ಕಂಡುಬಂದಿದೆ. "ವಾಡು ಮನೋಡ್ರಾ" (ಅವನು ನಮ್ಮವನೇ) ಎಂಬುದರ ಮೂಲಕ ತೆಲುಗು ಸಮುದಾಯದ ಒಗ್ಗಟ್ಟನ್ನು ಪ್ರದರ್ಶಿಸುವ ಮನೋಭಾವ ಇದೆ. ಇದು ಪ್ರಮುಖವಾಗಿ ರೆಡ್ಡಿ ಒಕ್ಕಲಿಗರು, ಬಲಜಿಗರು ಹಾಗೂ ವೈಶ್ಯ ಸಮುದಾಯದಲ್ಲಿ ಕಂಡುಬರುವ ನಡವಳಿಕೆ ಆಗಿದೆ. ಇಲ್ಲಿನ ಭಾಷಿಕರನ್ನು ಕನ್ನಡ, ತೆಲುಗು, ತಮಿಳು ಭಾಷೆಗಳು ಹೇಗೆ ಎಂದು ಕೇಳಿದರೆ ಅವರು ಹೇಳುವ ಉತ್ತರ "ಕನ್ನಡ ಕಸ್ತೂರಿ, ತೆಲುಗು ತೇಟ (ಸರೋವರದ ನೀರಿನಂತೆ ತಿಳಿಯಾದುದು), ಅರವ (ತಮಿಳು) ಅಧ್ವಾನ್ನ" ಹಾಗಾಗಿ, ಕನ್ನಡಿಗರಿಗೂ ತೆಲುಗರಿಗೂ ಸಾಮಿಪ್ಯ ಜಾಸ್ತಿ. ರಾಷ್ಟ್ರೀಯ ಹೆದ್ದಾರಿ ೪ರಲ್ಲಿರುವ ಮುಳಬಾಗಿಲಿನ ಗಡಿಯಲ್ಲಿ ಆಂಧ್ರದ ತಪಾಸಣಾ ಕೇಂದ್ರವೊಂದಿದೆ(ಚೆಕ್‌ಪೋಸ್ಟ್). ಅಲ್ಲಿನ ಅಧಿಕಾರಿಗಳು ಕರ್ನಾಟಕ ಅದರಲ್ಲೂ ಕೋಲಾರ ಎಂದಾಕ್ಷಣ ಹೆಚ್ಚಿನ ತಪಾಸಣೆಗೆ ಒಳಪಡಿಸದೆ "ಮನೋಳ್ಳೆ ಇಡಂಡ್ರಾ" (ನಮ್ಮವರೇ ಬಿಟ್ಟುಬಿಡಿ) ಎನ್ನುತ್ತಾರೆ. ಅಷ್ಟರಮಟ್ಟಿಗೆ ಕರ್ನಾಟಕ ಕನ್ನಡಿಗರ ಬಗ್ಗೆ ಅವರಿಗೆ ನಂಬಿಕೆ. ಜನಗಣತಿಗೆ ಹೋಗುವ ಅಧಿಕಾರಿಗಳ ಬಳಿ ಬಹಳಷ್ಟು ತೆಲುಗು ಭಾಷಿಕರು ತಮ್ಮ ಮನೆಯ ಭಾಷೆಯ ತೆಲುಗು ಎಂದು ಹೇಳಿಕೊಳ್ಳದೆ ಕನ್ನಡವೆಂದೇ ಹೇಳುತ್ತಾರೆ. ತೆಲುಗೆಂದು ಹೇಳಿದರೆ ಎಲ್ಲಿ ತಮಗೆ ಸರ್ಕಾರದಿಂದ ದಕ್ಕಬಹುದಾದ ಸವಲತ್ತುಗಳು ದೊರೆಯುವುದಿಲ್ಲವೋ ಎಂಬ ಶಂಕೆಯಿಂದ ಅವರು ಹೀಗೆ ಮಾಡುತ್ತಾರೆ. ಹೀಗೆ ಹೇಳುವವರು ಬಹುತೇಕ ಕೆಳವರ್ಗ ಹಾಗೂ ಕೆಳಮಧ್ಯಮ ವರ್ಗದವರೇ ಆಗಿದ್ದಾರೆ. ಕೋಲಾರದ ಅಮ್ಮವಾರಿಪೇಟ (ಇದು ತೆಲುಗು ಹೆಸರು) ಚಿಂತಾಮಣಿ ಸಂತೆಮಾಳ, ಶ್ರೀನಿವಾಸಪುರ, ರೋಜರ್‌ಪಲ್ಲಿ ಮುಳಬಾಗಿಲು ಇಲ್ಲೆಲ್ಲಾ ವ್ಯಾಪಾರಿಗಳು ತಮ್ಮ ಬಹುತೇಕ ವ್ಯವಹಾರವನ್ನು ತೆಲುಗಿನಲ್ಲೇ ನಡೆಸುತ್ತಾರೆ. ಕನ್ನಡ ಭಾಷಿಕರನ್ನು ಕಂಡರೆ ಅತ್ಯಂತ ಗೌರವಾಧಾರಗಳಿಂದ ನಡೆಸಿಕೊಳ್ಳುತ್ತಾರೆ. ತೆಲುಗು ಭಾಷಿಕರಾದರೆ ಆತ್ಮೀಯರಂತೆ ಸಲುಗೆಯಿಂದ ನಡೆದುಕೊಳ್ಳುತ್ತಾರೆ. ವ್ಯಾಪಾರಿಗಳನ್ನು ತೆಲುಗಿನಲ್ಲಿ ಮಾತನಾಡಿಸಿದರೆ ಜಿಲ್ಲೆಯಲ್ಲಿ ರಿಯಾಯಿತಿ ದೊರೆಯುವ ಸಂಭವಗಳೂ ಉಂಟು. ಹಳ್ಳಿಗಳಲ್ಲಿ ಕನ್ನಡ ಮಾತನಾಡುವವರನ್ನು ಕಂಡರೆ ಅಲ್ಲಿನ ತೆಲುಗು ಭಾಷಿಕರಿಗೆ ಬಹಳ ಗೌರವಾದರಗಳು. ಇಲ್ಲಿನ ತೆಲುಗು ಭಾಷಿಕರು ತಮ್ಮನ್ನು ಅಲ್ಪರೆಂದೂ ಕನ್ನಡ ಭಾಷಿಕರನ್ನು ಶ್ರೇಷ್ಠರೆಂದೂ ಪರಿಗಣಿಸುವ ರೀತಿ ಬಹಳ ಕುತೂಹಲಕಾರಿಯಾದುದು. ಪಟ್ಟಣದಲ್ಲಿ ಇಂಗ್ಲಿಶ್ ಮಾತನಾಡುವವರಿಗೆ ಸಲ್ಲಿಸುವಷ್ಟೇ ಗೌರವವನ್ನು ಹಳ್ಳಿಯಲ್ಲಿ ಕನ್ನಡ ಮಾತನಾಡುವವರಿಗೂ ಸಲ್ಲುತ್ತದೆಂಬುದು ಅಕ್ಷರಶಃ ಸತ್ಯ.

ಬಹುತೇಕ ರಾಜಕಾರಣಿಗಳು ತಮ್ಮ ಚುನಾವಣಾ ಸಂದರ್ಭಗಳಲ್ಲಿ ಮತದಾರರನ್ನು ಸೆಳೆಯಲು ತೆಲುಗಿನಲ್ಲಿ ಭಾಷಣ ಮಾಡುವುದು, ಹಾಸ್ಯ ಚಟಾಕಿ ಹಾರಿಸುವುದರ ಮೂಲಕ ಪ್ರಚಾರ ಪಡೆಯುವ ತಂತ್ರವನ್ನು ಅನುಸರಿಸುತ್ತಾರೆ. ಜಿಲ್ಲೆಯ ನಾಲ್ಕೈದು ಪ್ರಮುಖ ರಾಜಕಾರಣಿಗಳು ಇಂದು ಮಾಡುತ್ತಿರುವುದು ಅದನ್ನೇ. ತೆಲುಗು ನುಡಿಗಟ್ಟು, ನಾಣ್ನುಡಿ, ಗಾದೆಗಳ ಮೂಲಕ ಜನಾಕರ್ಷಕ ಭಾಷಣಗಳನ್ನು ಮಾಡಿ ಜನರ ಮನಸ್ಸನ್ನು ಮೋಡಿ ಮಾಡುವ ಕಾರ್ಯ ಕಂಡುಬಂದಿದೆ. ಮೇಲ್ವರ್ಗದ ತೆಲುಗು ಭಾಷಿಕರು ಸರ್ಕಾರಿ ಕಛೇರಿಗಳಿಗೆ, ಬ್ಯಾಂಕು, ಶಾಲಾ-ಕಾಲೇಜುಗಳಿಗೆ ಭೇಟಿ ನೀಡಿದಾಗ ಕನ್ನಡಕ್ಕೆ ಪಲ್ಲಟವಾಗುವುದು ಕಂಡುಬಂದಿದೆ. ಬಸ್ಸುಗಳ ಕಂಡಕ್ಟರುಗಳಂತೂ ಸಾಂದರ್ಭಿಕವಾಗಿ ಕನ್ನಡ-ತೆಲುಗನ್ನು ಬಳಸುತ್ತಾರೆ. ಸರ್ವೇಸಾಮಾನ್ಯವಾಗಿ ಬಳಸುವ ಭಾಷಾ ಸಂದರ್ಭ ಹೀಗಿದೆ. ಬೆಂಗಳೂರಿನಿಂದ ಚಿತ್ತೂರಿಗೋ ತಿರುಪತಿಗೋ ಹೋಗುವ ಬಸ್ಸಿನ ಕಂಡಕ್ಟರು ಪ್ರಯಾಣಿಕರನ್ನು ಬೆಂಗಳೂರಿನಲ್ಲಿ ಹತ್ತಿ ಹತ್ತಿ ಎಂದೂ ಕೋಲಾರಕ್ಕೆ ಬಂದ ಕೂಡಲೇ ಎಕ್ಕ್ರ, ಎಕ್ಕ್ರ ಎಂದೂ ಮುಳಬಾಗಿಲಿಗೆ ಹೋದ ಕೂಡಲೇ ಎಕ್ಕಂಡ, ಎಕ್ಕಂಡ ಎಂದೂ ಸಂಭೋದಿಸುತ್ತಾನೆ. ಇಲ್ಲಿ ಅವನ ಭಾಷೆ ಬಗೆಗಿನ ಜಾಣ್ಮೆ, ಭಾಷೆಯನ್ನು ಜೀವನ ಸಂದರ್ಭಕ್ಕೆ ಹೇಗೆ ಬಳಸಬೇಕೆಂಬ ಕಲಾತ್ಮಕತೆ ಕಂಡುಬರುತ್ತದೆ. ಗಡಿಭಾಗದ ತೆಲುಗು ಭಾಷಿಕರು ತಾವು ಮಾತನಾಡುವ ತೆಲುಗಿನ ಬಗ್ಗೆ ಕೀಳರಿಮೆ ಇಟ್ಟುಕೊಂಡಿದ್ದಾರೆ. ತಾವಾಡುವ ತೆಲುಗು ಶಿಷ್ಟ ಅಲ್ಲದ ತೆಲುಗೆಂದು ಅವರ ಕೊರಗು. ಇತ್ತ ಕನ್ನಡವೂ ಸರಿಯಾಗಿ ತಿಳಿಯದೇ ಅತ್ತ ತೆಲುಗೂ ಶಿಷ್ಟವಾಗಿಲ್ಲವೆಂಬುದು ಈ ಭಾಗದ ಜನರಿಗೆ ಒಂದು ತೊಡಕಾಗಿ ಕಂಡಿದೆ. ಆರ್ಥಿಕವಾಗಿ ಕೆಳಮುಖದಲ್ಲಿರುವ ತೆಲುಗು ಬಾಷಿಕರು ತಮ್ಮ ಮಕ್ಕಳನ್ನು ಕನ್ನಡದ ಶಾಲೆಗಳಿಗೆ ಸೇರಿಸಿದರೆ ಆರ್ಥಿಕವಾಗಿ ಸಬಲತೆ ಪಡೆದವರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗೆ ಸೇರಿಸುವ ಮನೋಭಾವ ಬೆಳೆಸಿಕೊಂಡಿದ್ದಾರೆ. ಅವರ ನಡವಳಿಕೆ ಸಾಮಾಜಿಕವಾಗಿ ತಮ್ಮ ಅಂತಸ್ತನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವಾಗಿದೆ. ಶೇಕಡಾ ೩೨ ರಷ್ಟು ಕನ್ನಡಿಗರಿರುವ ಕೋಲಾರ ಜಿಲ್ಲೆಯ ಕನ್ನಡಿಗರು ಹೆಚ್ಚಿನ ಸಂಖ್ಯೆಯಲ್ಲಿ ತೆಲುಗನ್ನು ಮೌಖಿಕ ನೆಲೆಯಲ್ಲಿ ಹಾಗೂ ಗ್ರಹಿಕೆಯ ನೆಲೆಯಲ್ಲಿ ಬಲ್ಲವರಾಗಿದ್ದಾರೆ. ಹೀಗಾಗಿ ಕನ್ನಡಕ್ಕಿಂತ ತೆಲುಗು ಸಿನಿಮಾಗಳನ್ನು ಹೆಚ್ಚಾಗಿ ನೋಡುತ್ತಾರೆ. ಮಾಧ್ಯಮಗಳಲ್ಲಿ ತೆಲುಗಿನ ಬಳಕೆ ಕುರಿತ ಕೋಷ್ಟಕವನ್ನು ನೋಡಿದಾಗ ಈ ಅಂಶ ವೇದ್ಯವಾಗುತ್ತದೆ. ಜಿಲ್ಲೆಯಲ್ಲಿ ವರ್ಷವೊಂದರಲ್ಲಿ ಶೇಕಡ ೫೦%ರಿಂದ ಶೇ. ೬೦%ರವರೆಗೆ ತೆಲುಗು ಸಿನಿಮಾಗಳು ಪ್ರದರ್ಶನವಾಗುತ್ತಿರುವುದು ಕನ್ನಡಿಗರ ಈ ಬಗೆಯ ಮನೋಭಾವದಿಂದಲೇ

ಭಾಷೆಯೆಂಬುದು ಕೇವಲ ಒಂದು ವ್ಯವಹಾರವಾಗಿ ಉಳಿಯದೇ ಭಾವನಾತ್ಮಕ ನೆಲೆಯಲ್ಲಿ ಹೆಚ್ಚಿನ ಸಂಬಂಧಗಳನ್ನು ಬೆಸೆಯುವ ಒಂದು ಸೇತುವೆಯಾಗಿದೆ. ಹಾಗಾಗಿ ಭಾಷಾ ವ್ಯವಹಾರ ಒಂದು ಮಾನಸಿಕ ಪ್ರಕ್ರಿಯೆ. ಸಮಾಜದಲ್ಲಿರುವ ಸಾಂಸ್ಕೃತಿಕ ಅಂಶಗಳು ದೈನಂದಿನ ಭಾಷಾ ಬಳಕೆಯನ್ನು ನಿಯಂತ್ರಣಕ್ಕೊಳಪಡಿಸುತ್ತಿರುತ್ತವೆ. ದ್ವಿಭಾಷಿಕರಾದವರು ಭಾಷೆಯನ್ನು ತಮ್ಮ ಅಗತ್ಯಗಳಿಗೆ ತಕ್ಕಂತೆ

ಬಳಸಿಕೊಳ್ಳುತ್ತಿರುವುದಿಲ್ಲ. ನಿಜ ಜೀವನದಲ್ಲಿ ಭಾಷೆಯನ್ನು ಹೀಗೇ ಬಳಸಬೇಕೆಂಬ ಯಾವುದೇ ಲಿಖಿತ ನಿಯಮಗಳಿರುವುದಿಲ್ಲ. ಸಮುದಾಯವೊಂದರಲ್ಲಿ ಬಳಕೆಯಾಗುವ ಭಾಷೆ ಅತ್ಯಂತ ಸಂಕೀರ್ಣವಾಗಿರುತ್ತದೆ. ಅಷ್ಟೇ ಅಲ್ಲದೇ ಅದು ಭಾಷಾ ವೈವಿಧ್ಯತೆಗೂ ಭಾಷಾ ಸಂಗಮಕ್ಕೂ ಕಾರಣವಾಗಿರುತ್ತದೆ.

## ೮.೫. ಭಾಷಾ ಸಂಪತ್ತು ಮತ್ತು ಪಲ್ಲಟ

ಭಾಷಿಕನೊಬ್ಬ ಮಾತಿನ ಬಗೆಗಳಾದ ಭಾಷೆ, ಉಪಭಾಷೆ, ಸಾಮಾಜಿಕ ಭಾಷೆಗಳು, ಶೈಲಿಗಳು, ರಿಜಿಸ್ಟರುಗಳಲ್ಲಿ ಹತೋಟಿ ಹೊಂದಿರುತ್ತಾರೆ. ಸಾಮಾನ್ಯವಾಗಿ ಇದು ಶಿಕ್ಷಣದಿಂದ ಬಂದಿದ್ದು, ಸಂಪತ್ತು ಇಲ್ಲಿ ವಿಸ್ತರಿಸುತ್ತದೆ. ಇದಕ್ಕೆ ಕಾರಣ ಭಾಷಿಕನ ಅರಿಯುವ ಸಾಮರ್ಥ್ಯ ಮತ್ತು ಬಳಕೆಯ ಸಾಧ್ಯತೆಗಳಲ್ಲಿನ ಹೆಚ್ಚಳ. ಇದಕ್ಕೆ ವಿರುದ್ಧವಾಗಿ ಅಶಿಕ್ಷಿತ ಅಥವಾ ನಿರಕ್ಷರಿಯು ಈ ರೀತಿಯ ಭಾಷಾ ಸಂಪತ್ತನ್ನು ಮಾತಿನ ಬಗೆಗಳಲ್ಲಿ ವ್ಯಕ್ತಪಡಿಸುವುದರಲ್ಲಿ ಅಜ್ಞಾನವಿರುತ್ತದೆ. ಕೆಲವೊಮ್ಮೆ ಆ ವ್ಯಕ್ತಿಗೆ ಭಾಷಾ ಸಂಪತ್ತು ಇದ್ದರೂ ಅವನ್ನು ಬಳಸಿಕೊಳ್ಳುವಲ್ಲಿ ವಿಫಲನಾಗುತ್ತಾನೆ. ಕನ್ನಡ ತೆಲುಗು ಗೊತ್ತಿರುವ ಭಾಷಿಕನೊಬ್ಬ ಹೈದರಾಬಾದಿಗೆ ಹೋದಲ್ಲಿ ಅವನಿಗೆ ತೆಲುಗು ಬಳಸುವ ಸಂದರ್ಭ ಮಾತ್ರ ಎದುರಾಗುತ್ತದೆ. ಆದರೆ ಕನ್ನಡ ಭಾಷೆ ಬಂದರೂ ಅದನ್ನು ಬಳಸುವ ಸಂದರ್ಭಗಳು ಅಲ್ಲಿರುವುದು ತೀರಾ ವಿರಳ.

ಭಾಷಿಕನಾಗಲೀ, ಬರಹಗಾರನಾಗಲೀ ಒಂದು ಭಾಷೆ ಅಥವಾ ಭಾಷಾ ಬಗೆಯಿಂದ ಮತ್ತೊಂದು ಭಾಷೆಯಲ್ಲಿ ಮಾತನಾಡಲು ಉದ್ಯುಕ್ತನಾದಾಗ ಆತ ಭಾಷೆಯನ್ನು ಪಲ್ಲಟಗೊಳಿಸುತ್ತಾನೆ. ದ್ವಿಭಾಷಿಕ ಸಂದರ್ಭಗಳಲ್ಲಿ ಎರಡು ಭಾಷೆಗಳಲ್ಲಿ ಸಮರ್ಥನಾಗಿರುವ ದ್ವಿಭಾಷಿಕನು ಮಾತನಾಡುವಾಗ ತಕ್ಷಣವೇ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಜಿಗಿಯುತ್ತಾನೆ. ಇದೊಂದು ಸಹಜ ಪ್ರಕ್ರಿಯೆಯಾಗಿ ಕಾಣುತ್ತದೆ. ಭಾಷಾಪಲ್ಲಟವೆಂಬ ಪದವನ್ನು ಎರಡು ಅಥವಾ ಅದಕ್ಕಿಂತ ಹೆಚ್ಚು ಭಾಷೆ ಅಥವಾ ಭಾಷಾ ಪ್ರಭೇದಗಳನ್ನು ಪರ್ಯಾಯವಾಗಿ ಕೆಲವು ನಿರ್ದಿಷ್ಟ ಸಾಮಾಜಿಕ ಸಂದರ್ಭಗಳಲ್ಲಿ ನಿರ್ದಿಷ್ಟ ನಿಯೋಗಗಳಿಗಾಗಿ ಬಳಸುವುದು ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ(ಬ್ಲೂಮ್ ಮತ್ತು ಗುಂಪರ್ಜ್ ೧೯೭೧). ಭಾಷಾ ಪಲ್ಲಟದ ಲಕ್ಷಣವೆಂದರೆ ಒಂದು ಸಮುದಾಯದಲ್ಲಿನ ಭಾಷಿಕರು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಪಲ್ಲಟಗೊಂಡಾಗ ಒಂದು ಸಾಮಾಜಿಕ ಸಂದರ್ಭದಿಂದ ಇನ್ನೊಂದು ಸಾಮಾಜಿಕ ಸಂದರ್ಭಕ್ಕೆ ಪಲ್ಲಟಗೊಂಡಿರುತ್ತಾರೆ. ಭಾಷಾ ಪಲ್ಲಟವು ಯಾವುದೇ ದ್ವಿಭಾಷಿಕ ಅಥವಾ ಬಹುಭಾಷಿಕ ಸಮುದಾಯದಲ್ಲಿ ವಿವಿಧ ಗುಂಪುಗಳ ನಡುವೆ ಅಥವಾ ವ್ಯಕ್ತಿ ವ್ಯಕ್ತಿಗಳ ನಡುವಣ ನಡೆಯುವಂಥದ್ದು. ಭಾಷಾ ಪಲ್ಲಟವು ಬಹುಮುಖಿಯಾಗಿದ್ದು, ಈ ಬಹುಮುಖತೆಗೆ ಸಾಮಾಜಿಕ ಭಿನ್ನಾಂಶಗಳು, ಉದಾರೀಕರಣ, ಜಾಗತೀಕರಣ, ಖಾಸಗೀಕರಣಗಳು, ಸಾಫ್ಟ್‌ವೇರ ತಂತ್ರಜ್ಞಾನದಿಂದಾಗಿ ರೂಪುಗೊಂಡ ಆಧುನಿಕ ಜೀವನ ಶೈಲಿಗೆ ಪಕ್ಕಾಗಿ ಅದಕ್ಕೆ ತಕ್ಕಂತಹ ಜೀವನ ವಿಧಾನಗಳನ್ನು ಅಳವಡಿಸಿಕೊಳ್ಳುವಾಗ ಭಾಷಿಕರಲ್ಲಿ ಭಾಷಾಪಲ್ಲಟಗಳು ಸಂಭವಿಸುತ್ತಿವೆ.

ಭಾರತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು, ಸಾಫ್ಟ್‌ವೇರ್ ಕಂಪನಿಗಳು ಇಂಗ್ಲಿಷ್ ಭಾಷೆಗೆ ಹೆಚ್ಚಿನ ಒತ್ತನ್ನು ನೀಡಿರುವುದರಿಂದ ಬಹಳಷ್ಟು ಯುವಜನಾಂಗ ತಮ್ಮ ಆಡುಭಾಷೆಯಿಂದ ಇಂಗ್ಲಿಷ್‌ಗಳಿಗೆ ಪಲ್ಲಟಗೊಳ್ಳುತ್ತಿರುವ ಸಂದರ್ಭಗಳು ಪ್ರಾದೇಶಿಕ ಭಾಷೆಗಳ ಭಾಷಾ ನಾಶಕ್ಕೆ ಕಾರಣವಾಗುತ್ತಿವೆ. ಇಂಗ್ಲಿಷ್ ಬಲ್ಲವರಿಗೆ ಆರ್ಥಿಕ ಸವಲತ್ತುಗಳು, ಸಾಮಾಜಿಕ ಸ್ಥಾನಮಾನ ದೊರಕುತ್ತಿರುವುದು ಪ್ರಾದೇಶಿಕ ಭಾಷೆಗಳಿಗ ತೊಡಕಾಗಿ ಕಾಡುತ್ತಿದೆ. ಕರ್ನಾಟಕದಲ್ಲಿ ಇಂಗ್ಲಿಷ್‌ನ್ನು ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯವಾಗಿ ಕಲಿಸಲು ಕರ್ನಾಟಕ ಸಾರ್ಕರ ನಿರ್ಧಾರ ಮಾಡಿರುವುದು ಜನರ ಬದುಕು ಆಶೋತ್ತರಗಳಿಗೆ ಸ್ಪಂದಿಸಬಹುದಾದರೂ ಅದರಿಂದ ಕನ್ನಡ ಭಾಷೆಯ ಮೇಲೆ ಹಚ್ಚಿನ ಪ್ರಭಾವ ಬೀರುವ ಸಾಧ್ಯತೆ ಇದೆ. ಶಿಕ್ಷಣದ ಸಂದರ್ಭಗಳಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿಸಬಹುದಾದರೂ ಬಹುತೇಕ ವಿದ್ಯಾರ್ಥಿಗಳ ಸಾಕ್ಷರತೆಯ ನೆಲೆಗಳಲ್ಲಾಗಲೀ, ಮೌಖಿಕ ನೆಲೆಗಳಲ್ಲಾಗಲಿ ಅವರ ಭಾಷಾ ಸಂಪತ್ತು ಉತ್ತಮವಾಗಿರುವುದಿಲ್ಲ. ಆದ್ದರಿಂದ ಇಂತಹವರು ಅರೆಕನ್ನಡಿಗರಾಗಿ ಮುಂದೆ ಇಂಗ್ಲಿಷ್‌ಗೆ ಪೂರ್ತಿಯಾಗಿ ಪಲ್ಲಟವಾಗುವ ಅಪಾಯಗಳು ಜಾಸ್ತಿಯಾಗಿವೆ.

ಬಹುಭಾಷಿಕ ಸಮುದಾಯಗಳಲ್ಲಿ ಭಾಷಾ ಸಂದರ್ಭಗಳು ಸದಾಕಾಲ ಸ್ಥಿರವಾಗಿರುವುದಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಆ ಸಮುದಾಯಗಳಲ್ಲಿ ಸದಾ ಭಾಷಾ ಪಲ್ಲಟಗಳು ನಡೆಯುತ್ತಲೇ ಇರುತ್ತವೆ. ವ್ಯಕ್ತಿಯಲ್ಲಾಗಲೀ ಅಥವಾ ಭಾಷಿಕ ಸಮುದಾಯಗಳಲ್ಲಾಗಲೀ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಪಲ್ಲಟಗಳು ಏತಕ್ಕಾಗಿ ನಡೆಯುತ್ತವೆ ಪಲ್ಲಟದ ಕಾರಣಗಳು, ಅದರ ಪ್ರಮಾಣವಾಗಲಿ, ಪರಿಣಾಮಗಳಾಗಲೀ ಯಾವ ರೀತಿಯದು ಪಲ್ಲಟದ ಕಾರಣಕ್ಕಾಗಿ ಪ್ರಬಲ ಭಾಷೆ ಉಳಿದು ದುರ್ಬಲ ಭಾಷಾ ನಾಶ ಸಂಭವಿಸುತ್ತದೆಯೇ ಇತ್ಯಾದಿ ಪ್ರಶ್ನೆಗಳೇಳುತ್ತವೆ. ಸಾಮಾನ್ಯವಾಗಿ ಭಾಷಾ ಪಲ್ಲಟಕ್ಕೆ ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಮಾಜಿಕ ಕಾರಣಗಳು ಕಾರಣವಾಗಿರುವುದನ್ನು ಭಾರತ ಹಾಗೂ ಪಾಶ್ಚಾತ್ಯ ಸಂದರ್ಭಗಳಲ್ಲಿ ನಡೆದ ಅಧ್ಯಯನಗಳು ಸಾಬೀತುಪಡಿಸಿವೆ.

೫

# ಉಪಸಂಹಾರ

ಭಾಷೆ ಎಂಬುದು ಭೂ ಚರಿತ್ರೆಯಲ್ಲಿ ವಿಕಾಸಗೊಂಡ ಮಾನವನ ಭಾವನೆಗಳ ಅಭಿವ್ಯಕ್ತಿ. ಅದೊಂದು ವ್ಯಕ್ತಿಯ ವೈಯಕ್ತಿಕ ಅಭಿವ್ಯಕ್ತಿಯ ಸಂವಹನ ಕ್ರಿಯೆ. ಮಾನವನ ಸಾಮಾಜಿಕ ಜೀವನದಲ್ಲಿ ನಾನಾ ಆವರಣಗಳಲ್ಲಿ ಈ ಭಾಷೆ ಎಂಬುದು ನಿರಂತರವಾಗಿ ಅನಾವರಣಗೊಳ್ಳುತ್ತಲೇ ಇರುತ್ತದೆ. ಸಾಮಾಜಿಕ ಭಾಷಾ ವಿಜ್ಞಾನಿಗಳು ಭಾಷೆಗಿರುವ ನಾನಾ ಕಾರ್ಯಗಳನ್ನು ಅದು ಪ್ರಕಟಗೊಳ್ಳುವ ಮಾದರಿಗಳನ್ನು ಅಧ್ಯಯನ ಮಾಡುತ್ತ ಬಂದಿದ್ದಾರೆ. ದ್ವಿಭಾಷಿಕತೆ ಹಾಗೂ ಬಹುಭಾಷಿಕತೆಗಳು ಭಾಷೆಯ ಸಾಮಾಜಿಕ ಮತ್ತು ಸಾಮೂಹಿಕ ಅಭಿವ್ಯಕ್ತಿಯ ಮುಖಗಳಾಗಿವೆ. ಹೀಗಾಗಿ ದ್ವಿಭಾಷಿಕತೆಯಾಗಲಿ ಅಥವಾ ಭಾಷಾ ಸಂಪರ್ಕಕ್ಕೆ ಸಂಬಂಧಿಸಿದ ಅಧ್ಯಯನಗಳಾಗಲೀ ಸಾಮಾಜಿಕ ಭಾಷಾವಿಜ್ಞಾನದ ಪ್ರಮುಖ ಅಂಗಗಳೇ ಆಗಿವೆ. ಭಾರತದಲ್ಲಿ ಅದರಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ದಕ್ಷಿಣ ಭಾರತದಲ್ಲಿ ಹಲವು ರೀತಿಯ ಅಧ್ಯಯನಗಳು ನಡೆದಿವೆಯಾದರೂ ಕನ್ನಡದ ಸಂದರ್ಭದಲ್ಲಿ ಇದನ್ನು ಕುರಿತಂತೆ ನಡೆದಿರುವ ಅಧ್ಯಯನಗಳು ತೀರ ಕಡಿಮೆ. ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳನ್ನು ಕುರಿತು ಅಧ್ಯಯನವನ್ನು ಕೈಗೊಂಡಾಗ ಮೊದಮೊದಲಿಗೆ ಕೆಲವು ಸಮಸ್ಯೆಗಳು ಎದುರಾದವು. ಕಾರಣ ಕನ್ನಡದಲ್ಲಿ ಸಾಮಾಜಿಕ ಭಾಷಾವಿಜ್ಞಾನದ ನೆಲೆಯಲ್ಲಿ ಸಂಶೋಧನೆ ಕೈಗೊಳ್ಳಲು ಬೇಕಾದಂಥ ಯಾವುದೇ ರೀತಿಯ ಸಿದ್ಧ ಅಧ್ಯಯನ ಮಾದರಿಗಳು, ಸಮಾಜೋ ಭಾಷಿಕ ಅಧ್ಯಯನದ ವಿಧಿವಿಧಾನಗಳು, ಸೈದ್ಧಾಂತಿಕ ಚೌಕಟ್ಟುಗಳು ಸಾಕಷ್ಟು ಇಲ್ಲದಿದ್ದುದು. ಹೀಗಾಗಿ ಪಾಶ್ಚಾತ್ಯ ಸಂದರ್ಭಗಳಲ್ಲಿ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡದ ಸಂದರ್ಭದಲ್ಲಿನ ದ್ವಿಭಾಷಾ ಪರಿಸರವನ್ನು ಗಮನದಲ್ಲಿಟ್ಟುಕೊಂಡು ಸಾಮಾಜಿಕ ಭಾಷಾ ವಿಜ್ಞಾನದ ನೆಲೆಯಲ್ಲಿ ಸಂಶೋಧನೆ ಕೈಗೊಳ್ಳುವ ಉದ್ದೇಶದಿಂದ ಅಧ್ಯಯನ ಶಿಸ್ತಿಗೆ ಅವಶ್ಯವಾದ ವಿಧಿವಿಧಾನವೊಂದನ್ನು ರೂಪಿಸುವ ಪ್ರಯತ್ನ ಇಲ್ಲಿನ ಅಧ್ಯಯನದಲ್ಲಿ ಮಾಡಲಾಗಿದೆ. ಕೋಲಾರ ಜಿಲ್ಲೆ ಕನ್ನಡ ತೆಲುಗು ದ್ವಿಭಾಷಾ ಪರಿಸರದ ದ್ವಿಭಾಷಿಕರ ಭಾಷಾ ಕಲಿಕೆ ಬಳಕೆ ನೆಲೆಗಳನ್ನು ಶೋಧಿಸಲು ಹೊರಟ ಪ್ರಸ್ತುತ ಅಧ್ಯಯನವು ಕ್ಷೇತ್ರವನ್ನು ಆಧರಿಸಿದಂಥ ಅಧ್ಯಯನವಾಗಿದೆ. ಕೋಲಾರ ಜಿಲ್ಲೆಯ ಕನ್ನಡ ತೆಲುಗು ದ್ವಿಭಾಷಾ ಸಂದರ್ಭ ಗತಕಾಲದ ಚಾರಿತ್ರಿಕ ಸನ್ನಿವೇಶಗಳು ಹಾಗೂ

ವರ್ತಮಾನದ ವಿದ್ಯಾಮಾನಗಳಿಂದ ಹೇಗೆ ಚಲನಶೀಲವಾಗುತ್ತಿದೆ ಎಂಬ ಅಂಶಗಳನ್ನು ಇಲ್ಲಿ ಅವಲೋಕಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕ್ಷೇತ್ರಕಾರ್ಯವನ್ನು ಕೈಗೊಂಡಾಗ ದೊರೆತ ದತ್ತಾಂಶಗಳ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಸಾಮಾಜಿಕ ಭಿನ್ನಾಂಶಗಳು ಜಿಲ್ಲೆಯ ದ್ವಿಭಾಷಿಕರ ಭಾಷಾ ಕಲಿಕೆ ಬಳಕೆಯ ನೆಲೆಗಳ ಮೇಲೆ ಬೀರಿರುವ ಪರಿಣಾಮ ಹೇಗೆ ಈ ದ್ವಿಭಾಷಿಕರ ಕಲಿಕೆ ಬಳಕೆಯ ನೆಲೆಗಳು ಭಿನ್ನತೆಯಿಂದ ಕೂಡಿವೆ ಎಂಬುದನ್ನು ಶೋಧಿಸಲಾಗಿದೆ. ಜಿಲ್ಲೆಯ ದ್ವಿಭಾಷಾ ಪರಿಸರ ಭೌಗೋಳಿಕವಾಗಿ ಹಾಗೂ ಸಾಮಾಜಿಕ ಭಿನ್ನಾಂಶಗಳಿಂದಾಗಿ ತಾಲ್ಲೂಕಿನಿಂದ ತಾಲ್ಲೂಕಿಗೆ, ಜಾತಿಯಿಂದ ಜಾತಿಗೆ ಹಾಗೂ ಲಿಂಗಾಧಾರಿತ ನೆಲೆಯಲ್ಲಿ ದ್ವಿಭಾಷಿಕತೆಯ ಪ್ರಮಾಣ ಭಿನ್ನವಾಗಿದೆ. ಕೋಲಾರ, ಮುಳಬಾಗಿಲು, ಚಿಕ್ಕಬಳ್ಳಾಪುರ, ಶ್ರೀನಿವಾಸಪುರ, ಚಿಂತಾಮಣಿಗಳಲ್ಲಿ ತೆಲುಗು ಕನ್ನಡ ದ್ವಿಭಾಷಿಕತೆ ಆವರಣಗಳ ಪ್ರಮಾಣ ಹೆಚ್ಚಾಗಿ ಕಂಡಿದ್ದರೆ, ಮಾಲೂರು, ಬಂಗಾರಪೇಟೆಯಲ್ಲಿ ತಮಿಳಿನ ಕಾರಣದಿಂದಾಗಿ ತೆಲುಗು ಕನ್ನಡ ದ್ವಿಭಾಷಿಕತೆಯ ಆವರಣಗಳ ಪ್ರಮಾಣ ಕಡಿಮೆಯಾಗಿದೆ. ಇಲ್ಲಿನ ದ್ವಿಭಾಷಾ ಪರಿಸರವು ಕನ್ನಡ ಭಾಷಿಕರಿಗಿಂತ ತೆಲುಗು ಭಾಷಿಕರಿಗೆ ಕನ್ನಡ ಕಲಿಯುವ ಅವಶ್ಯಕತೆಗಳು ಹೆಚ್ಚಾಗಿದ್ದರೂ, ಇಲ್ಲಿನ ಕನ್ನಡಿಗರಿಗೆ ತೆಲುಗು ಭಾಷೆಯನ್ನು ಕಲಿಯುವ ಯಾವುದೇ ಒತ್ತಾಯ ಇಲ್ಲದಿದ್ದರೂ ತೆಲುಗರ ಜೊತೆಗಿನ ಆತ್ಮೀಯ ಸಂಬಂಧಗಳ ಕಾರಣಕ್ಕಾಗಿಯೇ, ಪ್ರೀತಿ ವಿಶ್ವಾಸಗಳ ಕಾರಣಕ್ಕಾಗಿಯೇ ಸಹಜವಾಗಿಯೇ ತೆಲುಗನ್ನು ಕಲಿಯುವ ಆಸಕ್ತಿಯಿರುವುದು ಗೋಚರಿಸುತ್ತದೆ. ಹೀಗಾಗಿ ಸಾಕಷ್ಟು ಸಂಖ್ಯೆಯಲ್ಲಿ ಕನ್ನಡಿಗರು ಮೌಖಿಕ ನೆಲೆಯಲ್ಲಿ ತೆಲುಗನ್ನು ಕಲಿಕೆ ಬಳಕೆ ಮಾಡುತ್ತಿರುವುದು ಕಂಡುಬಂದಿರುವ ಅಂಶವಾಗಿದೆ. ಕುರುಬ ಜನಾಂಗದಲ್ಲಿ ಮಾತ್ರ ಹೆಚ್ಚಿನ ಪ್ರಮಾಣದಲ್ಲಿ ಕನ್ನಡ ಏಕಭಾಷಿಕರಾಗಿದ್ದು, ಕನ್ನಡ ತೆಲುಗು ದ್ವಿಭಾಷಿಕರು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿದೆ. ಆದರೆ ಉಳಿದ ಜಾತಿಗಳಲ್ಲಿ ತೆಲುಗು ಏಕಭಾಷಿಕರ ಪ್ರಮಾಣ ಜಾಸ್ತಿ ಇದ್ದು ಹಾಗೆಯೇ ತೆಲುಗು ಕನ್ನಡ ದ್ವಿಭಾಷಿಕರ ಪ್ರಮಾಣದಲ್ಲಿ ಏರಿಕೆಯಾಗಿರುವುದು ಕಂಡುಬಂದ ಅಂಶ. ಕನ್ನಡಿಗರು ಏಕಭಾಷಿಕರಾಗಿರುವ ಸಂದರ್ಭದಲ್ಲಿ ಪುರುಷರಿಗಿಂತ ಮಹಿಳಾ ಏಕಭಾಷಿಕರ ಪ್ರಮಾಣ ಹೆಚ್ಚಿನ ಸಂಖ್ಯೆಯಲ್ಲಿದೆ. ಹಾಗೆಯೇ ತೆಲುಗು ಭಾಷಿಕರಲ್ಲಿಯೂ ಹೆಚ್ಚಿನ ಏಕಭಾಷಿಕದ್ದು, ಇಲ್ಲಿಯೂ ಪುರುಷರಿಗಿಂತ ಮಹಿಳಾ ಏಕಭಾಷಿಕರೇ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬಂದಿರುವುದನ್ನು ಗಮನಿಸಲಾಗಿದೆ. ಕುರುಬರಲ್ಲಿ ಕನ್ನಡ ಏಕಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿ ಇರಲು ಕಾರಣ ಅವರೊಂದು ಸಮುದಾಯವಾಗಿ ಕುರುಬರಪೇಟೆ, ಕುರುಬರಹಳ್ಳಿ ಹೆಸರುಗಳಲ್ಲಿ ವಾಸಮಾಡುತ್ತಿರುವುದು. ಅದೇ ಸಂದರ್ಭದಲ್ಲಿ ಅವರಲ್ಲೇ ಹೆಚ್ಚಿನ ಕನ್ನಡ ತೆಲುಗು ದ್ವಿಭಾಷಿಕರಾಗಲು ಇರುವ ಕಾರಣ ಅವರು ಬೇರೆ ಜನಾಂಗಗಳ ಸಮುದಾಯದ ಜೊತೆ ಸೌಹಾರ್ದಯುತವಾದ ಸಂಬಂಧಗಳ ಸಮುದಾಯದ ಜೊತೆ ಸೌಹಾರ್ದಯುತವಾದ ಸಂಬಂಧಗಳನ್ನಿಟ್ಟು ಕೊಂಡಿರುವುದು. ಇಲ್ಲಿನ ಕುಟುಂಬಗಳಲ್ಲಿ ಯಜಮಾನ ಹಾಗೂ ಪುರುಷವರ್ಗ ಹೊರಗಿನ ವ್ಯಾವಹಾರಿಕ

ಸಂಬಂಧಗಳನ್ನು ಹೆಚ್ಚಾಗಿಟ್ಟುಕೊಂಡಿರುವುದರಿಂದ ಪುರುಷರಲ್ಲಿ ಹೆಚ್ಚಿ ಕನ್ನಡ ತೆಲುಗು ದ್ವಿಭಾಷಿಕತೆ ಕಂಡುಬಂದಿದೆ. ಜೊತೆಗೆ ಈ ಕುಟುಂಬಗಳಲ್ಲಿ ಸಾಕ್ಷರತೆಯ ಪ್ರಮಾಣ ಅತ್ಯಂತ ಕಡಿಮೆ. ಮೊದಲನೇ, ಎರಡನೇ ತಲೆಮಾರುಗಳಲ್ಲಿ ಸಾಕ್ಷರತೆ ಕಡಿಮೆ ಪ್ರಮಾಣದಲ್ಲಿದ್ದರೆ ಮೂರನೇ ತಲೆಮಾರಿನಲ್ಲಿ ಸಾಕ್ಷರತೆ ಪ್ರಮಾಣದಲ್ಲಿ ಹೆಚ್ಚಳ ಕಂಡುಬಂದಿದೆ. ಕುಟುಂಬದಲ್ಲಿನ ವ್ಯವಹಾರಗಳು ಪುರುಷರ ಅಧೀನದಲ್ಲಿಯೇ ಹೆಚ್ಚಾಗಿದ್ದು, ಮಹಿಳೆಯರು ಪೊರ ಆವರಣಗಳಲ್ಲಿ ತೆಲುಗು ಭಾಷಿಕರೊಡನೆ ಹೆಚ್ಚಿನ ವ್ಯವಹಾರ ಇಲ್ಲದಿರುವುದರಿಂದ ಬಹಳಷ್ಟು ಮಂದಿ ಮಹಿಳೆಯರು ತೆಲುಗನ್ನು ಗ್ರಹಿಕೆಯ ನೆಲೆಯಲ್ಲಿ ಬಲ್ಲವರಾಗಿದ್ದಾರೆ.

ಮೊದಲಿನಿಂದಲೂ ತೆಲುಗು ಭಾಷಾ ಪ್ರದೇಶದಲ್ಲೇ ಉಳಿದುಕೊಂಡಿದ್ದರಿಂದ ಕೋಲಾರ ಜಿಲ್ಲೆಯ ಭಾಷಾ ಪರಿಸರ ತೆಲುಗು ಭಾಷೆಯ ಪ್ರಭಾವ ಹಾಗೂ ತೆಲುಗು ಭಾಷಿಕರ ಸಂಖ್ಯೆ ಹೆಚ್ಚಾಗಲು ಕಾರಣವಾಗಿದೆ. ತೆಲುಗು ಭಾಷಿಕರ ವಲಸೆ ಅಷ್ಟೇನೂ ಹೆಚ್ಚಾಗಿ ಕಂಡುಬಂದಿಲ್ಲ. ಕೋಲಾರದ ಚಿನ್ನದ ಗಣಿಗಳು ಹಾಗೂ ಬಿ.ಇ.ಎಂ.ಎಲ್.ನಲ್ಲಿ ಉದ್ಯೋಗದ ಕಾರಣಕ್ಕಾಗಿ ಬಂದ ಎಲ್ಲೋ ಕೆಲವರನ್ನು ಬಿಟ್ಟರೆ ಬಹುತೇಕ ಮಂದಿ ಇಲ್ಲೇ ನೆಲೆಸಿರುವ ಇಲ್ಲಿನವರೇ ಆದ ತೆಲುಗು ಭಾಷಿಕರು. ತೆಲುಗು ಏಕ ಭಾಷಿಕರ ಸಂಖ್ಯೆ ಹೆಚ್ಚಾಗಿ ಕಾಣುತ್ತಿರುವುದು ಸಾಮಾಜಿಕವಾಗಿ ಕೆಳವರ್ಗ, ಕೆಳಮಧ್ಯಮ ವರ್ಗದವರಲ್ಲಿ ಮಾತ್ರ ಜಾತಿಪದ್ಧತಿ, ಬಡತನ, ಸಾಮಾಜಿಕ ಕಟ್ಟುಪಾಡುಗಳು, ತೆಲುಗಿನ ಸಾಮಾಜಿಕ ಸಂದರ್ಭಗಳಲ್ಲಿ ಮಾತ್ರ ಇವರ ವ್ಯವಹಾರಿಕ ಸಂದರ್ಭ ಇರುವುದು ಇವರೊಡನೆ ಏಕಭಾಷಿಕರಾಗೇ ಉಳಿಯಲು ಕಾರಣಗಳಾಗಿವೆ. ಮೇಲುವರ್ಗದ ತೆಲುಗು ಭಾಷಿಕ ಮಹಿಳೆಯರಲ್ಲೂ ಸಾಕಷ್ಟು ಸಂಖ್ಯೆ ಮಹಿಳಾ ಏಕಭಾಷಿಕರಿರುವುದು ಕಾರಣವಾಗಿದೆ. ಬಹಳಷ್ಟು ಮಂದಿ ಇವರಲ್ಲಿ ವಿವಾಹದ ಕಾರಣದಿಂದಾಗಿ ಬಂದಿರುವಂಥವರು. ಕೃಷಿಕ ಕುಟುಂಬಗಳಲ್ಲಿ ಇಂತಹವರ ಸಂಖ್ಯೆ ಹೆಚ್ಚಾಗಿದ್ದು, ಹೊರ ಆವರಣಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳದ ಕಾರಣ ತಲುಗು ಏಕಭಾಷಿಕರಾಗಿಯೇ ಉಳಿದಿದ್ದಾರೆ. ಸ್ನೇಹಿತರು, ಸಂಬಂಧಿಕರು ಹೀಗೆ ಕೆಲವು ಸೀಮಿತ ಆವರಣಗಳಿಗೆ ಮಾತ್ರ ಒಳಗಾಗುವ ಸಂದರ್ಭಗಳು ಇದ್ದು, ಸಾಕ್ಷರತೆಯ ಕೌಶಲ್ಯಗಳನ್ನು ತೆಲುಗಿನಲ್ಲಿ ಪಡೆದಿರುವುದು, ತೆಲುಗನ್ನು ತಮ್ಮ ಪ್ರತಿಷ್ಠೆಯ ಭಾಷೆಯಾಗಿ ಪರಿಗಣಿಸಿರುವುದು ಇವೆಲ್ಲ ಕೂಡ ಅವರಲ್ಲಿ ಏಕಭಾಷಿಕರಾಗಿ ಉಳಿಯಲು ಕಾರಣವಾಗಿದೆ.

ತೆಲುಗು ಭಾಷಿಕರು ಜಿಲ್ಲೆಯಲ್ಲಿ ಒಟ್ಟಾರಿ ಶೇ.೪೬.೮೮ರಷ್ಟಿದ್ದರೂ ಇವರಲ್ಲಿ ಎಲ್ಲರೂ ತೆಲುಗನ್ನು ಮೌಖಿಕ ನೆಲೆಯಲ್ಲೇ ಬಲ್ಲವರಾಗಿದ್ದಾರೆ. ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೆ ಸೇರಿಸಿದ್ದು, ಮೂರನೆ ತಲೆಮಾರಿನವರಲ್ಲಿ ಕನ್ನಡವನ್ನು ಸಾಕ್ಷರ ನೆಲೆಯಲ್ಲಿ ಕಲಿಯುತ್ತಿದ್ದಾರೆ. ಮೊದಲ ತಲೆಮಾರಿನ ಹಾಗೂ ಎರಡನೇ ತಲೆಮಾರಿನವರಲ್ಲಿ ಬಹುತೇಕ ತೆಲುಗು ಕನ್ನಡ ಅರೆದ್ವಿಭಾಷಿಕರೆಂದೇ ಪರಿಗಣಿಸಲಾಗಿದೆ. ಕಾರಣ ಅವರು ತೆಲುಗನ್ನು ಕೇವಲ ಮೌಖಿಕ ನೆಲೆಯಲ್ಲಿ ಕಲಿತಿದ್ದು, ಸಾಕ್ಷರತೆಯ ನೆಲೆಯಲ್ಲಿ ಯಾವುದೇ ಕೌಶಲ್ಯಗಳಿಲ್ಲ. ದೀರ್ಘಕಾಲದ ಸಂಭಾಷಣೆಗಳ ಕಾಲದಲ್ಲಿ ದ್ವಿಭಾಷಿಕತೆಯನ್ನು ನಿರ್ವಹಿಸುವುದು ಕಷ್ಟದ

ಸಂಗತಿಯಾಗಿದೆ. ಸಂಭಾಷಣೆಯ ಕಾಲಾವಧಿ ಕಡಿಮೆಯಿದ್ದ ಅವಧಿಯಲ್ಲಿ ದ್ವಿಭಾಷಾ ಸಂದರ್ಭ ಅಂತಹ ಕಷ್ಟಕರವಲ್ಲ. ಬಹಳಷ್ಟು ಸಂದರ್ಭದಲ್ಲಿ ಸಮರ್ಥ ದ್ವಿಭಾಷಿಕರು ಭಾಷಾ ಸನ್ನಿವೇಶದಲ್ಲಿನ ಸಂವಹನ ಸಂದರ್ಭವನ್ನು ನಿರ್ವಹಿಸುವುದನ್ನು ಕಾಣಲಾಗಿದೆ.

ರೆಡ್ಡಿ ಒಕ್ಕಲಿಗರು, ಗೊಲ್ಲರು, ವೈಶ್ಯರು, ವಿಶ್ವಕರ್ಮ, ಬಲಜಿಗರ, ಚಿಂತಲು ಹೊಲೆಯರು, ಸಾವು ಹೊಲೆಯರು, ಬೇಡ ಜನಾಂಗಗಳಿಗೆ ಕನ್ನಡ ಭಾಷೆಯನ್ನು ಕಲಿಯುವ ಅನಿವಾರ್ಯತೆ ಅವಶ್ಯಕತೆ ಹೆಚ್ಚಾಗಿದೆ. ಹಾಗೆಯೇ ಕನ್ನಡ ಮನೆಯ ಮಾತನ್ನಾಗಿ ಬಳಸುತ್ತಿರುವ ಮಗ್ಗದ ಹೊಲೆಯರು, ಕುರುಬರು, ಮುಸುಕು ಒಕ್ಕಲಿಗರು ತಮಗಿಂತ ಹೆಚ್ಚಿನ ಸಂಖ್ಯೆಯಲ್ಲಿರುವ ತೆಲುಗು ಭಾಷಿಕರೊಂದಿಗೆ ಬಹಳಷ್ಟು ಆವರಣಗಳಲ್ಲಿ ಬೆರೆಯುವ ಸಂದರ್ಭ ಇರುವುದರಿಂದ ಅವರೂ ಸಹಜವಾಗೇ ತೆಲುಗನ್ನು ಕಲಿತಿರುವುದು ಈ ಜನಾಂಗಗಳಲ್ಲಿ ಕನ್ನಡ ತೆಲುಗು ದ್ವಿಭಾಷಿಕತೆಯ ಏರಿಕೆಯಾಗಲು ಕಾರಣವಾಗಿದೆ.

ತೆಲುಗು ಹಾಗೂ ಕನ್ನಡ ಭಾಷಿಕರ ಮನೋಭಾವವನ್ನು ಗಮನಿಸಿದಾಗ ತೆಲುಗು ಭಾಷಿಕರು ಕನ್ನಡ ಮಾಧ್ಯಮದವರಿಗೆ ಶೇ.೫ರಷ್ಟು ಬೋನಸ್ ಅಂಕಗಳನ್ನು ಕೊಡ ಮಾಡಿರುವುದು, ಕನ್ನಡ ಮಾಧ್ಯಮದವರಿಗೆ ವೈದ್ಯಕೀಯ ಹಾಗೂ ಇಂಜನಿಯರಿಂಗ್ ಪದವಿಗಳಿಗೆ ಪ್ರವೇಶ ಸಂದರ್ಭದಲ್ಲಿ ಮೀಸಲಾತಿ ನೀಡಿರುವುದು ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೆ ಸೇರಿಸುವುದಲ್ಲದೆ, ಮಕ್ಕಳ ಶಾಲಾ ದಾಖಲಾತಿಗಳಲ್ಲಿ ಮನೆ ಭಾಷೆ ಕನ್ನಡವೆಂದೇ ದಾಖಲಿಸಿರುವುದು ಎದ್ದು ಕಾಣುವ ಅಂಶ. ಅದೇ ರೀತಿ ಕನ್ನಡ ಭಾಷಿಕರು ಕನ್ನಡ ಸಿನಿಮಾಗಳಿಗಿಂತ ತೆಲುಗು ಸಿನಿಮಾಗಳನ್ನು ಮನರಂಜನೆಗಾಗಿ ಹೆಚ್ಚಾಗಿ ನೋಡುವುದು ಇಲ್ಲಿನ ವೈಶಿಷ್ಟ್ಯವಾಗಿ ಕಂಡಿದೆ. ಜಿಲ್ಲೆಯ ಕನ್ನಡ ಭಾಷಾ ಸಂದರ್ಭದಲ್ಲಿ ದ್ವಿಭಾಷಾ ಸ್ವೀಕರಣ ಕಾರ್ಯ ಹೆಚ್ಚಾಗಿ ಕಂಡುಬಂದಿದೆ. ಇದು ಕನ್ನಡದ ಮೇಲೆ ತೆಲುಗಿನ ಪ್ರಭಾವ ಹೆಚ್ಚಾಗಿರುವುದನ್ನು ತೋರಿಸುತ್ತದೆ.

೧೯೫೬ರ ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ಕೋಲಾರ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರದಲ್ಲಿ ಬಹಳಷ್ಟು ಬದಲಾವಣೆಗಳು ಕಂಡಿವೆ. ತೆಲುಗು ಭಾಷಿಕ ಮಕ್ಕಳು ಹಾಗೂ ಕನ್ನಡ ಭಾಷಿಕ ಮಕ್ಕಳ ಕಲಿಕೆ ಬಳಕೆಯ ಸಂದರ್ಭಗಳನ್ನು ಗಮನಿಸಿದಾಗ ಪ್ರಾಥಮಿಕ ಹಂತದಲ್ಲಿ ತೆಲುಗು ಭಾಷಿಕ ಮಕ್ಕಳ ಕಲಿಕೆಯ ಪ್ರಗತಿ ನಿಧಾನಗತಿಯಲ್ಲಿದೆ. ಅದೇ ಮಕ್ಕಳ ಕಲಿಕಾ ಪ್ರಗತಿ ಪ್ರಾಥಮಿಕ ಶಾಲಾ ಹಂತಕ್ಕೆ ಕಡಿಮೆಯಾಗಿ ಆ ಮಕ್ಕಳ ಶೈಕ್ಷಣಿಕವಾಗಿ ಉತ್ತಮ ದಾಖಲೆಯನ್ನು ಹೊಂದಿರುವುದು ಕಾಣುತ್ತದೆ. ಕರ್ನಾಟಕ ಸರ್ಕಾರದ ಆಡಳಿತಾತ್ಮಕ ಕಾರಣಗಳು ಕೆಳವರ್ಗದ ತೆಲುಗು ಭಾಷಿಕರು ಮೇಲ್ಮುಖವಾಗಿ ಚಲಿಸುವ ಹಂತದಲ್ಲಿ ಕನ್ನಡ ಭಾಷೆಗೆ ಪಲ್ಲಟವಾಗುತ್ತಿರುವುದು ಹೆಚ್ಚಾಗಿ ಕಾಣುತ್ತಿದ್ದು, ಆರ್ಥಿಕ ಸಬಲತೆ ಪಡೆದಿದ್ದು ಮೇಲ್ವರ್ಗಗಳ ತೆಲುಗು ಭಾಷಿಕರಲ್ಲಿ ಇಂಗ್ಲಿಷ್ ಭಾಷೆಗೆ ಸಾಕ್ಷರತೆಯ ನೆಲೆಗಳಲ್ಲಿ ಪಲ್ಲಟಗೊಳ್ಳುತ್ತಿದ್ದು, ಕನ್ನಡ ಹಾಗೂ ತೆಲುಗುಗಳನ್ನು ಕೇವಲ ಮೌಖಿಕ ನೆಲೆಯಲ್ಲಿ ಸಂಗೋಪನೆ ಮಾಡುತ್ತಿರುವುದನ್ನು ಕಾಣಲಾಗಿದೆ. ಶೈಕ್ಷಣಿಕವಾಗಿ ಕೆಳವರ್ಗ ಮತ್ತು ಕೆಳಮಧ್ಯಮ ವರ್ಗದ ತೆಲುಗು

ಭಾಷಿಕರು ಕನ್ನಡ ಭಾಷೆಗೆ ಪಲ್ಲಟವಾಗುತ್ತಿದ್ದು ಕುಟುಂಬದ ಆವರಣ, ಸ್ನೇಹಿತರು, ಸಂಬಂಧಿಕರು ಒಟ್ಟಿಗೆ ಕಲೆಯುವ ಸಂದರ್ಭಗಳಲ್ಲಿ ತೆಲುಗನ್ನು ತಮ್ಮ ಮುಖ್ಯ ಸಂವಹನ ಭಾಷೆಯನ್ನಾಗಿ ತಮ್ಮ ಒಳಗುಂಪುಗಳಲ್ಲಿ ಬಳಸುತ್ತಿದ್ದು, ತೆಲುಗು ಸಿನಿಮಾ, ತೆಲುಗು ಟಿ.ವಿ.ಧಾರವಾಹಿಗಳು, ತೆಲುಗು ಚಿತ್ರಗೀತೆಗಳನ್ನು ಕೇಳುವುದು, ಹಾಡು, ಮಾತುಕತೆ, ಹರಟೆಗಳನ್ನು ತೆಲುಗಿನಲ್ಲಿ ಬಳಕೆ ಮಾಡುವುದರ ಮೂಲಕ ತೆಲುಗು ಭಾಷಾ ಸಂಗೋಪನೆ ಮಾಡುತ್ತಿದ್ದಾರೆ.

ನುಡಿಮಿಶ್ರಣ ನುಡಿಜಿಗಿತ, ದ್ವಿಭಾಷಾ ಸ್ವೀಕರಣಗಳು. ಜಿಲ್ಲೆಯ ದ್ವಿಭಾಷಾ ಪರಿಸರದಲ್ಲಿ ಹೆಚ್ಚಾಗಿ ಕಾಣುತ್ತದೆ. ಸಾಮಾಜಿಕ ಭಿನ್ನಾಂಶಗಳಾದ ಲಿಂಗ ಹಾಗೂ ವಯಸ್ಸಿನ ಹಿನ್ನೆಲೆಯಲ್ಲಿ ನೋಡಿದಾಗ ಕೆಳವರ್ಗ, ಕೆಳಮಧ್ಯಮವರ್ಗಗಳಲ್ಲಿನ ಅವಿದ್ಯಾವಂತರಲ್ಲಿ ಭಾಷಾ ಸಂಪತ್ತಿನ ಕೊರತೆಯಿಂದಾಗಿ ನುಡಿಮಿಶ್ರಣ, ನುಡಿಜಿಗಿತ ಕಂಡುಬಂದಿವೆ. ಭಾಷಾ ಕಲಿಕೆಯ ಹಂತವನ್ನು ದಾಟಿದ ವಯಸ್ಕರಲ್ಲಿ ಹಾಗೂ ಅದರಿಂದ ಹನ್ನೆರಡನೇ ವಯಸ್ಸಿನಲ್ಲಿ ಮಕ್ಕಳಲ್ಲಿ ಈ ರೀತಿಯ ಮಿಶ್ರಣ ಕಂಡುಬಂದರೆ ಮಹಿಳೆಯರಲ್ಲೂ ಭಾಷಾ ಸಂಪರ್ಕ ಹಾಗೂ ಭಾಷಾ ಸಂಪತ್ತಿನ ಕೊರತೆಯಿಂದಾಗಿ ನುಡಿಮಿಶ್ರಣ ಜಿಗಿತಗಳಂಥವು ಕಂಡುಬಂದಿವೆ. ನುಡಿಜಿಗಿತವು ಚುನಾವಣ ಭಾಷಣಗಳು, ಶೈಕ್ಷಣಿಕ ಸಂದರ್ಭಗಳು, ವ್ಯಾಪಾರೀ ಸಮುದಾಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿರುವುದನ್ನು ಗುರುತಿಸಲಾಗಿದೆ. ಹಾಗೆಯೇ ಭಾಷಿಕರ ಭಾಷಾ ಆಯ್ಕೆ ಭಾಷಿಕ ಸಂದರ್ಭಗಳು ಬದಲಾವಣೆ ಆದಂತೆಲ್ಲ ಭಾಷಿಕರ ಭಾಷಾ ಆಯ್ಕೆ ಮತ್ತು ಭಾಷಾ ನಡವಳಿಕೆಗಳು ಸಂದರ್ಭದಿಂದ ಸಂದರ್ಭಕ್ಕೆ ಭಿನ್ನವಾಗಿರುವುದನ್ನು ಗುರುತಿಸಲಾಗಿದೆ.

ಕೋಲಾರ ಜಿಲ್ಲೆಯ ದ್ವಿಭಾಷಾ ಪರಿಸರದಲ್ಲಿ ಕನ್ನಡವನ್ನು ತೆಲುಗರು ಕಲಿಯುವುದಾಗಲೀ ಅಥವಾ ತೆಲುಗನ್ನು ಕನ್ನಡಿಗರು ಕಲಿತು ದ್ವಿಭಾಷಿಕರಾಗಿರುವುದಾಗಲಿ ಮೊದಲ ಹಾಗೂ ಎರಡನೆಯ ಕಲಿಯುವ ಭಾಷಿಕರು ಹೆಚ್ಚಾಗಿ ಕಾಣಬರುವುದು ಸಾಮಾಜೀಕರಣದ ಪ್ರಕ್ರಿಯೆಯಿಂದ. ಮೂರನೇ ತಲೆಮಾರಿನ ತೆಲುಗು ಭಾಷಿಕರು ಕನ್ನಡವನ್ನು ಮೌಖಿಕ ಹಾಗೂ ಸಾಕ್ಷರತೆಯ ಕೌಶಲ್ಯಗಳನ್ನು ಎರಡೂ ನೆಲೆಗಳಲ್ಲಿ ಸಾಧಿಸಿ ಜಿಲ್ಲೆಯ ದ್ವಿಭಾಷಾ ಸಂದರ್ಭ ಚಲನಶೀಲ ಪ್ರಕ್ರಿಯೆಗೆ ಒಳಗಾಗಿರುವುದನ್ನು ಕಾಣಲಾಗಿದೆ. ಶೈಕ್ಷಣಿಕ ಕಾರಣದಿಂದ ಉಂಟಾಗಿರುವ ದ್ವಿಭಾಷಿಕತೆಯಲ್ಲಿ ಮೌಖಿಕ ಕೌಶಲ್ಯಗಳೊಂದಿಗೆ ಸಾಕ್ಷರತೆಯ ಕೌಶಲ್ಯಗಳು ಒಂದುಗೂಡಿ ಮುಂದುವರಿಯುತ್ತಾ ಹೋದಂತೆ ಹಾಗೆಲ್ಲ ದ್ವಿಭಾಷಾ ಆವರಣಗಳು ಹೆಚ್ಚಾಗಬಹುದು. ಮುಂದಿನ ದಿನಗಳಲ್ಲಿ ಕನ್ನಡಕ್ಕೆ ಭಾಷಾ ಪಲ್ಲಟವಾದಂತೆಲ್ಲ ಹೊಸ ತಲೆಮಾರಿನಲ್ಲಿ ದ್ವಿಭಾಷಿಕರ ಸಂಖ್ಯೆ ಸಮುದಾಯದ ನೆಲೆಯಲ್ಲಿ ಕಡಿಮೆಯಾಗಿ ವೈಯಕ್ತಿಕ ನೆಲೆಯಲ್ಲಿ ಉಳಿಯುವ ಸಾಧ್ಯತೆಗಳಿವೆ. ದ್ವಿಭಾಷಿಕತೆಯ ಅಧ್ಯಯನಗಳು ಒಂದಕ್ಕೊಂದು ಸರಪಳಿಯಂತಿರುವುದರಿಂದ ಮುಂದಿನ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಆಸಕ್ತಿಯಿರುವ ಸಂಶೋಧಕರು ದ್ವಿಭಾಷಿಕತೆಯನ್ನು ಬೇರೆ ಬೇರೆ ನೆಲೆಗಳಲ್ಲಿ ಮುಂದುವರಿಸಿಕೊಂಡು ಹೋಗಲು ಜಿಲ್ಲೆಯಲ್ಲಿ ಸಾಕಷ್ಟು ಅವಕಾಶಗಳಿವೆ.

ಮುಂದಿನದಿನಗಳಲ್ಲಿ ಕನ್ನಡ ತೆಲುಗು ದ್ವಿಭಾಷಾ ಸಂದರ್ಭದ ಅಧ್ಯಯನ ಕೈಗೊಳ್ಳುವಾಗ ಕಾಲದ ಮಿತಿಯಿಂದ ಕೈ ಬಿಟ್ಟಿರುವ ತೆಲುಗು ಕನ್ನಡ ದ್ವಿಭಾಷಾ ಕುಟುಂಬಗಳ ಸೂಕ್ಷ್ಮ ಅಧ್ಯಯನವನ್ನು ಮತ್ತಷ್ಟು ಮುಂದುವರಿಸಬಹುದಾಗಿದೆ. ಇದುವರೆಗೂ ನಡೆಸಿದ ಶೋಧನೆ ಜಿಲ್ಲೆಯ ದ್ವಿಭಾಷಿಕ ನೆಲೆಗಳನ್ನು ಸಾಮಾಜಿಕ ಭಿನ್ನಾಂಶಗಳ ಮೂಲಕ ಶೋಧಿಸುವ ಯತ್ನವಾಗಿದೆ.

ಹಾಗೆಯೇ ಒಂದೊಂದೇ ಭಿನ್ನಾಂಶಗಳನ್ನು ಅಂದರೆ ಜಾತಿ, ವಯಸ್ಸು, ಲಿಂಗ, ವರ್ಗ, ಕುಟುಂಬದ ಅಂಶಗಳನ್ನು ಇಟ್ಟುಕೊಂಡು ವಿವರವಾಗಿ ಅದರಲ್ಲಿನ ದ್ವಿಭಾಷಾ ಕೌಶಲ್ಯಗಳನ್ನು ಪತ್ತೆಹಚ್ಚಬಹುದಾಗಿದೆ. ನುಡಿಮಿಶ್ರಣ, ನುಡಿಜಿಗಿತಗಳಿಗೆ ಇನ್ನು ಬೇರ್‍ಯಾವ ಅಂಶಗಳು ಕಾರಣವಾಗಬಹುದು ಹಾಗೂ ದ್ವಿಭಾಷಾ ಸ್ವೀಕರಣ ಪ್ರಕ್ರಿಯೆಯಲ್ಲಿ ಕನ್ನಡ ತೆಲುಗಿನ ಪ್ರಭಾವ ಬೀರಿರುವಲ್ಲಿ ಕನ್ನಡದ ಪಾಲೆಷ್ಟು ತೆಲುಗಿನ ಪಾಲೆಷ್ಟು ಎಂಬ ಅಂಶಗಳನ್ನು ಕುರಿತು ಗುರುತಿಸಬಹುದಾಗಿದೆ. ಹೆಚ್ಚಿನ ದ್ವಿಭಾಷಿಕರಿರುವ ಪ್ರದೇಶ ಅಥವಾ ಹಳ್ಳಿ, ಪಟ್ಟಣ ಒಂದನ್ನೇ ಅಧ್ಯಯನಕ್ಕಾಗಿ ಆರಿಸಿಕೊಂಡು ಸಂಶೋಧನೆ ನಡೆಸುವುದರಿಂದ ಸಾಮಾಜಿಕ ಭಾಷಾ ವಿಜ್ಞಾನದ ನೆಲೆಯಲ್ಲಿ ದ್ವಿಭಾಷಿಕತೆಯ ಬಗೆಗೆ ಮತ್ತಷ್ಟು ಆಳ ಅರಿವುಗಳನ್ನು ತಿಳಿಯಲು ಸಾಧ್ಯ.

ಕೋಲಾರ ಜಿಲ್ಲೆಯಲ್ಲಿ ಕಂಡುಬರುವ ದ್ವಿಭಾಷಾ ಸ್ವೀಕರಣವೊಂದನ್ನೇ ಆಧಾರವಾಗಿಟ್ಟುಕೊಂಡು ಕನ್ನಡ ಭಾಷಾ ಸ್ವರೂಪದ ಮೇಲೆ ಹೇಗೆ ತೆಲುಗಿನ ದಟ್ಟ ಪ್ರಭಾವ ಆಗಿದೆಯೆಂಬ ಅಧ್ಯಯನವನ್ನು ಕೈಗೊಳ್ಳಬಹುದಾಗಿದೆ. ಭಿನ್ನ ಭಾಷೆಗಳ ಸಂಪರ್ಕದಿಂದ ಉಂಟಾಗುವ ಎಲ್ಲ ಬಗೆಯ ಭಾಷಿಕ ಸನ್ನಿವೇಶ ಜಿಲ್ಲೆಯಲ್ಲಿದ್ದು, ಅಲ್ಲಿನ ಭಾಷಿಕ ಪ್ರಕ್ರಿಯೆಗಳನ್ನು ಕುರಿತು ಅತ್ಯಂತ ಸೂಕ್ಷ್ಮಗತಿಯಲ್ಲಿ ಅಧ್ಯಯನವನ್ನು ಕನ್ನಡದ ಸಂದರ್ಭದಲ್ಲಿ ಕೈಗೊಳ್ಳಬೇಕಾದ ಅವಶ್ಯಕತೆ ತೀವ್ರ ಜರೂರು ಇದೆ.

# ಅನುಬಂಧಗಳು

೧. ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ತೆಲುಗು-ಕನ್ನಡ ದ್ವಿಭಾಷಿಕತೆ ವಿವರಗಳು

೨. ತೆಲುಗು-ಕನ್ನಡ ಪಾರಿಭಾಷಿಕ ಕೋಶ

೩. ಪ್ರಶ್ನಾವಳಿಗಳು

೪. ಆಕರ ಗ್ರಂಥಗಳು

# ಅನುಬಂಧಗಳು

## ೧. ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ತೆಲುಗು-ಕನ್ನಡ ದ್ವಿಭಾಷಿಕತೆ ವಿವರಗಳು

### ತೆಲುಗು-ಕನ್ನಡ ದ್ವಿಭಾಷಿಕ ಕುಟುಂಬ ೧

| | | |
|---|---|---|
| **ಜಾತಿ** | : | ಬ್ರಾಹ್ಮಣ (ಸ್ಮಾರ್ತ-ತೆಲುಗು) |
| **ವರ್ಗ** | : | ಮೇಲ್ವರ್ಗ |
| **ಕುಟುಂಬ** | : | ವಿಭಕ್ತ |

ಈ ದ್ವಿಭಾಷಿಕ ಕುಟುಂಬದವರು ಆಂಧ್ರ ಪ್ರದೇಶದ ತಿರುಪತಿಯಿಂದ ಉದ್ಯೋಗ ಕಾರಣಕ್ಕಾಗಿ ವಲಸೆ ಬಂದವರಾಗಿದ್ದಾರೆ. ಈ ಕುಟುಂಬವು ಪ್ರಾರಂಭದಲ್ಲಿ ಕೋಲಾರದಲ್ಲಿ ನೆಲೆಸಿದ್ದರೂ ನಂತರ ಮಗನ ಓದು ಹಾಗೂ ಹೆಂಡತಿ ಸಾಫ್ಟ್‌ವೇರ್ ಇಂಜಿನಿಯರಾದ್ದರಿಂದ ಬೆಂಗಳೂರಿನಲ್ಲಿ ಬ್ನೆಲೆಸಿದ್ದಾರೆ. ಹಾಗೂ ಪ್ರತಿ ದಿನ ಕೋಲಾರಕ್ಕೆ ಬಂದುಹೋಗುವುದು ಮಾಡುತ್ತಿದ್ದಾರೆ. ಇವರು ವೃತ್ತಿಯಲ್ಲಿ ವೈದ್ಯಕೀಯ ಉಪನ್ಯಾಪಕರು. ಕಾಲೇಜಿನ ಸಂದರ್ಭದಲ್ಲಿ ಆಡಳಿತ ಇತ್ಯಾದಿ ಭಾಷಾ ಬಳಕೆ ಸಂದರ್ಭಗಳಲ್ಲಿ ಕನ್ನಡ ಹಾಗೂ ಇಂಗ್ಲಿಶ್ ಬಳಸುತ್ತಿದ್ದು ಮನೆಯ ಆವರಣ, ನೆಂಟರು, ಸ್ನೇಹಿತರ ವಲಯದಲ್ಲಿ ತೆಲುಗನ್ನು ಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬಂದಿದೆ. ಇವರ ಹೆಂಡತಿ ಮದ್ರಾಸು ಮೂಲದವರಾಗಿದ್ದು ತಮಿಳು ಭಾಷಿಕರಾಗಿದ್ದು ಗಂಡ ಮಕ್ಕಳ ಜೊತೆ ತೆಲುಗು/ಕನ್ನಡ/ಇಂಗ್ಲಿಶ್ ಭಾಷೆಯನ್ನು ಬಳಸುವುದಾಗಿ ಹೇಳಿಕೊಂಡಿದ್ದಾರೆ. ಮಕ್ಕಳಿಬ್ಬರೂ ತೆಲುಗು-ಕನ್ನಡವನ್ನು ಶಿಕ್ಷಣದ ನೆಲೆಯಲ್ಲಿ ಕಲಿತಿದ್ದು ಕನ್ನಡವನ್ನು ಮಾತು, ಗ್ರಹಿಕೆ, ಓದು ಬರಹಗಳ ನೆಲೆಗಳಲ್ಲಿ ಕಲಿತಿರುವುದಾಗಿ ಕಂಡುಬಂದಿದೆ. ಮಕ್ಕಳು ಶಿಕ್ಷಣದಲ್ಲಿ ಮಾಧ್ಯಮವನ್ನಾಗಿ ಇಂಗ್ಲಿಶನ್ನೂ ಕಲಿತರೂ, ಸ್ನೇಹಿತರು, ಶಾಲೆ ಆವರಣದಲ್ಲಿ ಕನ್ನಡವನ್ನು ಕಲಿಯುವ ಒತ್ತಾಯಕ್ಕೆ ಒಳಗಾಗಿರುವುದು ಕಂಡುಬಂದಿದೆ. ತಂದೆಯೊಡನೆ ತೆಲುಗು-ಕನ್ನಡವನ್ನು ತಾಯಿಯೊಡನೆ ಕನ್ನಡ-ತಮಿಳನ್ನೂ ಈ ಮಕ್ಕಳು ಬಳಸುತ್ತಿರುವುದು ಕಂಡುಬಂದಿದೆ. ವೃತ್ತಿಯಲ್ಲಿ ವೈದ್ಯರಾದ ಇವರು ಹೆಂಡತಿಯೊಡನೆ ತೆಲುಗನ್ನು ಮಕ್ಕಳೊಂದಿಗೆ ಕನ್ನಡ-ತೆಲುಗನ್ನು ಬಳಸುವುದು ಗೋಚರಿಸುತ್ತದೆ. ಮಾತಿನ ಸಂದರ್ಭದಲ್ಲಿ ಕನ್ನಡ-ತೆಲುಗು ಅಥವಾ ಇಂಗ್ಲಿಶ್-ಕನ್ನಡ ಅಥವಾ ತಮಿಳು-ತೆಲುಗು ಭಾಷೆಗಳ ಮಿಶ್ರಣ ಕಂಡುಬಂದಿದೆ. ಮನೆಯಲ್ಲಿ ತೆಲುಗನ್ನು ಹೆಚ್ಚಾಗಿ ಬಳಸಿದರೂ ಹೊರ ಆವರಣಗಳಲ್ಲಿ ಮಕ್ಕಳು

| ಸಮಾಜೋಭಾಷಿಕ ಭಿನ್ನಾಂಶಗಳು | | | ಭಾಷಾಬಳಕೆಯ ಆವರಣಗಳು | | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ವೃತ್ತಿ | ವಿದ್ಯಾರ್ಹತೆ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ಪ್ರಸಾದ್ | ೪೪ | ವೈದ್ಯರು | ಸ್ನಾತಕೋತ್ತರ ಪದವಿ | ತೆ/ಕ/ಇ | ಕ | ತೆ | ಕ/ತೆ/ಇ | ಕ/ಇ | ತೆ/ಇ/ಕ | ಕ | ತೆ | ಕ/ಇ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಸುವರ್ಣಲತಾ | ೩೫ | ಸಾಫ್ಟ್‌ವೇರ್ ಇಂಜಿನಿಯರ್ | ಸ್ನಾತಕೋತ್ತರ ಪದವಿ | ತೆ/ಕ/ಇ | ಕ | ತ/ತೆ | ಇ/ಕ | ತ | ಇ/ಕ | ಕ | ತ | ಕ/ಇ | ತ/ತೆ | ✓ | ✓ | ✓ | ✓ | ✓ | ✓ | ✓ | ✓ |
| ರಾಕೇಶ್ | ೧೩ | ವಿದ್ಯಾರ್ಥಿ | ೯ | ತೆ/ಕ | ಕ | ತೆ | ಕ | ಕ/ಇ | - | ಕ | ಕ | ಕ/ಇ | ಕ/ತೆ | ✓ | ✓ | ✓ | ✓ | ✓ | ✓ | ✓ | ✓ |
| ವಿಕ್ರಮ್ | ೦೭ | ವಿದ್ಯಾರ್ಥಿ | ೩ | ತೆ/ಕ | ಕ | ತೆ | ಕ | ಕ/ಇ | - | ಕ | ಕ | ಕ/ಇ | ಕ/ತೆ | ✓ | ✓ | ✓ | ✓ | ✓ | | | |



✓ ✓ ಸಮಾಜೋಭಾಷಿಕ ಭಿನ್ನಾಂಶಗಳು ಭಾಷಾಬಳಕೆಯ ಆವರಣಗಳು ಭಾಷಾ ಕೌಶಲ್ಯಗಳು

೦೧. ಮನೆ
೦೨. ನೆರೆಹೊರೆ
೦೩. ಸಂಬಂಧಿಕರು
೦೪. ಗೆಳೆಯರು
೦೫. ಶಾಲೆ
೦೬. ಕೆಲಸದ ಸ್ಥಳ
೦೭. ಮಾರುಕಟ್ಟೆ ಪ್ರದೇಶ
೦೮. ಪ್ರಾರ್ಥನೆ
೦೯. ಅಪರಿಚಿತರೊಡನೆ
೧೦. ಟಿ.ವಿ. ನೋಡುವಾಗ

| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು/ಲಿಂಗ | ವಯಸ್ಸು | ಕಸಬು | ಶಿಕ್ಷಣ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ವೆಂಕಟರಮಣಪ್ಪ | ೪೧ | ಡ್ರೈವರ್ | ೧೦ನೇ ತರಗತಿ | ತೆ | ತೆ/ಕ | ತೆ | ಕ/ತೆ | [illegible] | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಶಾಂತಮ್ಮ | ೩೫ | ಗೃಹಿಣಿ | ಬಿ.ಎ. | ತೆ | ತೆ/ಕ | [illegible] | [illegible] | [illegible] | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಲಾವಣ್ಯ | ೦೯ | ವಿದ್ಯಾರ್ಥಿ | ಬಿ.ಎಸ್.ಸಿ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಗೌತಮಿ | ೦೬ | ಕೆಲಸದವಳು | ಡಿ.ಐ.ಪಿ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಪಾರ್ವತಿ | ೧೩ | ವಿದ್ಯಾರ್ಥಿ | ೮ನೇ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ವಿನಯ್‌ಕುಮಾರ್ | ೦೯ | ವಿದ್ಯಾರ್ಥಿ | ೫ನೇ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | - |

ಕನ್ನಡವನ್ನು ಬಳಸುವುದು ಕಂಡುಬಂದಿದೆ. ಹಾಗಯೇ ಶಾಲೆ-ಕಾಲೇಜು ಮಾರುಕಟ್ಟೆ, ಕಛೇರಿ ಆವರಣಗಳಲ್ಲಿ ಕನ್ನಡ ಭಾಷಾ ಬಳಕೆ ಕಂಡುಬಂದಿದೆ. ಮನೆಯ ಆವರಣದಲ್ಲಿ, ಕಾಲೇಜು ಸಂದರ್ಭದಲ್ಲಿ ಮಾತನಾಡುವಾಗ ತೆಲುಗಿನಿಂದ ಕನ್ನಡಕ್ಕೂ, ಕನ್ನಡದಿಂದ ಇಂಗ್ಲಿಶ್‌ಗೂ ಇದೇ ಮಕ್ಕಳಲ್ಲಿ ಭಾಷಾಜಿಗಿತ ಗೋಚರಿಸಿದೆ. ಮನೆಯ ಯಜಮಾನರು ತೆಲುಗು ಭಾಷೆಯನ್ನು ಸಂಗೋಪನೆ ಮಾಡಿಕೊಂಡುಬಂದಿರುವುದು ಕಂಡುಬಂದರೆ ಅವರ ಹೆಂಡತಿ ತಮಿಳು ಮೂಲದವರಾಗಿದ್ದು ಅದೇ ಭಾಷೆಯನ್ನು ಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬಂದಿದೆ. ಅಪರಿಚಿತರೊಂದಿಗೆ ಮಾತನಾಡುವ ಸಂದರ್ಭದಲ್ಲಿ ಕನ್ನಡವನ್ನು ಹೆಚ್ಚಾಗಿ ಬಳಸುವುದು ಕಂಡುಬಂದಿದೆ ಟಿ.ವಿ.ವೀಕ್ಷಣೆಯ ಸಂದರ್ಭದಲ್ಲಿ ತೆಲುಗು-ತಮಿಳನ್ನು ಪೋಷಕರು ಸಂಗೋಪನೆ ಮಾಡಿದರೆ ಮಕ್ಕಳು ತೆಲುಗು-ಕನ್ನಡ ವೀಕ್ಷಿಸುವುದರ ಮೂಲಕ ತೆಲುಗು ಸಂಗೋಪನೆ ಜೊತೆಗೆ ಕನ್ನಡಕ್ಕೆ ಪಲ್ಲಟವಾಗಿರುವುದನ್ನು ಸೂಚಿಸುತ್ತದೆ.

**ತೆಲುಗು-ಕನ್ನಡ ದ್ವಿಭಾಷಿಕ ಕುಟುಂಬ ೨**

| | | |
|---|---|---|
| **ಜಾತಿ** | : | ಗೊಲ್ಲ (ಯಾದವ) |
| **ವರ್ಗ** | : | ಮೇತ ಮಧ್ಯಮ |
| **ಕುಟುಂಬ** | : | ಅವಿಭಕ್ತ |

ಈ ಕುಟುಂಬ ಸುಮಾರು ೩೦ ವರ್ಷಗಳ ಹಿಂದೆ ಕೋಲಾರಕ್ಕೆ ಬಂದು ನೆಲಸಿದೆ. ಕೋಲಾರದ ಪಿ.ಸಿ.ಬಡಾವಣೆಯಲ್ಲಿ ಇವರಿಗೆ ಸ್ವಂತಮನೆ ಇದೆ. ಸ್ವಂತ ಸ್ಥಳ ಆಂಧ್ರದ ಟಿ.ಸದಮು ಎಂಬ ಊರು. ಇದು ಮದನಪಲ್ಲಿ ಬಳಿಯಿದೆ. ಮನೆಯಜಮಾನ ೧ರಿಂದ ೫ನೇ ತರಗತಿಯವರೆಗೆ ತೆಲುಗು ಮಾಧ್ಯಮದಲ್ಲಿ ಟಿ. ಸದಮು ಊರಿನಲ್ಲೇ ಓದು. ೬ರಿಂದ ಕರ್ನಾಟಕ್ಕೆ ಬಂದು ಕನ್ನಡ ಮಾಧ್ಯಮದಲ್ಲಿ ಪದವಿಯವರೆಗೆ ಓದಿದ್ದಾರೆ. ಹೆಂಡತಿ ಕೋಲಾರದವರೇ ಆಗಿದ್ದು, ಕೋಲಾರದಲ್ಲಿ ಕನ್ನಡ ಮಾಧ್ಯಮದಲ್ಲಿ ಪಿ.ಯು.ಸಿ.ವರೆಗೆ ಓದಿದ್ದಾರೆ. ಗಂಡ ಆಂಧ್ರ-ಕರ್ನಾಟಕ ಎರಡೂ ಕಡೆ ಓದಿದ್ದರಿಂದ ತೆಲುಗು ಕನ್ನಡಗಳನ್ನು ಬಲ್ಲವರಾಗಿದ್ದು ಭಾಷಾ ಕೌಶಲ್ಯಗಳಾದ ಮಾತು, ಗ್ರಹಿಕೆ, ಓದು, ಬರಹದ ಎರಡೂ ನೆಲೆಗಳಲ್ಲಿ ತೆಲುಗು ಹಾಗೂ ಕನ್ನಡ ಭಾಷಾಬಳಕೆ ಮಾಡುತ್ತಿವುದು ಕಂಡುಬಂದಿದೆ. ಹೆಂಡತಿಗಂಡನೊಡನೆ ತೆಲುಗು-ಕನ್ನಡ, ಅತ್ತೆಯ ಬಳಿ ತೆಲುಗು, ಮಕ್ಕಳ ಬಳಿ ಕನ್ನಡ ಹೀಗೆ ಮನೆಯ ಆವರಣದಲ್ಲಿ ದ್ವಿಭಾಷಿಕ ಕೌಶಲ್ಯ ಪ್ರಯೋಗಿಸುತ್ತಿರುವುದು ಕಂಡುಬಂದಿದೆ. ಕುಟುಂಬದ ಯಜಮಾನನ ಇಬ್ಬರ ಹೆಣ್ಣು ಮಕ್ಕಳ ಬಳಿ ಕನ್ನಡ, ಹೀಗೆ ಮನೆಯ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಕಲಿಯುತ್ತಿದ್ದು ತಾಯಿಯಿಂದ ಕನ್ನಡವನ್ನು ಕಲಿಯುತ್ತಿರುವುದು ಕಂಡುಬಂದಿದೆ. ೭೦ರ ವಯಸ್ಸಿನ ಇವರ ತಂದೆ ತೆಲುಗಿನಲ್ಲೇ ಮಾತನಾಡುತ್ತಿದ್ದು, ಕನ್ನಡವನ್ನು ಸ್ವಲ್ಪ ಸ್ವಲ್ಪವಾಗಿ ಬಳಸುವುದು ಮಾತ್ರ ಕಂಡುಬಂದಿದೆ. ಹೀಗಾಗಿ ಇವರಲ್ಲಿ ಭಾಷಾ

| ಸಮಾಜೋಭಾಷಿಕ ಭಿನ್ನಾಂಶಗಳು | | | ಭಾಷಾಬಳಕೆಯ ಆವರಣಗಳು | | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು/ಲಿಂಗ | ವಯಸ್ಸು | ಕಸಬು | ಶಿಕ್ಷಣ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಮಾತು | | ಗ್ರಹಿಕೆ | | ಓದು | | ಬರಹ | |
| | | | | | | | | | | | | | | ಕ | ತೆ | ಕ | ತೆ | ಕ | ತೆ | ಕ | ತೆ |
| ಶ್ರೀನಿವಾಸ | ೪೦ | ಕಾಸ್ಮೆಟಿಕ್‌ವ್ಯಾಪಾರಿ | ಪದವಿ | ತೆ/ಕ | ತೆ/ಕ | ತೆ | ಕ/ತೆ | ಕ/ತೆ | ಕ | ಕ/ತೆ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |
| ಪ್ರಭಾವತಿ | ೩೫ | ಗ್ರಹಿಣಿ | ಪಿಯುಸಿ | ತೆ/ಕ | ತೆ/ಕ | ತೆ | ತೆ/ಕ | ಕ | ಕ | ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |
| ಸ್ವಾತಿ | ೦೯ | ವಿದ್ಯಾರ್ಥಿ | ಸ್ನಾತಕೋತ್ತರ | ತೆ/ಕ | ತೆ/ಕ | ಕ | ಕ | ಕ | - | - | ಕ | ಕ | ಕ/ತೆ | ✓ | ✓ | ✓ | ✓ | ✓ | - | ✓ | - |
| ಪ್ರಿಯಾ | ೦೫ | - | ೩ನೇ ತರಗತಿ | ತೆ/ಕ | ತೆ/ಕ | ತೆ | ಕ | ಕ | - | - | ಕ | ಕ | ಕ/ತೆ | ✓ | ✓ | ✓ | ✓ | ✓ | - | ✓ | - |
| ಸುಬ್ಬರಾಯಪ್ಪ | ೭೦ | - | ಇಲ್ಲ | ತೆ | ತೆ | ತೆ | ತೆ | ತೆ | ತೆ | - | ತೆ | ತೆ | ತೆ | ✓ | ✓ | ✓ | ✓ | - | - | - | - |
| ಲಕ್ಷ್ಮಮ್ಮ | ೬೦ | - | - | ತೆ/ಕ | ತೆ/ಕ | ತೆ/ಕ | ಕ | - | - | ಕ | ಕ | ಕ | ತೆ/ಕ | ✓ | ✓ | ✓ | ✓ | ✓ | - | - | - |
| ಲಲಿತಮ್ಮ | ४೩ | ಸ/ಉ | ಪ್ರೌಢ | ತೆ/ಕ | ತೆ/ಕ | ಕ | ಕ | ಕ/ತೆ | ಕ | - | ಕ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |
| ನಳಿನಿ | ೨೦ | ವಿದ್ಯಾರ್ಥಿ | ಪದವಿ | ತೆ/ಕ | ತೆ/ಕ | ಕ | ಕ | ಕ | - | - | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |
| ನವೀನ್ | ೧೮ | ವಿದ್ಯಾರ್ಥಿ | ಪಿಯುಸಿ | ತೆ/ಕ | ತೆ/ಕ | ಕ | ಕ | ಕ | - | - | ತೆ | ಕ | ಕ | ✓ | ✓ | ✓ | ✓ | ✓ | ✓ | ✓ | - |
| ವಿವೇಕ್ | ೧೭ | ವಿದ್ಯಾರ್ಥಿ | ೯ನೇ ತರಗತಿ | ತೆ/ಕ | ತೆ/ಕ | ಕ | ಕ | ಕ | - | ಕ | ಕ | ಕ | ಕ | ✓ | ✓ | ✓ | ✓ | ✓ | ✓ | ✓ | - |

೦೧. ಮನೆ, ೦೨. ನೆರೆಹೊರೆ, ೦೩. ಸಂಬಂಧಿಕರು, ೦೪. ಗೆಳೆಯರು, ೦೫. ಶಾಲೆ, ೦೬. ಕೆಲಸದ ಸ್ಥಳ, ೦೭. ಮಾರುಕಟ್ಟೆ ಪ್ರದೇಶ ೦೮. ಪ್ರಾರ್ಥನೆ ೦೯. ಅಪರಿಚಿತರೊಡನೆ
೧೦. ಟಿ.ವಿ.ನೋಡುವಾಗ

ಸಂಗೋಪನಾ ಕಾರ್ಯ ಅತಿಹೆಚ್ಚಾಗಿರುವುದು ಕಂಡುಬಂದಿದೆ. ಇವರ ಸಹೋದರಿ ೧ರಿಂದ ೭ನೇ ತರಗತಿಯವರಿಗೆ ಟಿ.ಸದಮುನಲ್ಲಿ ತೆಲುಗು ಮಾಧ್ಯಮದಲ್ಲಿ ಓದಿದ್ದರೂ ಹೈಸ್ಕೂಲು ಓದಿದ್ದು ಕೋಲಾರದಲ್ಲಿ. ಕೋಲಾರದ ಗಂಡನ್ನೇ ಮದುವೆಯಾಗಿದ್ದು, ಅವರು ಅಪಘಾತದಲ್ಲಿ ತೀರಿಕೊಂಡಿದ್ದರಿಂದ ಅವರ ಉದ್ಯೋಗವನ್ನು ಅನುಕಂಪದ ಆಧಾರದ ಮೇಲೆ ಕರ್ನಾಟಕ ಸರ್ಕಾರ ನೀಡಿರುವುದರಿಂದ ಇವರು ದ್ವಿತಿಯ ದರ್ಜೆ ಸಹಾಯಕರಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕಛೇರಿ ಪರಿಸರದಲ್ಲಿ ಕನ್ನಡವನ್ನು ಬಳಸುವ ಸಂದರ್ಭಕ್ಕೆ ಒಳಗಾಗಿರುವುದು ಕಂಡುಬಂದಿದೆ. ಇವರ ಇಬ್ಬರು ಗಂಡು ಮಕ್ಕಳು ಪ್ರೌಢ ಹಾಗೂ ಪಿ.ಯು.ಸಿ.ಗಳಲ್ಲಿ ಓದುತ್ತಿದ್ದು, ಮನೆಯ ಆವರಣದಲ್ಲಿ ತೆಲುಗು-ಕನ್ನಡವನ್ನು, ಶಾಲೆಯಲ್ಲಿ ಗೆಲೆಯರೊಡನೆ ಕನ್ನಡವನ್ನೂ ಬಳಸುವುದು ತಿಳಿದುಬಂದಿದೆ. ಇವರು ಮನೆಯ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಬಳಸಿದರೂ ಹೊರ ಆವರಣಗಳಾದ ಮಾರುಕಟ್ಟೆ, ಸಂತೆ, ಆಸ್ಪತ್ರೆ ಮುಂತಾದ ಆವರಣಗಳಲ್ಲಿ ಕನ್ನಡ ಭಾಷಾ ಬಳಕೆ ಮಾಡುತ್ತಿರುವುದು ಕಂಡುಬಂದಿದೆ. ತೆಲುಗಿನ ಬಗ್ಗೆ ಪ್ರೀತಿ ಕನ್ನಡದ ಬಗ್ಗೆ ಅಭಿಮಾನ ಇವರಲ್ಲಿ ಕಂಡುಬಂದಿದೆ. ತೆಲುಗು ಅಥವಾ ಕನ್ನಡವನ್ನು ಮಾತನಾಡುವಾಗ ಭಾಷಾಮಿಶ್ರಣ ಕಂಡುಬಂದಿದ್ದು ಅದೇ ಸಂದರ್ಭದಲ್ಲಿ ಭಾಷಾ ಜಿಗಿತಕ್ಕೆ ಒಳಗಾಗುವುದು ಕಂಡುಬಂದಿದೆ. ಮನೆಯಲ್ಲಿ ಟಿ.ವಿ. ನೋಡುವಾಗ, ಸಂಬಂಧಿಕರು, ಹಬ್ಬಹರಿದಿನಗಳಲ್ಲಿ ಮದುವೆ, ಮುಂಜಿ ಇತ್ಯಾದಿ ಸಂದರ್ಭಗಳಲ್ಲಿ ಭಾಷಾ ಸಂಗೋಪನೆ ಹಾಗೂ ಭಾಷಾನಿಷ್ಠೆ ನಿರಂತರವಾಗಿ ನಡೆದಿರುವುದು ಕಂಡುಬರುತ್ತದೆ. ಅಪರಿಚಿತರೊಂದಿಗೆ ಮಾತನಾಡುವ ಪ್ರಸಂಗ ಬಂದಾಗ ಕನ್ನಡದಲ್ಲೇ ಮಾತನಾಡುತ್ತಿದ್ದು, ಅವರು ತೆಲುಗರೆಂದ ತಿಳಿದ ಕೂಡಲೇ ತೆಲುಗು ಭಾಷೆಗೆ ಪಲ್ಲಟವಾಗುವುದು ಕಂಡುಬಂದಿದೆ. ಇದು ಭಾಷಾನಿಷ್ಠೆಗೆ ಇಂದು ಒಳ್ಳೆಯ ಉದಾಹರಣೆಯಾಗಿದೆ.

**ತೆಲುಗು ಕನ್ನಡ ದ್ವಿಭಾಷಿಕ ಕುಟುಂಬ ೩**

**ಜಾತಿ** : ಕಮ್ಮ (ನಾಯುಡು)

**ವರ್ಗ** : ಮಧ್ಯಮ

**ಕುಟುಂಬ** : ವಿಭಕ್ತ

ಕೋಲಾರದ ಪೇಟೆಚಾಮನಹಳ್ಳಿ ಬಡಾವಣೆಯಲ್ಲಿ ಈ ದ್ವಿಭಾಷಿಕ ಕುಟುಂಬದವರು ನೆಲೆಸಿದ್ದಾರೆ. ಆಂಧ್ರಪ್ರದೇಶದ ಕೋರಮಂಡಲ ತೀರದ ಪಶ್ಚಿಮ ಗೋದಾವರಿ ಜಿಲ್ಲೆಯ ವಾಡಪಲ್ಲಿಯಿಂದ ಬಂದ ಅವಿಭಕ್ತ ಕುಟುಂಬ ಇದಾಗಿದೆ. ಮನೆಯ ಯಜಮಾನ ಕೋಲಾರದ ವೈದ್ಯಕೀಯ ಕಾಲೇಜೊಂದರಲ್ಲಿ ಉದ್ಯೋಗದಲ್ಲಿದ್ದಾರೆ. ಪತ್ನಿ ಮನೆವಾರ್ತೆಯನ್ನು ನೋಡಿಕೊಳ್ಳುತ್ತಾರೆ. ಬಾಡಿಗೆ ಮನೆಯಲ್ಲಿ ವಾಸಮಾಡುತ್ತಿರುವ ಇವರು ಸ್ವಂತ ಊರಾದ ವಾಡಪಲ್ಲಿಯಲ್ಲಿ ಸ್ವಂತ ಮನೆ ಜಮೀನು ಹೊಂದಿದ್ದು

| ಸಮಾಜೋಭಾಷಿಕ ಭಿನ್ನಾಂಶಗಳು | | | | ಭಾಷಾಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ಕಸಬು | ಶಿಕ್ಷಣ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ಶ್ರೀನಿವಾಸ | ೪೦ | ಖಾಸಗಿ | ಪದವಿ | ತೆ | ಕ | ತೆ | ಕ/ತೆ | ತೆ | ಕ/ತೆ | ಕ/ತೆ | ತೆ | ಕ/ಇ | ತೆ | ✓ | ✓ | ✓ | ✓ | ✓ | ✓ | ✓ | ✓ |
| ರಾಮಲಕ್ಷ್ಮಿ | ೩೨ | ಗೃಹಿಣಿ | ಪದವಿ | ತೆ | ಕ | ತೆ | ಕ/ತೆ | ತೆ | ಕ/ತೆ | ಕ/ತೆ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ವಂಶಿ ಕೃಷ್ಣಮೋಹನ್ | ೧೨ | ವಿದ್ಯಾರ್ಥಿ | ಪ್ರೌಢ | ತೆ | ಕ | ತೆ | ಕ | ಇ/ಕ | - | ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |

೦೧. ಮನೆ, ೦೨. ನೆರೆಹೊರೆ, ೦೩. ಸಂಬಂಧಿಕರು, ೦೪. ಗೆಳೆಯರು, ೦೫. ಶಾಲೆ, ೦೬. ಕೆಲಸದ ಸ್ಥಳ

೦೭. ಮಾರುಕಟ್ಟೆ ಪ್ರದೇಶ, ೦೮. ಪ್ರಾರ್ಥನೆ, ೦೯. ಅಪರಿಚತರೊಡನೆ, ೧೦. ಟಿ.ವಿ. ನೋಡುವಾಗ

ಆಗಾಗ್ಗೆ ಸ್ವಂತ ಸ್ಥಳಕ್ಕೆ ಹೋಗಿ ಬರುತ್ತಿದ್ದಾರೆ. ಹಾಗಾಗಿ ತೆಲುಗು ಭಾಷಾ ಸಂಪರ್ಕ ನಿಕಟವಾಗಿದೆ. ಪ್ರೌಢ ಶಾಲಾ ಹಂತದವರೆಗೂ ತೆಲುಗು ಮಾಧ್ಯಮದಲ್ಲೇ ಶಿಕ್ಷಣವನ್ನು ಪಡೆದು, ಪದವಿ ಹಂತದಲ್ಲಿ ತೆಲುಗನ್ನು ಪ್ರಥಮ ಭಾಷೆಯನ್ನಾಗಿ, ಇಂಗ್ಲಿಶನ್ನು ಮಾಧ್ಯಮವಾಗಿ ಶಿಕ್ಷಣ ಪಡೆದಿದ್ದಾರೆ. ಮಾಧ್ಯಮಿಕ ಶಾಲೆಗಳಲ್ಲಿ ಓದುತ್ತಿರುವ ಮಗು ಇಂಗ್ಲಿಶ್, ಹಿಂದಿ, ತೆಲುಗನ್ನು ಕಲಿಯುತ್ತಿದ್ದು, ಗ್ರಹಿಕೆ ನೆಲೆಯಲ್ಲಿ ಮಾತ್ರ ಕನ್ನಡವನ್ನು ಬಲ್ಲವನಾಗಿದ್ದಾನೆ. ಈ ಕುಟುಂಬದವರು ತೆಲುಗನ್ನು ಕೆಲವೇ ಆಯ್ದ ಆವರಣಗಳಲ್ಲಿ ಮಾತ್ರ ಉಳಿಸಿಕೊಂಡು ಮಿಕ್ಕಂತೆ ಕನ್ನಡವನ್ನು ದಿನನಿತ್ಯದ ವ್ಯವಹಾರಗಳಲ್ಲಿ ಹೆಚ್ಚಾಗಿ ಬಳಸುತ್ತಿದ್ದಾರೆ. ಇವರು ತೆಲುಗನ್ನು ಬಳಸುತ್ತಿರುವ ಆಯ್ದ ಆವರಣಗಳೆಂದರೆ ನೆಂಟರಿಷ್ಟರು, ತೆಲುಗಿನ ಸ್ನೇಹಿತರು, ಕೆಲಸ ಮಾಡುವ ಸ್ಥಳದಲ್ಲಿ ಬಳಸುತ್ತಿದ್ದಾರೆ. ಇವರ ಹೆಂಡತಿ ಮನೆಯ ಆವರಣದಲ್ಲಿ ಮಾತ್ರ ತೆಲಗನ್ನು ಹೆಚ್ಚಾಗಿ ಬಳಸುತ್ತಿದ್ದು ಮಿಕ್ಕಂತೆ ನೆರೆಹೊರೆ, ಮಾರುಕಟ್ಟೆ, ಮಗನ ಶಾಲೆಯ ಉಪಾಧ್ಯಾಯರು ಇನ್ನಿತರರ ಬಳಿ ಹೆಚ್ಚಾಗಿ ಕನ್ನಡವನ್ನು ಆಡುಮಾತಿನಲ್ಲಿ ಹೆಚ್ಚು ಹೆಚ್ಚಾಗಿ ಬಳಸುತ್ತಿದ್ದಾರೆ. ಇವರ ಪರಿಸರದಲ್ಲಿ ಕನ್ನಡ-ತೆಲುಗು ದ್ವಿಭಾಷಿಕರೇ ಹೆಚ್ಚಾಗಿರುವುದರಿಂದ ಭಾಷಾಪಲ್ಲಟ, ನುಡಿಮಿಶ್ರಣಗಳಿಗೆ ಒಳಗಾಗು ತ್ತಿರುವುದು ಕಂಡುಬಂದಿದೆ.

ಮಗ ಮಾತ್ರ ಶಾಲಾ ಸಂದರ್ಭದಲ್ಲಿ ಸ್ನೇಹಿತರ ಜೊತೆ ಹೆಚ್ಚಾಗಿ ಕನ್ನಡ ಮಾತನಾಡ ಬಲ್ಲವನಾಗಿದ್ದಾನೆ. ತೆಲುಗನ್ನು ಆಪ್ತೇಷ್ಟರು, ಮನೆಯ ಆವರಣದಲ್ಲಿ ಮಾತ್ರ ತೆಲುಗು ಸಂಗೋಪನೆ ಮಾಡಿಕೊಂಡು ಬಂದಿರುತ್ತಾನೆ. ಗಂಡ-ಹೆಂಡಿರಿಬ್ಬರೂ ಮಾತು, ಗ್ರಹಿಕೆ, ಓದು, ಬರಹದ ನೆಲೆಯಲ್ಲಿ ತೆಲುಗು ಬಲ್ಲವರಾದರೂ ೧೪ ವರ್ಷಗಳ ಹಿಂದೆಯಲ್ಲಿ ಕೋಲಾರಕ್ಕೆ ವಲಸೆ ಬಂದವರಾದ್ದರಿಂದ ಇಬ್ಬರೂ ಕನ್ನಡ ಓದು ಬರಹವನ್ನು ಕಲಿತಿರುವುದು ಅವರು ಭಾಷಾ ಪಲ್ಲಟಕ್ಕೆ ಒಳಗಾಗಿರುವುದನ್ನು ಸೂಚಿಸುತ್ತದೆ. ಈ ಎಲ್ಲ ಅಂಶಗಳನ್ನು ಅವಲೋಕಿಸಿವಾಗ ತೆಲುಗು ಭಾಷಿಕರು ಕನ್ನಡವನ್ನು ಕಲಿಯುವ ಒತ್ತಾಯ ಕಂಡುಬಂದಿದೆ. ಟಿ.ವಿ.ಯಲ್ಲಿ ತೆಲುಗು ಕಾರ್ಯಕ್ರಮಗಳ ವೀಕ್ಷಣೆ, ತೆಲುಗು ವಾರಪತ್ರಿಕೆಗಳ ಮೂಲಕ ಈ ಕುಟುಂಬದವರು ಭಾಷಾ ಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬರುತ್ತದೆ.

**ತೆಲುಗು ಕನ್ನಡ ದ್ವಿಭಾಷಿಕ ಕುಟುಂಬ ೪**

**ಜಾತಿ** : ಬಲಿಜ (ನಾಯ್ಡು-ಶೆಟ್ಟಿ ಬಲಿಜ)

**ವರ್ಗ** : ಮಧ್ಯಮ

**ಕುಟುಂಬ** : ವಿಭಕ್ತ

ಆಂಧ್ರಪ್ರದೇಶದ ಕದಿರಿ ಬಳಿಯ ಅಮಡಗೂರು ಎಂಬಲ್ಲಿಂದ ಈ ದ್ವಿಭಾಷಿಕ ಕುಟುಂಬ ಚಿಂತಾಮಣಿಗೆ ವಲಸೆ ಬಂದು ನೆಲೆಸಿದೆ. ಹೆಂಡತಿ ತವರು ಮದನಪಲ್ಲಿ. ಹತ್ತು ವರ್ಷಗಳ ಹಿಂದೆಯೇ

| ಸಮಾಜೋಭಾಷಿಕ ಭಿನ್ನಾಂಶಗಳು | | | | ಭಾಷಾಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ಕಸಬು | ಶಿಕ್ಷಣ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ವೆಂಕಟರಮಣಪ್ಪ | ೪೧ | ಡ್ರೈವರ್ | ೧೦ನೇ ತರಗತಿ | ತೆ | ತೆ/ಕ | ತೆ | ಕ/ತೆ | ತೆ | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಶಾಂತಮ್ಮ | ೩೫ | ಗೃಹಿಣಿ | ಬಿ.ಎ. | ತೆ | ತೆ/ಕ | ತೆ | ತೆ/ಕ | ತೆ | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಲಾವಣ್ಯ | ೦೯ | ವಿದ್ಯಾರ್ಥಿ | ಬಿ.ಎಸ್.ಸಿ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಗೌತಮಿ | ೦೬ | ವಿದ್ಯಾರ್ಥಿ | ಡಿ.ಐ.ಪಿ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಪಾರ್ವತಿ | ೧೩ | ವಿದ್ಯಾರ್ಥಿ | ೮ನೇ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ವಿನಯ್‌ಕುಮಾರ್ | ೦೯ | ವಿದ್ಯಾರ್ಥಿ | ೫ನೇ | ತೆ | ತೆ/ಕ | ತೆ | ತೆ/ಕ | ಕ | - | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | - |

೦೧. ಮನೆ, ೦೨. ನೆರೆಹೊರೆ, ೦೩. ಸಂಬಂಧಿಕರು

೦೪. ಗೆಳೆಯರು, ೦೫. ಶಾಲೆ, ೦೬. ಕೆಲಸದ ಸ್ಥಳ

೦೭. ಮಾರುಕಟ್ಟೆ, ಪ್ರದೇಶ, ೦೮. ಪ್ರಾರ್ಥನೆ

೦೯. ಅಪರಿಚಿತರೊಡನೆ, ೧೦. ಟಿ.ವಿ.ನೋಡುವಾಗ

ಈ ಕುಟುಂಬ ಚಿಂತಾಮಣಿಗೆ ವಲಸೆ ಬಂದಿದೆ. ಮನೆಯಜಮಾನ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಉದ್ಯೋಗಸ್ಥರು. ಪ್ರೌಢ ಶಿಕ್ಷಣದವರೆಗೆ ಆಂಧ್ರದಲ್ಲಿ ತೆಲುಗು ಮಾಧ್ಯಮದಲ್ಲಿ ಓದಿದ್ದಾರೆ. ಹೆಂಡತಿಯು ತೆಲುಗು ಮಾಧ್ಯಮದಲ್ಲಿ ಭಾಷಿಕ ಬಳಕೆಯ ಕೌಶಲ್ಯಗಳಾದ ಮಾತು, ಗ್ರಹಿಕೆ, ಓದು, ಬರಹಗಳಲ್ಲಿ ಕೌಶಲ್ಯ ಸಾಧಿಸಿದ್ದಾರೆ. ಹಾಗಾಗಿ ಈ ಕುಟುಂಬದಲ್ಲಿ ತೆಲುಗಿನಿಂದ ಕನ್ನಡಕ್ಕೆ ಭಾಷಾಪಲ್ಲಟ ವಾಗಿರುವುದು ಕಂಡುಬಂದಿದೆ. ನಾಲ್ಕು ಜನ ಮಕ್ಕಳಲ್ಲಿ ಎಲ್ಲರೂ ಶಾಲೆಯಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿತರೂ ತೆಲುಗು ಭಾಷೆಯ ಸಂಗೋಪನೆ ಕಾರ್ಯ ಸುಗಮವಾಗಿ ನಡೆದಿದೆ. ಕುಟುಂಬದ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಬಳಸಿದರೂ ಹೊರ ಆವರಣಗಳಲ್ಲಿ ಮಕ್ಕಳು ಮಾತು, ಗ್ರಹಿಕೆ, ಓದು, ಬರಹ ನೆಲೆಗಳಲ್ಲಿ ಕನ್ನಡವನ್ನು ಹೆಚ್ಚಾಗಿ ಬಳಕೆ ಮಾಡುತ್ತಿರುವುದು ಕಂಡುಬಂದಿದೆ. ಮನೆಯ ಆವರಣದಲ್ಲಿ ತೆಲುಗನ್ನು ಮಾತನಾಡಿದರೂ, ಅಷ್ಟೇ ಪ್ರಭಾವಶಾಲಿಯಾಗಿ ಈ ಮಕ್ಕಳು ತೆಲುಗಿನಲ್ಲಿ ಓದು, ಬರಹ ಕಲಿತಿದ್ದಾರೆ. ಇದು ಭಾಷಾನಿಷ್ಠೆಯನ್ನು ಸೂಚಿಸುತ್ತದೆ. ಮತ್ತು ಭಾಷಾಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬರುತ್ತದೆ. ಈ ಕುಟುಂಬ ಎಲ್ಲಾ ಸದಸ್ಯರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಂದವರಾಗಿ ಭಾಷಾ ಪಲ್ಲಟಕ್ಕೆ ಒಳಗಾಗುವ ಪ್ರಕ್ರಿಯೆಗೆ ಉತ್ತಮ ಉದಾಹರಣೆಯಾಗಿದ್ದಾರೆ. ಕನ್ನಡ-ತೆಲುಗು ಎರಡು ಭಾಷೆಗಳನ್ನು ಬಳಸಬಲ್ಲವರಾದ್ದರಿಂದ ಇವರ ಭಾಷಾ ಬಳಕೆಯಲ್ಲಿ ನುಡಿ ಮಿಶ್ರಣ, ನುಡಿಜಿಗಿತ ಕಂಡುಬಂದಿದೆ. ಈ ಕುಟುಂಬದವರು ತೆಲುಗನ್ನು ಹೆಚ್ಚಾಗಿ ಪ್ರೀತಿಸಿದರೂ ಕನ್ನಡದ ಬಗ್ಗೆ ಒಲವು, ಅಭಿಮಾನವಿದೆ. ಭಾಷಾಬಳಕೆಯ ಆವರಣಗಳಾದ ಕೆಲಸದ ಸ್ಥಳ, ನೆರೆಗೊರೆ, ನೆಂಟರಿಷ್ಟರು, ಮಾರುಕಟ್ಟೆ ಪ್ರದೇಶಗಳಲ್ಲಿ ಕುಟುಂಬದ ಯಜಮಾನ ಕನ್ನಡ-ತೆಲುಗನ್ನು, ಬಂಧುಗಳೊಡನೆ ತೆಲುಗನ್ನು ಬಳಸುತ್ತಿರುವುದು ಕಂಡುಬಂದಿದೆ. ಮನೆ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಬಳಸುತ್ತಿದ್ದು, ತೆಲುಗು ಭಾಷೆಯ ಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬಂದಿದೆ. ಇವರ ಮಡದಿ ನೆರೆಹೊರೆಯವರೊಡನೆ ಹಾಗೂ ವ್ಯವಹಾರಿಕ ನೆಲೆಗಳಲ್ಲಿ ಕನ್ನಡವನ್ನು, ಬಂಧುಗಳು-ನೆಂಟರಿಷ್ಟರು ಹಾಗೂ ಮನೆಯ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಬಳಸುತ್ತಿದ್ದು, ಮನೆಯ ಆವರಣ, ಮಾರುಕಟ್ಟೆ ಪ್ರದೇಶ, ಟಿ.ವಿ. ನೋಡುವಿಕೆ ಮುಂತಾದೆಡೆಗಳಲ್ಲಿ ತೆಲುಗು ಭಾಷೆಯ ಸಂಗೋಪನೆ ಮಾಡುತ್ತಿರುವುದು ಕಂಡುಬಂದಿದೆ. ಕನ್ನಡ-ತೆಲುಗು ಎರಡನ್ನು ಬಳಕೆಯಲ್ಲಿಟ್ಟುಕೊಂಡಿರುವುದರಿಂದ ಇವರ ಭಾಷಾ ಬಳಕೆಯಲ್ಲಿ ನುಡಿಮಿಶ್ರಣಗಳು-ನುಡಿಜಿಗಿತಗಳು ಕಾಣಿಸಿಕೊಂಡಿವೆ. ತೆಲುಗು ಹಾಗೂ ಕನ್ನಡ ಎರಡನ್ನು ಒಟ್ಟಿಗೆ ಬಳಕೆ ಮಾಡುತ್ತಿರುವ ದ್ವಿಭಾಷಾ ಕುಟುಂಬವಿದು.

**ತೆಲುಗು-ಕನ್ನಡ ದ್ವಿಭಾಷಿಕ ಕುಟುಂಬ-೫**

**ಜಾತಿ** : ವೀರಶೈವ ಲಿಂಗಾಯಿತ

**ವರ್ಗ** : ಮಧ್ಯಮ

**ಕುಟುಂಬ** : ವಿಭಕ್ತ

ಈ ಕುಟುಂಬದವರ ಯಜಮಾನರ ಮೂಲಸ್ಥಳ ಆಂಧ್ರಕ್ಕೆ ಹೊಂದಿಕೊಂಡು ಕರ್ನಾಟಕ್ಕೆ ಸೇರಿರುವ ಏನಿಗದಲೆ. ಇವರ ಹೆಂಡತಿ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ, ಪಲಮನೇರು ತಾಲ್ಲೂಕಿನ ನಿಡಿಗುಂಟದ ಶಂಕರ್ರಾಯಲಪೇಟೆ. ಮನೆಯ ಆವರಣದಲ್ಲಿ ಕುಟುಂಬದ ಎಲ್ಲ ಸದಸ್ಯರು ತೆಲುಗನ್ನು ಬಳಸುತ್ತಿದ್ದಾರೆ. ಕುಟುಂಬದ ಯಜಮಾನ ಚಿಂತಾಮಣಿಯ ಕಡಲೆ ಬೀಜ (ಶೇಂಗಾ) ವ್ಯಾಪಾರಿಯಾದ್ದರಿಂದ ಇವರಿಗೆ ಹಲವು ಭಾಷೆಗಳು ಗೊತ್ತಿವೆ. ಸಾಂದರ್ಭಿಕವಾಗಿ ತೆಲುಗು, ಕನ್ನಡ, ಹಿಂದಿ, ಉರ್ದು, ತಮಿಳನ್ನು ಬಳಕೆ ಮಾಡುವುದಾಗಿ ಹೇಳಿಕೊಂಡಿರುತ್ತಾರೆ. ಹೆಂಡತಿ ಆಂಧ್ರದಿಂದ ಬಂದವರಾದ್ದರಿಂದ ಭಾಷಾ ಬಳಕೆಯ ನೆಲೆಯಲ್ಲಿ ಹೆಚ್ಚಾಗಿ ತೆಲುಗು ಭಾಷೆಯ ಸಂಗೋಪನೆ ಮಾಡಿಕೊಂಡು ಬಂದಿರುವುದು ಕಂಡುಬಂದಿದೆ. ಕನ್ನಡವನ್ನು ಮಾತು, ಗ್ರಹಿಕೆ, ಓದಿನ ನೆಲೆಗಳಲ್ಲಿ ಮಾತ್ರ ಬಲ್ಲವರಾಗಿದ್ದು ಬರವಣಿಗೆ ಇಲ್ಲ. ಮಕ್ಕಳು ಇಂಗ್ಲಿಶ್ ಮಾಧ್ಯಮದಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿತವರಾದ್ದರಿಂದ ಕನ್ನಡವನ್ನು ಎಲ್ಲಾ ನೆಲೆಗಳಲ್ಲಿ ಬಲ್ಲವರಾಗಿದ್ದಾರೆ. ಎಲ್ಲ ರೀತಿಯ ಭಾಷಿಕ ಆವರಣಗಳಲ್ಲಿ ಅಂದರೆ ಸ್ನೇಹಿತರು, ನೆಂಟರು, ಶಾಲಾ ಆವರಣ, ಉದ್ಯೋಗದ ಆವರಣಗಳಲ್ಲಿ ಕನ್ನಡ-ತೆಲುಗು ಬಳಸುತ್ತಿದ್ದಾರೆ. ಹೆಚ್ಚಾಗಿ ಹಾಡುಗಳನ್ನು ಕೇಳುವುದು ಟಿ.ವಿ. ನೋಡುವ ನೆಲೆಗಳಲ್ಲಿ ತೆಲುಗನ್ನು ಸಂಗೋಪನೆ ಹೂಡುತ್ತಿರುವುದು ಕಂಡುಬಂದಿದೆ. ಕನ್ನಡ-ತೆಲುಗು ಎರಡು ಬಲ್ಲವರಾಗಿರುವುದರಿಂದ ಮಾತಿನ ಸಹಜತೆಗೆ ಮೆರಗನ್ನು ತರಲು ನುಡಿಜಿಗಿತಕ್ಕೆ ಒಳಗಾಗುವುದು ಕಂಡುಬಂದಿದ್ದು, ಜೊತೆಗೆ ಮಾತಿನಲ್ಲಿ ನುಡಿಮಿಶ್ರಣ ಕಂಡುಬಂದಿದೆ.

ಅಪರಿಚಿತರೊಡನೆ ವ್ಯವಹರಿಸುವಾಗ ಕನ್ನಡದಲ್ಲಿ ಮಾತನಾಡುವುದು ಕಂಡಿದೆ. ಚಿಂತಾಮಣಿ ಮಾರುಕಟ್ಟೆ ಪ್ರದೇಶದ ವ್ಯವಹಾರದ ಭಾಷೆ ಹೆಚ್ಚಾಗಿ ತೆಲುಗೇ ಆಗಿರುವುದರಿಂದ ಮಾರುಕಟ್ಟೆ ಮುಂತಾದ ಪ್ರದೇಶಗಳಲ್ಲಿ ತೆಲುಗನ್ನೇ ಹೆಚ್ಚಾಗಿ ಬಳಸುತ್ತಾರೆ. ಕುಟುಂಬದ ಯಜಮಾನ ತಮ್ಮ ಹಂಡತಿಯೊಂದಿಗೆ ಮತ್ತು ಮಕ್ಕಳೊಂದಿಗೆ ತೆಲುಗಿನಲ್ಲೇ ಸಂಭಾಷಿಸುತ್ತಾರೆ. ಮಕ್ಕಳು (ಅಣ್ಣ, ಅಕ್ಕ, ತಮ್ಮ) ಶಾಲಾ ಕಾಲೇಜಿನ ವಿಷಯವನವನ್ನು ತಮ್ಮಲ್ಲಿಯೇ ಮಾತನಾಡುವಾಗ ಕನ್ನಡ-ತೆಲುಗನ್ನು ಉಪಯೋಗಿಸುತ್ತಿದ್ದು ನುಡಿಜಿಗಿತ ಹಾಗೂ ನುಡಿಮಿಶ್ರಣಗಳು ಕಾಣಿಸಿಕೊಂಡಿವೆ. ಹಾಗಾಗಿ ಇವರದು ತೆಲುಗು ಕನ್ನಡ ದ್ವಿಭಾಷಾ ಕುಟುಂಬವಾಗಿ ಕಂಡುಬಂದಿದೆ.

| ಸಮಾಜೋಭಾಷಿಕ ಭಿನ್ನಾಂಶಗಳು | | | | ಭಾಷಾಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ಶಿಕ್ಷಣ | ಕಸಬು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ನೀಲಕಂಠ | ೬೦ | ಪ್ರಾಥಮಿಕ | ವ್ಯಾಪಾರಸ್ಥರು | ತೆ | ತೆ/ಕ | ತೆ | ತೆ/ಕ | ಕ | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ಶ್ಯಾಮಲ | ೫೦ | ಮಾಧ್ಯಮಿಕ | ಗೃಹಿಣಿ | ತೆ | ತೆ/ಕ | ತೆ | ತೆ/ಕ | ತೆ | ತೆ/ಕ | ತೆ/ಕ | ತೆ | ಕ | ತೆ | ✓ | ✓ | ✓ | ✓ | ✓ | ✓ | ✓ | ✓ |
| ರಾಜೇಶ್ | ೩೫ | ಬಿ.ಇ | ಸಾಫ್ಟ್‌ವೇರ್ | ತೆ/ಕ | ತೆ/ಕ | ತೆ | ಕ | ಕ | ಕ/ಇ | ತೆ/ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |
| ಮಂಜುಳವಾಣಿ | ೩೨ | ಎಂ.ಎಸ್.ಸಿ | ಶಿಕ್ಷಕಿ | ತೆ/ಕ | ತೆ/ಕ | ತೆ | ಕ | ಕ | ತೆ/ಕ/ಇ | ತೆ/ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |
| ಕುಸುಮ | ೨೨ | ಸ್ನಾತಕೋತ್ತರ | ವಿದ್ಯಾರ್ಥಿ | ತೆ/ಕ | ತೆ/ಕ | ತೆ | ಕ | ಕ | - | ತೆ/ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |
| ಹರೀಶ್ | ೨೦ | ಡಿಪ್ಲೋಮಾ | ವಿದ್ಯಾರ್ಥಿ | ತೆ/ಕ | ತೆ/ಕ | ತೆ | ಕ | ಕ | - | ತೆ/ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | ✓ |

೧. ಮನೆ, ೨. ನೆರೆಹೊರೆ, ೩. ಸಂಬಂಧಿಕರು, ೪. ಗೆಳೆಯರು

೫. ಶಾಲೆ, ೬. ಕೆಲಸದ ಸ್ಥಳ, ೭. ಮಾರುಕಟ್ಟೆ ಪ್ರದೇಶ

೮. ಪ್ರಾರ್ಥನೆ, ೯. ಅಪರಿಚಿತರೊಡನೆ, ೧೦. ಟಿ.ವಿ. ನೋಡುವಾಗ

ತೆಲುಗು-ಕನ್ನಡ ದ್ವಿಭಾಷಿಕ ಕುಟುಂಬ-೬

ಜಾತಿ : ಬಲಿಜ (ನಾಯ್ಡು)

ವರ್ಗ : ಮಧ್ಯಮ

ಕುಟುಂಬ : ವಿಭಕ್ತ

ಈ ಕುಟುಂಬದವರ ಸ್ವಂತ ಸ್ಥಳ ಮುಳಬಾಗಿಲು. ಇದು ಆಂಧ್ರದ ಗಡಿ ತಾಲೂಕಾಗಿದ್ದು, ಚಿತ್ತೂರು ಜಿಲ್ಲೆಯ ಪಲಮನೇರು ತಾಲ್ಲೂಕಿಗೆ ಕೇವಲ ೩೦ ಕಿ.ಮೀ. ಅಂತರದಲ್ಲಿದೆ. ಹಾಗಾಗಿ ಮುಳಬಾಗಿಲು ತಾಲ್ಲೂಕಿನ ಹೆಚ್ಚಿನ ಜನರು ತಮ್ಮ ದೈನಂದಿನ ವ್ಯವಹಾರಗಳಲ್ಲಿ ತೆಲುಗನ್ನೇ ಹೆಚ್ಚಾಗಿ ಬಳಸುತ್ತಿದ್ದಾರೆ. ಈ ಕುಟುಂಬದ ಮನೆ ಮಾತು ತೆಲುಗು ಆಗಿದ್ದು, ಹೊರ ಆವರಣಗಳಲ್ಲಿ ಕನ್ನಡವನ್ನು ಬಳಸುತ್ತಿದ್ದಾರೆ. ಕುಟುಂಬದ ಯಜಮಾನ ಖಾಸಗಿ ಶಾಲೆಯೊಂದರಲ್ಲಿ ಉಪಾಧ್ಯಾಯರಾಗಿದ್ದಾರೆ. ಶಾಲಾ ಆವರಣದಲ್ಲಿ ಹೆಚ್ಚಾಗಿ ಕನ್ನಡವನ್ನು ಬಳಸುತ್ತಾರೆ. ಆದರೆ ಮಕ್ಕಳೊಂದಿಗೆ ಸಂಭಾಷಿಸುವಾಗ ತೆಲುಗಿನಲ್ಲಿ ಮಾತಾಡುತ್ತಾರೆ. ತಮ್ಮ ಹೆಂಡತಿಯೊಂದಿಗೆ ಮಾತನಾಡುವಾಗ ಕನ್ನಡದಲ್ಲಿ ಮಾತನಾಡುತ್ತಾರೆ. ಆದರೆ ಮಕ್ಕಳಿಬ್ಬರೂ ತಮ್ಮತಮ್ಮಲ್ಲೇ ಮಾತನಾಡಿಕೊಳ್ಳುವಾಗ ತೆಲುಗು-ಕನ್ನಡದಲ್ಲಿ ನುಡಿಜಿಗಿತಕ್ಕೆ ಒಳಗಾಗುವುದು ಕಂಡುಬಂದಿದೆ. ಮಕ್ಕಳು ಗೆಳೆಯರೊಡನೆ ತೆಲುಗು ಮತ್ತು ಕನ್ನಡ ಎರಡೂ ಭಾಷೆಗಳನ್ನು ಬಳಸುವುದು ಕಂಡುಬಂದಿದೆ. ಕುಟುಂಬದ ಯಜಮಾನರು ತಂದೆ ತಾಯಿ, ಅಣ್ಣಂದಿರು, ನೆಂಟರಿಷ್ಟರು ಮನೆಗೆ ಬಂದಾಗ ತೆಲುಗನ್ನೇ ಹೆಚ್ಚಾಗಿ ಬಳಸುತ್ತಿದ್ದು, ತನ್ಮೂಲಕ ಭಾಷಾಸಂಗೋಪನೆ ಹೆಚ್ಚಾಗಿರುವುದು ಕಂಡುಬಂದಿದೆ. ಮಕ್ಕಳು ತಾಯಿಯೊಂದಿಗೆ ಕನ್ನಡವನ್ನು, ತಂದೆಯೊಂದಿಗೆ ತೆಲುಗನ್ನು ಬಳಕೆ ಭಾಷಾಪಲ್ಲಟ, ನುಡಿಜಿಗಿತ, ನುಡಿಮಿಶ್ರಣ, ಪ್ರಕ್ರಿಯೆಗೆ ಒಳಗಾಗುವುದು ಕಂಡುಬಂದಿದೆ. ಈ ಕುಟುಂಬದವರು ಒಟ್ಟಾರೆಯಾಗಿ ಕನ್ನಡ ತೆಲುಗನ್ನು ಹೊರ ಆವರಣಗಳಾದ ಸಿನಿಮಾ, ಮಾರುಕಟ್ಟೆ, ಸಂತೆ ಮುಂತಾದ ಕಡೆ ಬಳಕೆ ಮಾಡುವ ಪ್ರಕ್ರಿಯೆ ಕಂಡುಬಂದಿದೆ ಕನ್ನಡ ಭಾಷೆಯಲ್ಲಿ ಮಾತು, ಗ್ರಹಿಕೆ, ಓದು, ಬರಹದ ನೆಲೆಗಳಲ್ಲಿ ಈ ಕುಟುಂಬ ಸದಸ್ಯರು ಕೌಶಲ್ಯಗಳನ್ನು ಸಾಧಿಸಿದ್ದಾರೆ. ತೆಲುಗು ಮನೆ ಮಾತಾದರೂ ಹೆಚ್ಚಾಗಿ ಹೊರಗಡೆ ಕನ್ನಡವನ್ನೇ ಬಳಸಲು ಅಪೇಕ್ಷಿಸುತ್ತಾರೆ. ಶಿಕ್ಷಣ ಸಂದರ್ಭದಲ್ಲಿ ಮಕ್ಕಳು ಇಂಗ್ಲಿಶ್‌ನ್ನು ಮಾಧ್ಯಮವಾಗಿ ಕನ್ನಡವನ್ನು ಒಂದು ವಿಷಯವನ್ನಾಗಿ ಓದುತ್ತಿದ್ದು ಸಾಕ್ಷರತೆಯ ನೆಲೆಯಲ್ಲಿ ಕನ್ನಡಕ್ಕೆ ಹೆಚ್ಚಿನ ಒತ್ತು ಕೊಟ್ಟಿರುವುದನ್ನು ಕಾಣಬಹುದು. ಟಿ.ವಿ. ವೀಕ್ಷಣೆ ತೆಲುಗು ಕನ್ನಡದ ಜೊತೆಗೆ ಹಿಂದಿ, ಇಂಗ್ಲಿಶ್ ಚಾನೆಲ್‌ಗಳ ವೀಕ್ಷಣೆಯನ್ನು ಮಾಡುತ್ತಾರೆ(ಕ್ರಿಕೆಟ್, ಕಾರ್ಟೂನ್ ನೆಟ್‌ವರ್ಕ್ ಇತ್ಯಾದಿ ಸಂದರ್ಭದಲ್ಲಿ ಮಾತ್ರ). ಹೀಗಾಗಿ ಈ ಕುಟುಂಬದವರು ತೆಲುಗು-ಕನ್ನಡ ದ್ವಿಭಾಷಾ ಸಂದರ್ಭವನ್ನು ಮೇಲೆ ತಿಳಿಸಿದ ಎಲ್ಲಾ ನೆಲೆಗಳಲ್ಲಿ ನಿಭಾಯಿಸುತ್ತಿರುವುದು ಕಂಡುಬಂದಿದೆ.

| ಸಮಾಜೋಭಾಷಿಕ ಭಿನ್ನಾಂಶಗಳು | | | | ಭಾಷಾಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ಶಿಕ್ಷಣ | ಕಸುಬು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ರವೀಂದ್ರನಾಥ | ೪೬ | ಪದವಿ | ಶಿಕ್ಷಕರು | ತೆ/ಕ | ಕ/ತೆ | ತೆ/ಕ | ಕ/ತೆ | ಕ | ಕ | ಕ/ತೆ | ಕ/ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |
| ಶ್ಯಾಮಲ | ೪೨ | ಪದವಿ | ಶಿಕ್ಷಕರು | ತೆ/ಕ | ಕ/ತೆ | ತೆ/ಕ | ಕ | ಕ | ಕ | ಕ | ಕ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |
| ಧೀರಜ್ | ೧೮ | ಪಿ.ಯು.ಸಿ | ವಿದ್ಯಾರ್ಥಿ | ತೆ/ಕ | ಕ/ತೆ | ತೆ/ಕ | ಕ | ಕ/ತೆ | - | ಕ/ತೆ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |
| ಶ್ರೀಕರ್ | ೧೫ | ೯ನೇ ತರಗತಿ | ವಿದ್ಯಾರ್ಥಿ | ತೆ/ಕ | ಕ/ತೆ | ತೆ/ಕ | ಕ | ಕ/ತೆ | - | ಕ | ತೆ | ಕ | ತೆ/ಕ | ✓ | ✓ | ✓ | ✓ | ✓ | ✓ | ✓ | - |

೧. ಮನೆ, ೨. ನೆರೆಹೊರೆ, ೩. ಸಂಬಂಧಿಕರು, ೪. ಗೆಳೆಯರು

೫. ಶಾಲೆ, ೬. ಕೆಲಸದ ಸ್ಥಳ, ೭. ಮಾರುಕಟ್ಟೆ ಪ್ರದೇಶ

೮. ಪ್ರಾರ್ಥನೆ, ೯. ಅಪರಿಚಿತರೊಡನೆ, ೧೦. ಟಿ.ವಿ. ನೋಡುವಾಗ

**ತೆಲುಗು-ಕನ್ನಡ ದ್ವಿಭಾಷಿಕ ಕುಟುಂಬ ೮**

**ಜಾತಿ** : ಬೆಸ್ತ (ಗಂಗಾಮತ)

**ವರ್ಗ** : ಕೆಳಮಧ್ಯಮ

**ಕುಟುಂಬ** : ಅವಿಭಕ್ತ

| ಸಾಮಾಜಿಕ ಭಿನ್ನಾಂಶಗಳು | | | | ಭಾಷಾಬಳಕೆ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು | ವಯಸ್ಸು | ಕಸುಬು | ಶಿಕ್ಷಣ | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಲಿಂಗ | | | | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ರಮೇಶ | ೪೩ | ಖಾಸಗಿ | ಪದವಿ | ತೆ | ಕತೆ | ತೆ | ಕ | ಕ | ಕ | ಕ | ಕ | ಕ | ತೆ | ✓ | ✓ | ✓ | ✓ | ✓ | ✓ | ✓ | |
| ಸವಿತಾ | ೩೨ | ಮನೆವಾರ್ತೆ | ಪ್ರೌಢ | ತೆ | ಕತೆ | ತೆ | ತೆ | ತೆ | - | - | ತೆ | ತೆ | ತೆ | ✓ | ✓ | ✓ | ✓ | | ✓ | | ✓ |
| ರುಚಿತಾ | ೦೮ | -- | ಪ್ರಾಥಮಿಕ | ತೆ | ಕತೆ | ತೆ | ತೆ | ಕ | - | ಕ | ಕ | ಕ | ತೆ | ✓ | ✓ | ✓ | ✓ | ✓ | - | ✓ | - |
| ಮೋನಿಕಾ | ೦೭ | -- | ಪ್ರಾಥಮಿಕ | ತೆ | ಕೆತ | ತೆ | ತೆ | ಕ | - | ಕ | ಕ | ಕ | ತೆ | ✓ | ✓ | ✓ | ✓ | ✓ | - | ✓ | - |
| ಲಕ್ಷ್ಮಮ್ಮ | ೬೫ | ಮನೆವಾರ್ತೆ | -- | ತೆ | ಕತೆ | ತೆ | ತೆ | ಕ | - | ಕ | ಕ | ಕ | ತೆ | ✓ | ✓ | ✓ | ✓ | - | - | - | - |

೧. ಮನೆ
೨. ನೆರೆಹೊರೆ
೩. ಸಂಬಂಧಿಕರು
೪. ಗೆಳೆಯರು
೫. ಶಾಲೆ
೬. ಕೆಲಸದ ಸ್ಥಳ
೭. ಮಾರುಕಟ್ಟೆ ಪ್ರದೇಶ
೮. ಪ್ರಾರ್ಥನೆ
೯. ಅಪರಿಚಿತರೊಡನೆ
೧೦. ಟಿ.ವಿ.ನೋಡುವಾಗ

ಆಂಧ್ರ ಪ್ರದೇಶದ ಕಡಪ ಕಡೆಯಿಂದ ಸುಮಾರು ಐವತ್ತು ವರ್ಷಗಳ ಹಿಂದೆಯೇ ಈ ಕುಟುಂಬ ಕೋಲಾರಕ್ಕೆ ಬಂದು ನೆಲೆಸಿದೆ. ಈ ಕುಟುಂಬದ ಈಗಿನ ಯಜಮಾನ ತಂದೆ ಆ ರೀತಿ ವಲಸೆ ಬಂದವರು. ಆತ ಈಗಿಲ್ಲ. ಈ ಕುಟುಂಬದ ಯಜಮಾನ ತನ್ನ ವಿಧವಾ ತಾಯಿಯೊಂದಿಗೆ ಕೋಲಾರದ ಗೌರಿಪೇಟೆಯಲ್ಲಿದ್ದಾರೆ. ಈತ ಹತ್ತು ವರ್ಷಗಳ ಹಿಂದೆ ಮದುವೆಯಾದಾಕೆಯ ತವರೂರು ಆಂಧ್ರದ ಕಡಪ. ಇವರಿಗೆ ಇಬ್ಬರು ಹೆಣ್ಣುಮಕ್ಕಳು ಈ ಕುಟುಂಬದ ಯಜಮಾನ ಕೋಲಾರದಲ್ಲಿ ಪ್ರೌಢಶಾಲೆಯವರೆಗೂ ಕನ್ನಡ ಮಾಧ್ಯಮದಲ್ಲೂ ಬಿ.ಕಾಂ. ಪದವಿಯನ್ನು ಇಂಗ್ಲಿಷ್ ಮಾಧ್ಯಮದಲ್ಲೂ ಪೂರೈಸಿದ್ದಾರೆ. ಇವರ ಮನೆಯ ಮಾತು ತೆಲುಗು. ಕುಟುಂಬದ ಯಜಮಾನನಿಗೆ ಕನ್ನಡ ಹಾಗೂ ತೆಲುಗು ಎರಡೂ ಭಾಷೆಗಳಲ್ಲೂ ಭಾಷಾ ಕೌಶಲ್ಯಗಳಾದ ಮಾತು, ಗ್ರಹಿಕೆ, ಓದು, ಬರಹದ ನೆಲೆಗಳಲ್ಲಿ ಸಾಕ್ಷರತೆಯ ಕೌಶಲ್ಯಗಳನ್ನು ಸಾಧಿಸಿದ್ದಾರೆ. ತೆಲುಗು ವಾರಪತ್ರಿಕೆ ಓದುವುದರ ಮೂಲಕ ತೆಲುಗು ಭಾಷಾ

ಸಂಗೋಪನೆ ಮಾಡುತ್ತಿದ್ದಾರೆ. ಹೆಂಡತಿ ಪ್ರೌಢಶಾಲೆಯನ್ನು ಆಂಧ್ರದಲ್ಲೇ ತೆಲುಗು ಮಾಧ್ಯಮದಲ್ಲಿ ಪೂರೈಸಿರುವಾಕೆ. ತೆಲುಗಿನಲ್ಲಿ ಎಲ್ಲ ಸಾಕ್ಷರತೆಯ ಕೌಶಲ್ಯಗಳೂ ಈಕೆಗಿದೆ. ಆದರೆ ಕನ್ನಡವನ್ನು ಮಾತು ಮತ್ತು ಗ್ರಹಿಕೆಕೆಯ ನೆಲೆಯಲ್ಲಿ ಮಾತ್ರ ತಿಳಿದಿದೆ. ಆಕೆಗೆ ಕನ್ನಡದಲ್ಲಿ ಅಷ್ಟೇನೂ ಭಾಷಾ ಸಂಪತ್ತುಗಳಿಸಿಲ್ಲ. ಇವರ ಇಬ್ಬರೂ ಹೆಣ್ಣುಮಕ್ಕಳು ಕನ್ನಡ ಮಾಧ್ಯಮದಲ್ಲಿ ಓದುತ್ತಿದ್ದು ಶಾಲಾ ಆವರಣದಲ್ಲಿ ಕನ್ನಡದಲ್ಲಿ ಸಾಕ್ಷರತೆಯ ಎಲ್ಲ ಕೌಶಲ್ಯಗಳನ್ನು ಸಾಧಿಸಿದ್ದಾರೆ. ಮನೆಯ ಆವರಣದಲ್ಲಿ ತೆಲುಗನ್ನು ಮಾತ್ರ ಮಾತು ಮತ್ತು ಗ್ರಹಿಕೆ ನೆಲೆಯಲ್ಲಿ ಬಳಕೆ ಮಾಡುವುದು ಕಂಡುಬಂದಿದೆ. ಹೆಂಡತಿ ಅಕ್ಕಪಕ್ಕದವರೊಡನೆಯಾಗಲಿ, ಸಾಮಾಜಿಕ ಸಂದರ್ಭಗಳಲ್ಲಾಗಲೀ ಹೆಚ್ಚು ಬೆರೆಯದೇ ಇರುವುದು ಕಂಡುಬಂದಿದ್ದು, ಕೇವಲ ತೆಲುಗನ್ನು ಮಾತ್ರ ಕೌಟುಂಬಿಕ ಆವರಣದಲ್ಲೇ ಮಾಡಿಕೊಂಡು ಬಂದಿರುವುದು ಕಂಡುಬಂದಿದೆ. ತಾಯಿ ಕೇವಲ ತೆಲುಗನ್ನು ಮಾತ್ರ ಬಳಕೆ ಮಾಡುತ್ತಾರೆ. ಇವರಿಗೆ ಕನ್ನಡದ ಯಾವುದೇ ಸಾಕ್ಷರತೆಯ ಕೌಶಲ್ಯಗಳು ತಿಳಿದಿಲ್ಲ. ಕೇವಲ ಮಾತು ಮತ್ತು ಗ್ರಹಿಕೆ ನೆಲೆಯಲ್ಲಿ ಮಾತ್ರ ಕನ್ನಡವನ್ನು ಬಲ್ಲವರಾಗಿದ್ದಾರೆ. ನೆರೆಹೊರೆಯವರೊಡನೆ ಕನ್ನಡದಲ್ಲಿ ವ್ಯವಹರಿಸುವುದು ಕಂಡುಬಂದಿದೆ. ಕುಟುಂಬದ ಎಲ್ಲ ಸದಸ್ಯರು ಸಂಬಂಧಿಕರೊಡನೆ ಬೆರೆಯುವಾಗ ತೆಲುಗನ್ನೇ ಬಳಕೆ ಮಾಡುತ್ತಾರೆ. ಮನೆಯ ಆವರಣದಲ್ಲಿ ಟಿ.ವಿ. ನೋಡುವಾಗ ತೆಲುಗು ಟಿ.ವಿ.ಚಾನೆಲ್‌ಗಳಾದ ಜೆಮಿನಿ, ತೇಜ, ಈ.ಟಿ.ವಿ.ತೆಲುಗು, ಮಾ ಟಿ.ವಿ. ಹಾಗೂ ಸಪ್ತಗಿರಿ ಚಾನೆಲ್‌ಗಳನ್ನು ಮಾತ್ರ ವೀಕ್ಷಿಸುವುದು ಕಂಡುಬಂದಿದೆ. ಎಲೆಕ್ಟ್ರಾನಿಕ್ ಮಾಧ್ಯಮದ ಮೂಲಕ ಈ ಕುಟುಂಬ ತೆಲುಗು ಭಾಷಾ ಸಂಗೋಪನೆ ಮಾಡುವುದು ಕಂಡುಬಂದಿದೆ.

**ತೆಲುಗು-ಕನ್ನಡ ದ್ವಿಭಾಷಾ ಕುಟುಂಬ ೮**

**ಜಾತಿ** : ಗಾಣಿಗ

**ವರ್ಗ** : ಕೆಳವರ್ಗ

**ಕುಟುಂಬ** : ವಿಭಕ್ತ

ಆಂಧ್ರಪ್ರದೇಶಕ್ಕೆ ನಿಕಟ ಗಡಿಭಾಗವಾದ ಮುಳಬಾಗಿಲು ತಾಲ್ಲೂಕಿನ ಮುಡಿಯನೂರು ಬಳಿಯಿರುವ ಹೊಯ್ಯಾನಪಲ್ಲಿ ಈ ಕುಟುಂಬದ ವಾಸಸ್ಥಳ. ಪೂರ್ವಿಕರ ಸಂದರ್ಭದಿಂದಲೂ ಅಲ್ಲೇ ನೆಲೆಸಿರುವ ಈ ಕುಟುಂಬದವರು ಮನೆಯ ಆವರಣದಲ್ಲಿ ತೆಲುಗನ್ನು ಹೆಚ್ಚಾಗಿ ಬಳಕೆ ಮಾಡುತ್ತಾರೆ. ಕುಟುಂಬದ ಯಜಮಾನ ಪ್ರೌಢಶಾಲಾ ಹಂತದವರೆಗೂ ಕನ್ನಡ ಮಾಧ್ಯಮದಲ್ಲಿ ಓದಿ ಕನ್ನಡ ಸಾಕ್ಷರತೆಯ ಎಲ್ಲ ಕೌಶಲ್ಯಗಳನ್ನು ಸಾಧಿಸಿದ್ದಾರೆ. ಆದರೆ ವ್ಯವಸಾಯದಲ್ಲಿ ತೊಡಗಿಸಿಕೊಂಡಿರುವುದರಿಂದ ಕನ್ನಡದ ಬಳಕೆ ಸಾಕ್ಷರತೆಯ ನೆಲೆಯಲ್ಲಿ ಅಷ್ಟಕ್ಕಷ್ಟೇ. ಹೆಂಡತಿ ತೆಲುಗು ಕನ್ನಡ ದ್ವಿಭಾಷಿಕರಾಗಿದ್ದರೂ ತೆಲುಗು ಮತ್ತು ಕನ್ನಡ ಕೇವಲ ಮೌಖಿಕ ನೆಲೆಯಲ್ಲಷ್ಟೇ ಬಳಕೆ ಮಾಡಿತ್ತಿದ್ದು ಅರೆದ್ವಿಭಾಷಿಕರಾಗಿ ಕಂಡುಬರುತ್ತಿದ್ದಾರೆ. ನೆರೆಹೊರೆಯವರೊಡನೆ ತೆಲುಗನ್ನು ಮಾತ್ರ ಬಳಕೆ ಮಾಡುವುದು ಕಂಡುಬಂದಿದೆ. ವ್ಯವಸಾಯ ಇವರಿಗೆ ಕೆಲಸದ ಸ್ಥಳವಾಗಿದ್ದು ಅಲ್ಲೆಲ್ಲಾ ತೆಲುಗನ್ನೇ ಬಳಕೆ ಮಾಡುತ್ತಾರೆ. ಮಗ ಕನ್ನಡ ಮಾಧ್ಯಮದಲ್ಲೇ ಪದವಿ ಮುಗಿಸಿ ಎಂ.ಎಸ್.ಡಬ್ಲ್ಯೂನಲ್ಲಿ ಸ್ನಾತಕೋತ್ತರ ಪದವಿ ಓದುತ್ತಿದ್ದು, ತೆಲುಗನ್ನು ಮೌಖಿಕ ನೆಲೆಯಲ್ಲೂ ಕನ್ನಡವನ್ನು ಮೌಖಿಕ ಸಾಕ್ಷರತೆ ನೆಲೆಗಳೆರಡರಲ್ಲೂ ಬಳಕೆ ಮಾಡಬಲ್ಲವರಾಗಿದ್ದಾರೆ.

| ಸಮಾಜೋಭಾಷಿಕ ಭಿನ್ನಾಂಶಗಳು | | | | ಭಾಷಾಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | ಮಾತು | | ಗ್ರಹಿಕೆ | | ಓದು | | ಬರಹ | |
| ಹೆಸರು/ಲಿಂಗ | ವಯಸ್ಸು | ಕಸಬು | ಶಿಕ್ಷಣ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ಕ | ತೆ | ಕ | ತೆ | ಕ | ತೆ | ಕ | ತೆ |
| ವೆಂಕಟಪ್ಪ ಶೆಟ್ಟಿ | ೫೫ | ವ್ಯವಸಾಯ | ಪ್ರೌಢ | ತೆ | ತೆ/ಕ | ತೆ | ತೆ | ಕ | ತೆ | ತೆ | ತೆ | ತೆ | ತೆ | ✓ | ✓ | ✓ | ✓ | ✓ | - | ✓ | - |
| ಈರಮ್ಮ | ೩೯ | ಗೃಹವಾರ್ತೆ | ಪ್ರಾಥಮಿಕ | ತೆ | ತೆ/ಕ | ತೆ | ತೆ | ಕ | ತೆ | - | ತೆ | ತೆ | ತೆ | ✓ | ✓ | ✓ | ✓ | - | - | - | - |
| ಕಣ್ಣಪ್ಪ ಶೆಟ್ಟಿ | ೨೧ | ವಿದ್ಯಾರ್ಥಿ | ಸ್ನಾತಕೋತ್ತರ | ತೆ | ತೆ/ಕ | ತೆ | ತೆ/ಕ | ಕ | - | - | ತೆ | ಕ | ತೆ | ✓ | ✓ | ✓ | ✓ | ✓ | - | ✓ | - |
| ಗೌರಿ | ೧೯ | ವಿದ್ಯಾರ್ಥಿ | ಪ್ರೌಢ | ತೆ | ತೆ/ಕ | ತೆ | ತೆ/ಕ | ಕ | - | - | ತೆ | ಕ | ತೆ | ✓ | ✓ | ✓ | ✓ | ✓ | - | ✓ | - |

೧. ಮನೆ, ೨. ನೆರೆಹೊರೆ, ೩. ಸಂಬಂಧಿಕರು, ೪. ಗೆಳೆಯರು, ೫. ಶಾಲೆ, ೬ ಕೆಲಸದ ಸ್ಥಳ

೭. ಮಾರುಕಟ್ಟೆ ಪ್ರದೇಶ, ೮. ಪ್ರಾರ್ಥನೆ, ೯. ಅಪರಿಚಿತರೊಡನೆ, ೧೦. ಟಿ.ವಿ. ನೋಡುವಾಗ

## ೨. ತೆಲುಗು-ಕನ್ನಡ ಪಾರಿಭಾಷಿಕ ಕೋಶ

ಕೋಲಾರ ಜಿಲ್ಲೆ ಪರಿಸರದಲ್ಲಿ ತೆಲುಗು ಕನ್ನಡ ಸಂಭಾಷಣೆಯ ಸಂದರ್ಭಗಳು ವಿಶಿಷ್ಟವಾಗಿವೆ. ಈ ಪ್ರದೇಶದಲ್ಲಿ ಪ್ರಾದೇಶಿಕ ಕನ್ನಡ ಭಾಷೆಯ ಮೇಲೆ ಹೆಚ್ಚಿನ ಪ್ರಭಾವ ಬೀರಲು ಕಾರಣವಾಗಿವೆ. ಕನ್ನಡ ಭಾಷಿಕರು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಹೆಚ್ಚಾಗಿ ಈ ತೆಲುಗು ಮಿಶ್ರಿತ ಕನ್ನಡ ಪದಗಳನ್ನು ಉಪಯೋಗಿಸುತ್ತಿರುವುದು ಕಂಡುಬಂದಿದೆ. ಇದೊಂದು ರೀತಿಯಲ್ಲಿ ದ್ವಿಭಾಷಾ ಸ್ವೀಕರಣ (ಬೈಲಿಂಗ್ವಲ್ ಬಾರೋಯಿಂಗ್) ಆಗಿರುವುದು ಕಂಡುಬಂದಿದೆ. ಏಕೆಂದರೆ ಇವು ನುಡಿ ಮಿಶ್ರಣಗಳಾಗಿ ಕಂಡುಬರದೆ ದ್ವಿಭಾಷಾ ಸ್ವೀಕರಣವಾಗಿ ಕಾರ್ಯವೆಸಗುತ್ತಿರುವುದನ್ನು ಇಲ್ಲಿನ ತೆಲುಗು-ಕನ್ನಡ ದ್ವಿಭಾಷಿಕ ಮಾತಿನ ಸಂದರ್ಭದಲ್ಲಿ ಕಂಡುಬರುತ್ತದೆ.

ಇಲ್ಲಿನ ಪದಕೋಶದಲ್ಲಿ ಮೊದಲಿಗೆ ಮೂಲ ತೆಲುಗು ಪದವನ್ನು ನೀಡಲಾಗಿದೆ ನಂತರ ಆ ಮೂಲಪದವು ಧ್ವನಿವ್ಯತ್ಯಾಸಗೊಂಡ ರೀತಿ, ನಂತರ ಕನ್ನಡದ ಬಳಕೆಯ ಸಂದರ್ಭದಲ್ಲಿ ಆ ಪದದ ಪ್ರಯೋಗ ಹೇಗೆ ಬಳಕೆಯಾಗಿದೆ ಎಂಬುದನ್ನು ನಿದರ್ಶನ ಸಹಿತ ದಾಖಲಿಸಲಾಗಿದೆ. ಮಿಕ್ಕಂತೆ ಮೂಲ ತೆಲುಗು ಪದಗಳು ನೇರವಾಗಿ ಬಳಕೆಯಾಗಿದ್ದು, ಅವುಗಳನ್ನು ಹಾಗೆಯೇ ಕನ್ನಡ ಅರ್ಥದ ಸಮೇತ ದಾಖಲಿಸಿದೆ.

**ತೆಲುಗು-ಕನ್ನಡ ಪಾರಿಭಾಷಿಕ ಕೋಶ**

ಅಲ್ಲಂ > ಅಲ್ಲಮ = ಶುಂಠಿ

ಅಲವಾಟು = ವಾಡಿಗೆ, ಅಭ್ಯಾಸ, ಲವನಕ ದಿನಾ ಅದೇ ಅಲವಾಟು ಆಗದೆ

ಅನಾಕಾರಿ > ಅನ್ನೇಕಾರಿ = ಕುರೂಪಿ ಅನ್ನೇಕಾರಿ ಮುಂಡೆ ಯಾವತ್ನಿಂಕ ಕಾಯ್ಕಂಡಿದ್ದಪ್ಪ

ಅಲಗು = ಕೋಪಿಸಿಕೊಳ್ಳು, ಅವಳು ನನ್‌ಮ್ಯಾಗ ಅಲಗಕಂಡವ್ಳೆ

ಅರಟ > ಅರಟು = ಹೊಟ್ಟೆಯಲ್ಲಿ ಹಸಿವಿನ ಉರಿ ಹೊಟ್ಯಾಗ ಅರಟು ಎತ್ಕಂಡದೆ.

ಅರಕುವ > ಅರಕ್ಪ = ಕಡಿಮೆ ಅವನ್ಕೆ ನನ್ನ ಅರಕ್ಪ ಬಿದ್ದಾದೇನೋ ನೋಡು.

ಅವಗೂದಿ ಕಾಯಿ = ಸಣ್ಣ ಗೋಲಿಗಾತ್ರದ ಟೊಮ್ಯೋಟೋ

ಅಬಂಡ = ಭಂಡತನ ಭಲೇ ಅಬಂಡ ಜಾತಿ.

ಆವಲಿಂಚ್ರ > ಆವಳಿಂಪು > ಆವಳುಸು = ಆಕಳಿಕೆ ಯಾಕೋ ಇವತ್ತು ಬಲೇ ಅವಳಿಂಪುಗ್ಳು ಬತ್ತಾವ.

ಅಲಸು = ಸುಸ್ತಾಗು ಮಗುವು ಬಿಸಲಾಗ ತಿರುಗಿ ಅಲಸ್ಯೋಗದೆ

ಆಟುಪೋಟು = ಭಾದೆ, ದುಃಖ ಆಟುಕೂ ಇಲ್ಲ ಪೋಟುಕೂ ಇಲ್ಲ ಕಷ್ಟಕ್ಕೂ ಇಲ್ಲ ದುಃಖಕ್ಕೂ ಇಲ್ಲ ಎಂಬರ್ಥದಲ್ಲಿ.

ಆಕುರಾಯಿ = ಆಕ್ರಾಯಿ = ಅರ ಕತ್ತಿ, ಕುಡುಗೋಲು ಮೊದಲಾದವುಗಳನ್ನು ಹರಿತ ಮಾಡಲು ಬಳಸುವ ಉಪಕರಣ. ಮೂರೇಣು ಆಕ್ರಾಯಿ

ಆತ್ರಗಾಡು > ಆತ್ರಗಾನು = ಆತುರಗಾರ

ಆಡಿಪೋಸುಕೋನು = ನಿಂದಿಸು, ಹಳಿ, ಗೋಳಾಡಿಸು ನಮ್ಮತ್ತೆ ನನ್ನ ಸುಮ್ಮನೆ ಆಡಿಪೋಸ್ಕ್ಯಾಂತಾಳ.

ಆನಪಕಾಯಿ = ಸೋರೆಕಾಯಿ

ಅನಪಕಾಯಿ = ಅವರೆಕಾಯಿ

ಇರುಕು > ಬಿರುಕು ಇರುಬುಗಳೆಲ್ಲಾ ಇರಕಾಗ ಸೇರ್ಕಂಡವೆ

ಇಲ್ಲಟಂ, ಇಲ್ಲರಿಕ > ಇಲ್ಬಕ = ಮಾವನ ಮನೆಯಲ್ಲಿ ಅಳಿಯ ಉಳಿದುಕೊಳ್ಳುವ ಪದ್ಧತಿ ಮಾವನ ಮನ್ಯಾಗ ಇಲ್ಬಕ ಬಿದ್ದವನೆ.

ಇಗಲು = ಆಸೆಬುರುಕತನ, ಬಲೇ ಇಗಲು ನನಮಗನು

ಇಸಕ > ಇಸುಕ = ಉಸುಕು, ಮರಳು

ಇಸುಕು ದಿನ್ನೆ = ಮರಳು ದಿನ್ನೆ

ಇಸುಳ್ಳು > ಈಸುರುಳ್ಳಿ = ಗೆದ್ದಲು (ರೆಕ್ಕೆ ಬಂದಿರುವ)

ಇತ್ತಡಿ > ಇತ್ತಲಿ = ಹಿತ್ತಾಳೆ

ಇಂಚೂ ಮಿಂಚೂ = ಹೆಚ್ಚು ಕಡಿಮೆ ಮಾಡೋ ಕೆಲ್ಸದಾಗ ಇಂಚೂ ಮುಂಚೂ ಆದ್ರೆ ಏನ್ಮಾಡಾಕಾತಾದ.

ಇಕಿಲಿಂಚು > ಎಕ್ಕರಿಸು = ಕಿಸಿ, ಹಲ್ಲುಕಿರಿ ಅಮ್ಮಾ, ಅವ್ನೋಡು ನನ್ನ ನೋಡ್ಕೆಂಡು ಎಕ್ಕರಿಸ್ತಾನ.

ಇಮರಿಕ > ಇಮರು = ಇಂಗು ಅವನ ಕಣ್ಣು ಇಮರ್ರ್ಯೋಗ ನೀರೆಲ್ಲಾ ಇಮರ್ಕೆಂಡದೆ.

ಈಗ = ನೊಣ ಅನ್ನಮ್ಯಾಗೆಲ್ಲಾ ಈಗೆಗ್ಳು ಕುತ್ಕಂತಾವ

ಈಡು = ಸಮ, ಸರಿಸಮಾನ ಅವರಿಬ್ಬರಿಕೂ ಈಡೂ ಜೋಡೂ ಚೆನ್ನಾಗಿದೆ.

ಈತ = ಈಚಲು. ಈತ ಗಿಡ್ದಾಗೆ ಕಲ್ಲು ತೆಗೆಯೋದು. ಈಸಿತ ಈಸಾರಿ, ಈ ಕಿತಾಗಾನ ಸರೀಗ ಓದಿ ಪಾಸಾಗಲ್ಲ ಅಂದ್ರೆ ನಿನ್ನ ಎಮ್ಮೆಗ್ಳ ಮೇಸಾಕ ಆಕ್ತೀನಿ.

ಉಲ್ಲು = ಹಿಟ್ಟು (ರಾಗಿ ಹಿಟ್ಟು, ಗೋಧಿ ಹಿಟ್ಟು ಇತ್ಯಾದಿ)

ಉಡ್ಡೆ = ಗುಡ್ಡೆ

ಊದರಿ = ಹೊಗೆ ಸೊಳ್ಳೆಗಳ್ಳ ಬೇವಿನಸೊಪ್ಪಾಗ ಊದರಿಕ್ಕು

ಉಟ್ಲುಪಂಡಗ = ಉಟ್ಲಾಟ, ಉಟ್ಲು ಹಬ್ಬ

ಉಸುರು ಪೋಸುಕೋನು = ಭಾದಿಸು, ಕಾಟಕೊಡು, ಅಂಗೇ ಅಂಗೆ ನನ್ನ ಉಸುರುಪೋಸಕೆಂತಾನ. ಉಸರಟ್ಕುಕ್ಯಂತಾನ

ಉಸ್ಸೂರಮನು = ಮನಸ್ಸಿಗೆ ನೋವುಂಟುಮಾಡು. ಸಂಕಟಪಡು. ನನಕ ಉಸ್ಸೂರ ಅನ್ಸದ್ರೆ ಅವಳಕ ಒಳ್ಳೇದಾತಾದ?

ಉಡುಮು = ಉಡ

ಉಡಮಪಟ್ಟು = ಉಡದ ಪಟ್ಟು

ಊಗು = ತೊನೆದಾಡು

ಉಲ್ಲಿ > ಉಳ್ಳಿ = ಈರುಳ್ಳಿ, ನೀರುಳ್ಳಿ

ಊಗಿಸಲಾಡು > ಊಗ್ಲಾಡು = ತೂಗಾಡು, ಆ ನಾಯಿ ಹೊಟ್ಟಿಕ ಇಟ್ಟಿಲ್ದ ಊಗ್ಲಾಡುತಾದ.

ಊಕೊನು = ಹ್ಲೂಂಗುಡು

ಊರಕ > ಊರಕೆ = ಸುಮ್ಮನೆ ಊರುಕುಂಟಾವ ಗೀರುಕುಂಟಾವ.

ಊಡಗೊಟ್ಟು > ಊಡ್ಸು > ಊಡ್ಯಾಕು = ಕಳಚಿ ಬೀಳುವಂತೆ ಮಾಡು.

ಊಡಿಚ್ಚು = ಕಳಚು, ಬೀಳಿಸು

ಊನಂ > ಊನ = ಊನ, ಲೋಪ ತನೋನು ತನಕ ಊನ, ಕುಂಟೆತ್ತು ಹೊಲಕ ಊನ.

ಊಪಿರಿಕುಟ್ಟು > ಉಸುರುಕುಟ್ಟು = ಉಸಿರಡುವಾಗ ಹೊಟ್ಟೆ ಅಥವಾ ಎದೆ ಭಾಗದಲ್ಲಿ ನೋಯುವಿಕೆ, ಯಾಕೋ ಎದ್ಯಾಗ ಉಸುರುಕುಟ್ಟು ಇಡ್ಕಂಡಂಗದೆ.

ಉಡುಕು = ಬಿಸಿ ಬಿಸಲಕ ಮೈಯೆಲ್ಲಾ ಉಡುಕ್‌ದ್ದದೆ

ಉತುಕು > ಉದುಕು = ಒಗೆಯುವುದು (ಬಟ್ಟೆ)

ಉತ್ತ = ಬರಪಿ, ಖಾಲಿ

ಉಣುಕು = ಹೊಂಚು, ಊನಿ (ಬೆಕ್ಕು) ಉಣಕಾಕ್ಕಂಡು ಕುಂತದೆ

ಊನಿ = ಬೆಕ್ಕು ಊನಿ ಒಯ್ತ್ಂದ್ರೆ, ಉಲಿ ಓಯ್ತು ಅನ್ನೋ ಜನ

ಊರ್ಗಾಯಿ = ಉಪ್ಪಿನಕಾಯಿ, ಊಟಕ್ಕಿಲ್ದ ಊರ್ಗಾಯಿ ಇದ್ದಂಗೆ

ಉರುವು = ಸ್ವಲ್ಪ ಸುಮ್ಮನೆ ನಂತಾಗ ಉರುವೇ ಇಲ್ಲ ಆಮ್ಯಾಲ ನನ್ನ ಉರುವು ಇಕ್ಕದಾನ?

ಎಂಗಿಲಿ ಮೆತುಕುಲು >ಎಂಜಲು ಮೆದುಕುಲು = ಎಂಜಲನ್ನ, ಎಂಜಲುಕೂಳು

ಎಂಡ = ಬಿಸಿಲು

ಎಂಡಗಟ್ಟು > ಸೆಟ್ಟುಗಟ್ಟು > ಸೆಟ್ಲುಗಳ್ಟು = ಹೊಟ್ಟೆಗಿಲ್ಲದಂತೆ ಮಾಡು

ಎಂದ್ರಕಾಯಿ > ಎಡಿ, ನಳ್ಳಿ ಎಂದ್ರಕಾಯ್ಕ ಕೊಬ್ಬು ಬಂದ್ರೆ ಬಕ್ಯಾಗ ಇರ್ತಾದ?

ಎಟ್ಟೆ = ಹೆಣ್ಣು ಎಟ್ಟೆಕೋಳಿ

ಎಕ್ಕು = ಹತ್ತು. ಬಸ್ಸೆಕ್ಕು ಬಂಡೆಕ್ಕು

ಎಚ್ಚೆ > ಎಚ್ಚಿಗೆ = ಹೊಗಳಿಕೆ ಸುಮ್ಮೀರಮ್ಮ ಸಾಕು ಏನು ಎಚ್ಚೆ ಹೇಳ್ಕಂತಿಯಾ?

ಎಕ್ಕಸೆಕಂ > ಎಗಸೇಕ > ಎಗತಾಳಿ = ಅಪಹಾಸ್ಯ, ಕುಚೋದ್ಯ. ನಂತಾಗ ಎಗಸೇಕ ಮಾತುಗ್ಳು ಆಡ್‌ಬ್ಯಾಡ ನನ್‌ತಾಗೇ ಎಗತಾಳಿ ಮಾತಾಡ್ತಾಳೇ ಅವಳು

ಎಕ್ಕಿರಿಂಚು > ಎಕ್ಕರಿಸು = ಅಣಕಿಸು

ಎಕ್ಕುವ ತಕ್ಕುವ = ಹೆಚ್ಚು ಕಡಿಮೆ

ಎಗುರಲಾಡು > ಎಗರಲಾಡು = ಕುಣಿದಾಡು ನಮ್ಮಾಯಿ ಕುಶೀಕ ಅಂಗೇ ಅಂಗೆ ಎಗರ್ತ್ಯಾಡ್ತದ.

ಎಗ್ಗುಸಿಗ್ಗು > ಎಗ್ಗುಪೆಗ್ಗು = ನಾಚಿಕೆ ಅವಳ್ಕ ಎಗ್ಗುಪೆಗ್ಗು ಏನನ್ನಾ ಅದ್ಯಾ?

ಎದವ = ಮತಿಗೇಡಿ. ಆ ಎದವನ್ನ ಕಟ್ಕಂಡು ಏನ್ಮಾಡೋದು?

ಎಮುಕ > ಎಮಕೆ = ಮೂಳೆ

ಎಲಕರಾಜ = ಇಲಿಗಳ ರಾಜ

ಏಟಿ = ನದಿಕಾಲುವೆ ಅಂಗೇ ಮುಂದುಕ ಓತಾ ಓತಾ ಏಟಿ ಅಡ್ಡ ಬಂತು.

ಏಟಿ ಗಡ್ಡೆ = ನದಿಯ ದಡ

ಒಂಪುಸೊಂಪು = ಮೈಮಾಟ

ಒದಗು = ಹೆಚ್ಚಾಗು, ಸಮೃದ್ಧಿಯಾಗು

ಒನಗೂಡು = ನೆರವೇರು ಇವತ್ತುಕ ಎಲ್ಲಾ ಕೆಲ್ಸ ಒನಗೂಡ್ತು

ಓಟಿ = ಒಡೆದ, ಬಿರುಗು ಬಿಟ್ಟ ಓಟಿ ಮಡಕೆ

ಕಂದಿ = ತೊಗರಿ ಕಿರಾಕ್ ಶೆಟ್ಟಿಣ್ಣೋ! ಕೆಜಿ ಕಂದಿ ಬ್ಯಾಳೆ ಕೊಡು

ಕಂಪ > ಕಂಪೆ = ಮುಳ್ಳಿನ ಕೊಂಬೆ, ಮುಳ್ಳುಪೊದೆ ಅವನ ಮಾರ್ಕ್ಯ ಕಂಪ್ಯಾಕ.

ಕಂಗಾರು > ಗಾಬರಿ

ಕಲಕುಂಡ > ಕಲ್ದೀರ = ಸುಮ್ಮನೆ ಏನೂ ಮಾತಾಡ್ದೀರ ಕಲ್ದೀರ ಕೂತವ್ನೆ.

ಕಂದಿನ > ಕಂಜನ = ಕೀಲೆಣ್ಣೆ ಬಂಡಿ ಚಕ್ರ ಕೂಗೋದೇನ್ಕಂದ್ರೆ ಕಂಜನಕ (ಲಂಚ ಕುರಿತು)

ಕರಕ್ಕಾಯಿ = ಅಳಲೇಕಾಯಿ

ಕಚ್ಚೆ = ಕೋಪ ಬಲೇ ಕಚ್ಚೆನನಮಗ್ನು

ಕರಿವೇಪ > ಕರೇಪಾಕು = ಕರಿಬೇವು

ಕಟ್ಟುಬಟ್ಟ = ಉಟ್ಟಬಟ್ಟೆ

ಕಟ್ಟುಬಡಿ > ಕಟ್ಟುಬೋಡಿ = ಕೂಡಿಕೆ ಮದುವೆ

ಕಟ್ಲಪಾಮು = ಮಂಡಲ ಹಾವು, ನೂಲುಕಟ್ಲಾವು

ಕಸರೆ = ಕಹಿ, ಕೋಪ ಕಾಕರ ಕಾಯಿ ಬಲೇ ಕಸರೆ; ಅವ್ನತಾಗ ಮಾತಾಡಬೇಡ, ಅವನು ಬಲೇ ಕಸರೆ

ಕಡುಪಾತ್ರಂ > ಕಡುಪಾತ್ರ = ಹೊಟ್ಟೆಪಾಡು ಅವನ ಕಡಪಾತ್ರಕ ಅವನು ಬೇರೆ ಪಕ್ಕ (ಊರಿಗೆ) ಹೋದ್ರೆ ಇವ್ನಕ್ಯಾಕ?

ಕಡಗೋಟಿ = ಕಡೆಯವನು ಆ ರಾಜನ್ನ ಏಳಾಳು ಪೈಕಿ ಇವ್ನೇ ಕಡೆಗೋಟ್ಯೋನು

ಕಲಗು > ಕುಡಿತಿ > ಕುಡಿತೆ = ಕಲಗಚ್ಚು

ಕಲಗೂರ = ಬೆರಕೆಸೊಪ್ಪು

ಕಾನೆ = ಗದ್ದೆ

ಕಾಕರಕಾಯಿ = ಹಾಗಲಕಾಯಿ

ಕಾನಗಕಾಯಿ = ಹೊಂಗೆ ಕಾಯಿ

ಕಾನುಗ ಮಾನ = ಹೊಂಗೆ ಮರ

ಕಲ್ಲು = ಹೆಂಡ

ಕಣ್ಣು ಕೆಸರು = ಹೊಟ್ಟೆಕಿಚ್ಚು

ಕೀಸರಬಾಸರ = ಗಲಿಬಿಲಿ/ಅರ್ಥವಾಗದ ಹಾವು ಮರೆಕ್ಕತಾ ಇದ್ದಂಗೆ ವ್ಯಾಲಿದ್ದ ಅಕ್ಕಿಗಳು ಕೀಸರು ಬಾಸುರನ ಹೊಯ್ಕಂಡವು.

ಕುಂದೇಲು > ಕುಂದಿಲಿ = ಕಾಡಿನಲ್ಲಿರುವ ಮೊಲ

ಕುಡುಮು = ಕಡಬು ಕುಡುಮುಗ್ಳು ತಿನ್ನಂತೆ ನಡಿ.

ಕುದುರು = ಕುಂದಣಿಗೆ

ಕುಮಿಲಿ > ಕುಮುಲು = ಕುಮಲಿ, ಕನಲಿ ಒಳಗೊಳಗೆ ಭಾದೆಪಡು

ಕುಮ್ಮು = ತಿವಿ

ಕುಳ್ಳುಪೋತು > ಕುಲ್ಲುಪೋತು = ಅಸೂಯಾಪರ, ಹೊಟ್ಟೆಕಿಚ್ಚಿನವ ಕುಲ್ಲುಪೋತುರಾಮ

ಕೂರಾಕು = ಸೊಪ್ಪು, ಸೊಪ್ಪಿನ ಪಲ್ಯ

ಕೊಂಪಮುಂಚು = ಕೊಂಪೆ ಮುಳುಗಿಸು, ಮೋಸಮಾಡು

ಕೊದ್ದಿ > ಕೊದ್ದಿಗ = ಸ್ವಲ್ಪ

ಕೊಮ್ಮು = ಕೊಂಬು

ಕೊಯಿಗೂರ = ಹರವೆಸೊಪ್ಪು, ಕೀರೆಸೊಪ್ಪು

ಕೊರುಕು = ಕಚ್ಚು

ಕೊರ್ರು = ರಂಧ್ರ, ತೂತು ಶ್ಯಾಲೆ ಕೊರ್ರು ಬಿದ್ದೋಗದೆ.

ಕೊಲಿಮಿ = ಕುಲುಮೆ

ಕೋತಿಕೊಮ್ಮಚ್ಚಿ = ಮರಕೋತಿಯಾಟ

ಕೋಗೀರು = ಜಗಳ ನನ್ನ ಮ್ಯಾಗೇನು ನೀನು ಕೋಗೀರು ಮಾಡೋದು

ಕೊನೇರು > ಕೋನೇರಿ = ಕಲ್ಯಾಣಿ, ಪುಷ್ಕರಣಿ

ಕೂಲು = ಬೀಳು, ಹಾಳಾಗು

ಕೂಲ್ಹೋಗು = ಹಾಳಾಗೋಗು

ಕೊಂಡ ಮಾಮ್ಡಿ = ಬೆಟ್ಟದ ಮಾವು

ಕೊಂಟಿ = ಚುಚ್ಚುಮಾತು ಇಂತ ಕೊಂಟೆ ಮಾತುಗ್ಳು ಹೇಳು ಅಂದ್ರೆ ಹೇಳ್ತೀಯಾ!

ಗಟ್ಟೆಕ್ಕು > ಗಡ್ಡೆಕ್ಕು = ಅವ್ನು ಇಸ್ಕೊಲು ಗಡ್ಯೆಕ್ಕುಲ್ಲ

ಗಮ್ಮನುಂಡು = ಗಮ್ಮನಿರು, ಸುಮ್ಮನಿರು

ಗಬಕ್ಕುನ = ಸರಕ್ಕನೆ

ಗಪ್ಪಾಲು = ಹರಟೆ

ಗನ್ನೇರು = ಕಾಣಗಿಲೆ

ಗಡ್ಡಪಾರಿ = ಗಡಾರಿ

ಗದಗು > ಕತಕು = ಎಂಜಲು ತಿನ್ನು, ಕಳಪೆತಿನ್ನು, ದಂಡಪಿಂಡ

ಗನಿಮ > ಗೆನಿಮೆ = ಏರಿ, ದಿಂಡು, ದಿಣ್ಣೆ

ಗಸಾಲು > ಗಸಗಸಾಲು = ಗಸೆಗಸೆ

ಗಸಪೋಸುಕೋನು = ಆಯಾಸದಿಂದ ಏದುಸಿರು ಬಿಡು ಗಸೆಪೋಸ್ಕೆಂಡು
ಓದಿ ಬತ್ತನ.

ಗಮಲು = ಸುವಾಸನೆ ಗಮತಿಗೆ

ಗಾಂಡ್ಲ = ಗಾಣಿಗ

ಗಾಬು = ಧೂಳು

ಗಾಬುಗಸ್ಸ = ಆತುರಾತುರವಾಗಿ

ಗಾಜುಲು = ಬಳೆಗಳು

| | | |
|---|---|---|
| ಗಿಂಜು | = | ಹಲ್ಲುಬಿಡು ಮಂಜು ಹಲ್ಲುಗಿಂಜು, ಹಲ್ಲುಗಳು ಗಿಂಜಕಂಡು ನಿಂತವ್ನೆ |
| ಗಿಟಕ | = | ಕೊಬ್ಬರಿಗಿಟುಕು, ಕುಳ್ಳು |
| ಗುಡ್ಡಿ | = | ಕುರುಡಿ |
| ಗುಡ್ಡೋೞಡು > ಗುಡ್ಡೋೞನು | = | ಕುರುಡ |
| ಗುಬ್ಬೊಟ್ಟು | = | ಹಗುರಾದ ಹೊಟ್ಟು |
| ಗುಡ್ಡಿತಾಬ್ಲಿ | = | ಕಣ್ಣು ಕುರುಡಾದ ಆಮೆ |
| ಗುಡ್ಡಿಕೊಕ್ಕರೆ | = | ಸಣ್ಣಜಾತಿಯ ಕೊಕ್ಕರೆ |
| ಗಿನ್ನೆ | = | ಬಟ್ಟಲು |
| ಗುಂಜು > ಗುಂಜಲಾಡು | = | ಎಳೆದಾಡು |
| ಗುಂಡೆ | = | ಗುಂಡಿಗೆ |
| ಗುಕ್ಕು | = | ಉಸಿರು. ಗುಕ್ಕಾಡುಲಪ್ಪ |
| ಗುತ್ತಿ | = | ಗೊಂಚಲು |
| ಗೋಂಡ್ರಕಪ್ಪ | = | ಗೂಳಿಕಪ್ಪೆ, ಗಂಟುಮೈಯುಳ್ಳ ದೊಡ್ಡಕಪ್ಪೆ |
| ಚಂಪು > ಸಂಪು | = | ಕೊಲ್ಲು ನಿನ್ನ ಸಂಪ್ಯಾಕ್ತೀನಿ |
| ಚಕ್ಕಿಲಿಗಿಲಿ | = | ಕಚಗುಳಿ |
| ಚವಕ > ಸವಕ | = | ಅಗ್ಗ ನಿಂಕೇನು ನಾನು ಅಷ್ಟೊಂದು ಸವಕ್ಕ ಆಗೋದ್ನಾ |
| ಚಿಂಪಿರಿ > ಸಿಂಪಿರಿ | = | ಕೆದರಿದ ಸಿಂಪ್ರೆಂಕ್ಟಮ್ನು ಬತ್ತಾವ್ನೆ. |
| ಚಿನುಕು > ಸಿನುಕು | = | ಮಳೆ ಹನಿ ಮಧ್ಯಾಹ್ನಂಕ ಸಿದುಕುಗ್ಳು ಬೀಳ್ತಾವೆ |
| ಚಿನುಗು > ಸಿನುಗು | = | ಹರಿದ ಬಟ್ಟೆಲ್ಲ ಸಿನುಗ್ಹೋಗದೆ |
| ಚಿಲುಮು > ಚಿನುಮು > ಸಿಲುಮು | = | ಕಾಲುಜು, ತುಕ್ಕು, ಕಬ್ಬಿಣ ಸಾಮಾನೆಲ್ಲಾ ಸಿಲುಮು ಇಡುದೋಗದೆ. |
| ಚೀಮಿಡಿ > ಸೀಮಡಿ | = | ಸಿಂಬಳ, ಗೊಣ್ಣೆ ಸೀಮಡಿ ಸಿದ್ದಗಾನು ಬತ್ತಾವ್ನೇ. |

| | |
|---|---|
| ಚಾದು > ಸಾದು | = ಸಾದುಬೊಟ್ಟು. ಹಣೆಗೆ ಇಡುವ ಕಾಡಿಗೆ ಜಾಲಿಕಾಯಿಂದ ಮಾಡಿದ್ದು. |
| ಚೂರಕತ್ತಿ > ಸೂರಗತ್ತಿ | = ಚೂರಿ |
| ಚೆಂಪ > ಚೆಂಪೆ | = ಕೆನ್ನೆ, ಗಲ್ಲ ಚೆಂಪೆಗಳ್ಕ ಬಿಟ್ನಂದ್ರೆ ಅಂಗೇ ಗುಬ್ಬುಗಳು ಅದ್ರೋಗಬೇಕು |
| ಕಂಸಾಲಿ | = ಅಕ್ಕಸಾಲಿಗ |
| ಚೂರಕತ್ತಿ >ಸೂರಗತ್ತಿ | = ಚೂರಿ |
| ಚೆಂಪ > ಚೆಂಪೆ | = ಕೆನ್ನೆ, ಗಲ್ಲ |
| ಚೆಕ್ಕ > ಚೆಕ್ಕು | = ಕಡಿ, ಕತ್ತರಿಸು |
| ಚೆತ್ತ > ಸೆತ್ತೆ | = ಕಸ |
| ಚೆಮಟ > ಶಮಟೆ > ಶಮಟಕಾಯಿ | = ಸೆಕೆ, ಬೆವರು, ಬೆವರುಸಾಲೆ |
| ಚೆವಿಟಿ > ಶೌಟಿ | = ಕಿವುಡು |
| ಚೇದ ಬಾವಿ > ಸೇದ ಬಾಯಿ | = ಸೇದುವ ಬಾವಿ |
| ಚೇನು > ಸೇನು | = ಹೊಲ |
| ಚೇಪು > ಸೇಪು | = ಮೊಲೆಯಿಂದ ಹಾಲಿನ ಸ್ರವ |
| ಚಿಂದರವಂದರ > ಚಿಂದರಪಂದರ | = ಚೆಲ್ಲಾಪಿಲ್ಲಿ |
| ಚಿಂಚು > ಸಿಂಚು | = ಹರಿ, ತುಂಡುಮಾಡು |
| ಚಿಂತಕಾಯಿ | = ಹುಣಸೇಕಾಯಿ |
| ಚಿಂತಗಿಂಜು | = ಹುಣಸೇಬೀಜ |
| ಚಿಂತತೊಕ್ಕು | = ಹುಣಸೇತೊಕ್ಕು |
| ಚಿಂತಾಕು | = ಹುಣಸೆ ಎಲೆ |
| ಚಿಂತಾಲ್ಲು | = ಮಂಡಿಕೆಲಸಕ್ಕೆ ಬಳಸುವ ದೊಡ್ಡ ತಕ್ಕಡಿ |
| ಚಿಂಪು > ಸಿಂಪು | = ಹರಿ |

ಚಾಕಲಿ > ಸಾಕಲು = ಅಗಸ

ಚಿಟ್ಲು > ಸಿಟ್ಲು = ಬಿರಿ, ಸೀಳು, ಕಾಯಿಗೈಲ್ಲಾ ಗಿಡದಾಗೆ ಸಿಟ್ಲತಾವ

ಚುಪ್ಪನಾತಿ > ಸುಪ್ಪನಾತಿ = ಗಯ್ಯಾಳಿ, ಶೂರ್ಪನಖಿ ತದ್ಭವ

ಚೆದುರು ಮದರು = ಅಲ್ಲಲ್ಲಿ ಚೆದುರಿದಂತೆ ಮಾಡು

ಚೆರಕು > ಸೆರಕು = ಕಬ್ಬು

ಚೆವಿಪೋಟು > ಕಿವಿಪೋಟು = ಕಿವಿನೋವು

ಚೆವಿಲೋಪೂವು = ಕಿವಿಯಲ್ಲಿ ಹೂವು. ವ್ಯಂಗ್ಯವಾಗಿ ದಡ್ಡ ಎಂದರ್ಥ.

ಚೇಟು > ಸೇಟು = ಕೇಡು, ಅವನಕ ಸೇಟು ಬಂದ್ಪೋಗ

ಚೇದು > ಸೇದು = ಕಹಿ

ಕಂಗಾರು = ಗಾಬರಿ

ಅಲಸು = ಜಡತ್ವ, ಸುಸ್ತಾಗು

ಅಲ್ಲಂ = ಶುಂಠಿ

ಕೆಂಬಾರು = ಮೂಡಲ ಕೆಂಪು, ಹಾಗೆಯೇ ಸಂಜೆಗೆಂಪು

ಕೊಂಗು = ಸೆರಗು

ಕೊಡದ್ನ = ಮೀನಿನ ಒಂದು ಬಗೆ

ಕೊಡಮೆ = ಕೂಣಿ

ಕೊಮ್ಮು = ಕೊಂಬು

ಕಲ್ದೀರ = ಸುಮ್ಮನೆ (ಕಲಕುಂಡ) (ಕದಲದೆ ಇರು)

ಕಾನೆ = ಗದ್ದೆ

ಕೌರು = ಕಚ್ಚು (ಹಲ್ಲಿನಿಂದ ತುರುಬುವಂತೆ ಕಚ್ಚು)

ಕುದ್ತೆ = ಕಲಗಚ್ಚು

ಕುಂದ್ಲಿಕೊಮ್ಮು = ಒಂದು ಬಗೆಯ ಔಷದಿಯ ಸಸ್ಯ (ಕ್ಯಾಕ್ಟಸ್ ಜಾತಿಗೆ ಸೇರಿದ್ದು)

| | | |
|---|---|---|
| ಕುಡಿ | = | ಸುಳಿ (ಗಿಡಕ್ಕೆ ಸಂಬಂಧಿಸಿದಂತೆ) |
| ಕರೇಪಾಕು | = | ಕರಿಬೇವು |
| ಕಂಪ | = | ಮುಳ್ಳುಪೊದೆ, ಮುಳ್ಳಿನ ರಂಬೆ |
| ಕುಂದ್ಲಿ | = | ಮೊಲ |
| ಗಿರ್ಲು | = | ಮೀನಿನ ಒಂದು ಬಗೆ (ಮುಂದೆ ಮುಳ್ಳಿರುವ ಮೂತಿಯಲ್ಲಿ) |
| ಗದುಕು | = | ತಿನ್ನು (ವ್ಯಂಗ್ಯಾರ್ಥದಲ್ಲಿ) |
| ಗಡಪಾರಿ | = | ಗಡಾರಿ, ಹಾರೆ |
| ಗಂಗೆದ್ದು > ಗಂಗೆತ್ತು | = | ಕೋಲೆಬಸವ |
| ಗಾಜುಲು | = | ಬಳೆಗಳು |
| ಗಮಲು > ವಾಸನೆ | = | ಗಮಲೆಣ್ಣೆ |
| ಗುಡ್ಡಿ | = | ಕುರುಡು |
| ಗುಡ್ಡೋನು | = | ಕುರುಡ |
| ಗುಬ್ಬೊಟ್ಟು | = | ಹಗುರಾದ ಹೊಟ್ಟು |
| ಗುಡ್ಡಿತಾಬ್ಲಿ | = | ಕಣ್ಣು ಕುರುಡಾದ ಆಮೆ |
| ಗುಡಿಕೊಕ್ಕರೆ | = | ಸಣ್ಣ ಜಾತಿಯ ಕೊಕ್ಕರೆ (ತೂಗಡಿಸುತ್ತಾ ನಿಂತಿರುತ್ತದೆ) |
| ಗಿಂಜು | = | ನಿಡುಹಲ್ಲವು ಹಲ್ಲುಗಿಂಜಿಕೆಂಡು ನಿಂತವ್ನೆ |
| ಗುಂಜು | = | ಎಳೆ |
| ಗುಟ್ಟ | = | ಗುಡ್ಡ |
| ಗುವ್ವ | = | ಪಕ್ಷಿ |
| ಗುಮ್ಮೆ | = | ಬೇರಿನ ಸಮೇತ (ಬೇರುಗಳ ಗುಂಪು) |
| ಗಿನ್ನೆ | = | ಬಟ್ಟಲು |
| ಗಿರಾಂಗಟ್ಟು > ಹಂಕು | = | ಅನ್ನ ನೀರಿಲ್ಲದೆ ಹಸಿವಿನಿಂದ ಕಂಗೆಡು, ಅನ್ನಕ್ಕಾಗಿ ಹಂಬಲಿಸು |

| | | |
|---|---|---|
| ಗಿತ್ತ | = | ಕುಳ್ಳ |
| ಗೆನಿಮೆ | = | ಬದು |
| ಗೆನ್ನೀರು | = | ಕಣಗಿಲೆ |
| ಗೊಡ್ಲಿ | = | ಕೊಡಲಿ |
| ಗೊಡ್ಲಕ್ಕಿ | = | ಮರಕುಟಿಗ/ಗೊಡಲಿ ಹಕ್ಕಿ |
| ಗೋರು | = | ಉಗುರು |
| ಗೋರ್ಕೊ | = | ಬಳಿದುಕೋ/ಬಾಚಿಕೊ |
| ಗೋಕು | = | ಬಾಚು/ಬಳಿ |
| ಗೊಣ್ಣೆ | = | ಸಿಂಬಳ/ಸೀಮಡಿ ಸೀಮಡಿ ಸಿದ್ದಿ |
| ಗೊಂಗ್ಡಿ | = | ಮಳೆಯಿಂದ ರಕ್ಷಿಸಿಕೊಳ್ಳು, ಗೋಣಿಚೀಲವನ್ನು ಒಳಭಾಗಕ್ಕೆ ತುರುಕಿ ಹಾಕಿಕೊಳ್ಳಲು ಮಾಡಿದ ಬಗೆ |
| ಗ್ಯಾಕೆ | = | ಗ್ಯಾಮಾಳೆ-ಕೊರಳು/ಗಂಟಲಿನ ಭಾಗ |
| ಗೌಳಿ | = | ಹಲ್ಲಿ |
| ಗಬ್ಬು | = | ವಾಸನೆ-ಗಬ್ಬುಗಿಡ |
| ಗೊತ್ತು | = | ಗೂಟ |
| ಗಡಿ | = | ಅಗಳಿ |
| ಚಂಪೆ | = | ಕೆನ್ನೆ |
| ಚಕ್ರಬಾರಿ | = | ಹುಲ್ಲು ಒರೆಯುವ ಸಾಧನ |
| ಚಕ್ರಬಾನಿ | = | ನೀರೆತ್ತುವ ಸಾಧನ (ರಾಟೆಯಿಂದ) |
| ಚಿಗುರಾಕು | = | ಚಿಗುರೆಲೆ |
| ಚೇಬದಲು > ಕೈಬದಲು | = | ಸಾಲ, ಕೈಗಡ |
| ಚೇಮಂತಿ > ಶ್ಯಾಮಂತಿಗೆ | = | ಸೇವಂತಿಗೆ |

